# ಅರಿಕೆ

ಹಿಂದಿನ ವರ್ಷ ಪ್ರಕಟವಾಗಬೇಕಾಗಿದ್ದ 'ಮುಳ್ಳಿನ ಹಾಸಿಗೆ' ಕಾದಂಬರಿ ಇದೀಗ ಕನ್ನಡ ಜನಗಳೆದುರಿಗಿದೆ.

ಈ ಕಾದಂಬರಿಯಲ್ಲಿ ಸಮಾಜದ ಕಣ್ಣಿನಲ್ಲಿ ಹೆಣ್ಣಿನ ಮೇಲಾಗುತ್ತಿರುವ ದೌರ್ಜನ್ಯ, ದಾಯಾದಿ ಮಾತ್ಸರ್ಯ ಮತ್ತು ವ್ಯಕ್ತಿ ದುರಭ್ಯಾಸದ ಪರಮಾವಧಿಯನ್ನ ಮುಟ್ಟಿದಾಗ ಆಗುವ ಹಾನಿ ಮುಂತಾದವುಗಳ ಮೇಲೆ ಬೆಳಕನ್ನು ಚೆಲ್ಲಲು ಯತ್ನಿಸಿದ್ದೇನೆ. ಹಾಗೆ ಚಿತ್ರಿಸುವಾಗ ಎಷ್ಟರಮಟ್ಟಿಗಿನ ಯಶಸ್ಸನ್ನು ಪಡೆದಿದ್ದೇನೆಯೋ ತಿಳಿಯದು! ಅದು ಸಹೃದಯ ವಿಮರ್ಶಕರಿಗೂ ವಾಚಕವರ್ಗಕ್ಕೂ ಸೇರಿದೆ.

ಈ ಕಾದಂಬರಿ ಒಂದು ಸುಲಕ್ಷಣ ರೂಪ,ಕಳೆ ಹಾಗೂ ಬೆಳಕನ್ನು ಕಾಣಲು ಪೂಜ್ಯ ಎಚ್. ಎಂ. ಶಂಕರನಾರಾಯಣರಾಯರು ಕಾರಣರಾಗಿದ್ದಾರೆ ಅವರ ತುಂಬು ಹೃದಯದ ಹರಕೆ, ಸಪ್ರೇಮ ನನ್ನನ್ನು ಸಾಹಿತ್ಯ ರಂಗದಲ್ಲಿ ಕಾಲಿಡುವ ಸಾಹಸಕ್ಕೆ ಪ್ರೇರೇಪಿಸಿತು. ಇಲ್ಲದಿದ್ದರೆ ನಾನು ಒಂದು ಹೆಜ್ಜೆಯನ್ನೂ ಸಹ ಮುಂದಿಡಲು ಅನುವಾಗುತ್ತಿದಿಲ್ಲ. ಇದಕ್ಕಾಗಿ ಅವರಿಗೆ ನಾನು ತುಂಬ ಋಣಿಯಾಗಿದ್ದೇನೆ.

ಇಲ್ಲಿ ತತ್ಕಾಲೀನ ಕವಿಗಳಾದ ಶ್ರೀ ಜಿ. ಎಸ್. ಶಿವರುದ್ರಪ್ಪ ಮತ್ತು ವರಕವಿ ವಾಗೀಶರ ಕವನಗಳನ್ನು ಪ್ರಾಸ್ತವಿಕವಾಗಿ ಉಪಯೋಗಿಸಿಕೊಂಡಿದ್ದೇನೆ. ಈ ಈರ್ವರು ಕವಿಗಳಿಗೆ ನನ್ನ ಅನಂತ ಧನ್ಯವಾದಗಳು.

'ಮುಳ್ಳಿನ ಹಾಸಿಗೆ' ಕಾದಂಬರಿ ಯಾರನ್ನೂ ಸೂಚಿಸಿ ಬರೆದುದಲ್ಲ. ವಾಸ್ತವಿಕ ಪ್ರಪಂಚದಲ್ಲಿನ ಘಟನೆಗಳ ಆಧಾರದ ಮೇಲೆ ಕಲ್ಪನೆಯ ಕುಸುರಿ ಕೆಲಸ ನಡೆಯಿಸಿ ಹೆಣೆದ ಕಥೆಯಿದು.

ಕೊನೆಯದಾಗಿ, ಇದು ಮುದ್ರಣಗೊಳ್ಳಲು ಸಹಾಯಕರಾದ ಶ್ರೀ ಜಿ. ಎಚ್. ರಾಮರಾಯರಿಗೂ, ಅಂದವಾದ ಮುಖ ಚಿತ್ರ ಬರೆದುಕೊಟ್ಟು ಕಾದಂಬರಿಯ ಚೆಲುವನ್ನು ಹೆಚ್ಚಿಸಿರುವ, ಶ್ರೀ ಎಮ್. ಎಸ್. ಚಂದ್ರಶೇಖರ್ ಅವರಿಗೂ ನನ್ನ ಅನಂತ ವಂದನೆಗಳು:

ಬೆಂಗಳೂರು
೬ ಸೆಪ್ಟೆಂಬರ್ ೧೯೫೪

ಪಂ. ಮೂ. ರುದ್ರಮುನಿಸ್ವಾಮಿ

# ಅರ್ಪಣೆ

ಬಾಳ ಹೊಸತಲಿನಲ್ಲಿಯೇ ಕಣ್ಮರೆಯಾದ

ಸಹೋದರಿ ನಾಗರತ್ನಮ್ಮನಿಗೆ

# ಮುಳ್ಳಿನ ಹಾಸಿಗೆ

## ೧

ಸವಾರಿ ಬಂಡಿ ನಿಧಾನವಾಗಿ ಸಾಗಿತ್ತು. ದಿನಮಣಿ ತನ್ನ ಪ್ರಖರತೆಯನ್ನು ಇನ್ನೂ ತೋರಿಸಿದ್ದಿಲ್ಲ. ದಾರಿಯಲ್ಲಿ ಕಲ್ಲುಗಳು ತುಂಬಾ ಇದ್ದುದರಿಂದ ಬಂಡಿ ಕೊಂಚ ಅಲುಗಾಡುತ್ತಿತ್ತು. ಆಗಾಗ ಕುಳಿರ್ಗಾಳಿ ಬೀಸುತ್ತಿತ್ತು. ಕುರಿಗಳ ಹಿಂಡೊಂದು ರಸ್ತೆಯ ಮೇಲೆ ಹಾದು ಹೋಯಿತು. ಬಂಡಿ ಹೊಡೆಯುತ್ತಲಿದ್ದ ವೀರಪ್ಪ "ಗುರುಪಾದ, ಏ! ಹಾಲ" ಎನ್ನುತ್ತ ಎತ್ತುಗಳ ಬೆನ್ನು ಚಪ್ಪರಿಸಿ ಉತ್ಸಾಹದಿಂದ ಗಾಡಿ ಬಿಟ್ಟ. ಅವನು ಆಗಲೇ, "ಸ್ವಾಮಿ, ಒಂದು ಬೀಡಿಕೊಡಿ" ಎಂದು ಶಿವಣ್ಣಯ್ಯನವರನ್ನು ಕೇಳಿದ. ಶಿವಣ್ಣಯ್ಯ ಬೀಡಿ ಕೊಡುತ್ತಾ, "ಅಲ್ಲೋ ಒಂದು ಘಂಟೆಗೆ ಎಷ್ಟು ಬಾರಿ ಕುಡಿಯುತ್ತೀಯೆ. ತುಂಬಾ ಕೆಟ್ಟ ಚಟ!" ಎಂದರು.

ಅವರ ಮಾತಿಗೆ ಲಕ್ಷ್ಯ ಕೊಡದವನಂತೆ ನಟಿಸುತ್ತ ವೀರಪ್ಪ ಹೇಳಿದ :

"ಹಾವೇರಿ ಬೀಡಿಯೆಂದು ಕಾಣುತ್ತೆ. ಉದ್ದನೆಯ ಬೀಡಿಗಳು !" ಅವನೇ ಕೊಂಚ ಸಮಯ ತಡೆದು, ಮುಖವನ್ನು ಆಕಾಶದ ಕಡೆಗೆ ಮಾಡಿ, ಹೊಗೆಯನ್ನು ನಿಧಾನವಾಗಿ ಬಿಡುತ್ತ, "ಮಾಲಕ್ಕಾರ ವಿಚಾರ ಏನಾಯಿತು ಸ್ವಾಮಿ? ನಿಮ್ಮ ಹಳೆಯ ಬೀಗರು ಅದಾರೇಂತ ಅಂದಿದ್ದಿರಲ್ಲಾ ಬಂದಿದ್ದಾರೆಯೆ?" ಎಂದ. ಇವನ ಪ್ರಶ್ನೆಯನ್ನು ಕೇಳಿ ಶಿವಣ್ಣಯ್ಯ ಗುರುಶಾಂತಶಾಸ್ತ್ರಿಗಳ ಕಡೆಗೆ ಹುಸಿ ನಗುತ್ತ ಹೇಳಿದರು:

"ಅದೇ ವಿಚಾರ ಇಷ್ಟು ಹೊತ್ತಿನವರೆಗೆ ಮಾತನಾಡುತ್ತಾ ಇದ್ದಿದ್ದು. ನಿನಗೆ ಬೀಡಿ ಕಡೆಗೆ ಲಕ್ಷ್ಯ ಅಲ್ಲವೆ? ನೋಡಿ ಶಾಸ್ತ್ರಿಗಳೆ, ನನಗೆ ಇಂತಹ ಯಾವ ಅಭ್ಯಾಸವೂ ಇಲ್ಲ. ಇವನ ಜೊತೆ ಪ್ರಯಾಣ ಹೊರಟರೆ ಇವನಿಗಾಗಿ ಒಂದು ಕಟ್ಟು ಕೊಂಡಿಟ್ಟುಕೊಂಡು, ಹಿತಮಿತವಾಗಿ ಕೊಡುತ್ತೇನೆ" ಶಾಸ್ತ್ರಿಗಳು ನಶ್ಯ ಏರಿಸುತ್ತಾ "ಅಲ್ಲವೆ, ಅಭ್ಯಾಸಬಲ. ಕಲಿತ ಚಾಳಿ ಕಲ್ಲು ಹಾಕಿದರೂ ಹೋಗೋಲ್ಲಾಂತರಲ್ಲಾ ಹಾಗೆ. ಆ ಸಚ್ಚಿದಾನಂದನೇ

ಕಾಪಾಡಬೇಕು" ಎಂದರು.

ಎತ್ತಿನ ಬಂಡಿ ನಿಧಾನವಾಗಿ ಸಾಗಿತ್ತು. ಎತ್ತುಗಳು ದಾರಿ ನಡೆದೂ ನಡೆದು ಸಾಕಾಗಿದ್ದವೆಂದು ಕಾಣುತ್ತದೆ. ಎಡಗಡೆಯ ಎತ್ತು ಸಗಣಿ ಹಾಕಿತು. ವೀರಪ್ಪ ಬಲಗಡೆಯ ಎತ್ತಿನ ಬಾಲವನ್ನು ಮುಟ್ಟುತ್ತಿದ್ದ ಹಾಗೆಯೇ ಅದು ಹಾರಿ ಹೋಯಿತು. ಅದನ್ನು ಹಿಂಬಾಲಿಸಿ ಎಡಗಡೆಯ ಎತ್ತು ಕೂಡ ವೇಗವಾಗಿ ಹೊರಟಿತು.

"ಈ ಬಂಡಿ ಧಡಕಿನಿಂದ ಮೈಯೆಲ್ಲಾ ನೋವಾಗಿದೆ. ಮನೆಗೆ ಹೋಗುತ್ತಲೆ, ಎಣ್ಣೆ ಹಚ್ಚಿಸಿಕೊಂಡು, ಬಿಸಿ ನೀರು ಹಾಕಿಸಿಕೊಂಡರೆ ಚೆನ್ನಾಗುತ್ತಲ್ಲವೆ ಶಾಸ್ತ್ರಿಗಳೆ?"

"ಒಂವೆ ಹಂಡೆನೀರು ಮಾಲನಿಗೆ ಕಾಯಿಸಲಿಕ್ಕೆ ಹೇಳಿಬಿಡಿ. ಒಂದು ಪಾವು ಎಣ್ಣೆ ಕಾಯಿಸಿಬಿಟ್ಟು, ಸರಿಯಾಗಿ ತಿಕ್ಕಿಸಿಕೊಂಡು ಬಿಸಿ ಬಿಸಿ ನೀರು ಸುರಿಯಿಸಿಕೊಂಡು ಮಲಗಿದವರು ಸೂರ್ಯೋದಯದ ಮೇಲೆ ಏಳುವಿರಂತೆ. ನಿಮ್ಮ ಆಯಾಸ ಹೇಳದೆ ಕೇಳದೆ ಓಡಿ ಹೋಗುತ್ತೆ" ಎಂದರು ಗುರುಶಾಂತಶಾಸ್ತ್ರಿಗಳು,

ಶಿವಣ್ಣಯ್ಯನವರು ಶಾಸ್ತ್ರಿಗಳ ಮಾತನ್ನು ಕೇಳಿಯೂ ಕೇಳದವರಂತೆ ಕುಳಿತುಕೊಂಡಿದ್ದರು. ಅವರ ಮನಸ್ಸು ಯಾವುದೋ ರಹಸ್ಯ ವಿಚಾರದತ್ತ ಸುಳಿಯುಹತ್ತಿತ್ತು. ಅದಕ್ಕೆಂದೇ ಶಾಸ್ತ್ರಿಗಳು ಹೇಳಿದರು :

"ಏನೋ ಕುರಿತಾಗಿ ಯೋಚನೆ ಮಾಡುತ್ತಿದ್ದೀರಲ್ಲ; ನಸ್ಯ ಬೇಕೇನು? ತೆಗೆದುಕೊಳ್ಳಿ. ಒಂದು ಸಾರಿ ಸೇವನೆ ಮಾಡಿದರೆ ಯಾವ ವಿಚಾರವನ್ನಾದರೂ ಸರಳರೀತಿಯಿಂದ ಬಿಡಿಸಬಹುದಲ್ಲ. ಅಂತಹ ಒಂದು ದಿವ್ಯಶಕ್ತಿಯನ್ನು ಈ ಜ್ಞಾನಚೂರ್ಣ ಪಡೆದಿದೆ" ಎಂದರು. ಅವರ ಮಾತಿನಲ್ಲಿ ಹಾಸ್ಯ ತುಂಬಿ ತುಳುಕಾಡುತ್ತಿತ್ತು.

"ಮತ್ತೇನು ವಿಶೇಷವಿಲ್ಲ. ಆದರೆ ನಮ್ಮ ಅಳಿಯ ಹಾಗೆ ಮಾಡಬಹುದೇಂತ. ನಿಮಗೊಪ್ಪಿತೆ? ತಾವು ವೈದಿಕ ವಿಶಾರದರಿದ್ದೀರಲ್ಲಾ, ಕೊಂಚ ಹೇಳಿ."

"ಯಾರಿಗೆ ತಾನೆ ಒಪ್ಪುತ್ತೆ ಕಣ್ರಿ. ಸಂಪ್ರದಾಯಗಳನ್ನು ಅಂಧ ಶ್ರದ್ಧೆಯೆಂದು ಹೊಡೆದೋಡಿಸುವ ಈ ನಾಗರಿಕರನ್ನು ಕಂಡರೆ ನನಗೆ ಹಿಡಿಸುವುದಿಲ್ಲ. ಅಲ್ಲಾ....ನಿಶ್ಚಯಕಾರ್ಯವಾದ ಮೇಲೆ ಅದೆಂತು

ಹೆಣ್ಣು ಕೊಡುವುದಿಲ್ಲವೆಂದು ಬಿಡಿಸಿಕೊಂಡರು? ನನಗೂ ಕೇಳಿ ತುಂಬಾ ಆಶ್ಚರ್ಯವಾಯಿತು."

ವ್ಯಾಕುಲದೃಷ್ಟಿಯಿಂದ ಶಿವಣ್ಣಯ್ಯ ಬಂಡಿಯ ಹೊರಗೆ ನೋಡುತ್ತಿದ್ದರು. ಶಾಸ್ತ್ರಿಗಳ ಮಾತನ್ನು ಕೇಳಿ, ತಮ್ಮ ಅಳಿಯನ ಮೇಲೆ ಕೋಪ ಕಾರಂಜಿಯಂತೆ ಉಕ್ಕಿ ಬಂದಿದ್ದ ಕಾರಣ ಶಿವಣ್ಣಯ್ಯ ಮಾತನಾಡದೆ ಮೌನವ್ರತವನ್ನು ಆಚರಿಸುತ್ತಿದ್ದರು. ಕೋಪದ ಉಷ್ಣಾಂಶ ಸ್ವಲ್ಪ ಇಳಿದ ಮೇಲೆ "ನಾನಂತೂ ನಿರ್ಧಾರ ಮಾಡಿಬಿಟ್ಟಿದ್ದೇನೆ. ಅದೇ ಹುಡುಗನಿಗೆ ನಮ್ಮ ಮಾಲಿನಿ ಕೊಟ್ಟುಬಿಡಬೇಕೂಂತ. ನಮ್ಮ ಅಳಿಯ ನಿಶ್ಚಯ ಕಾರ್ಯವನ್ನು ನಮ್ಮ ಸಮ್ಮುಖದೆದುರಿಗೆ ಮಾಡಿಸಿಕೊಂಡುಬಿಟ್ಟ ಪ್ರಕರಣಕ್ಕಾಗಿ ಈ ಸಂಬಂಧ ಬೆಳೆಸುವ...." ಅವರ ಮಾತು ಇನ್ನೂ ಮುಗಿಯುವ ಮುಂಚೆಯೇ ಶಾಸ್ತ್ರಿಗಳು ನಡುವೆ ಬಾಯಿಹಾಕಿ "ಹಾಗಾದರೆ ಗೋತ್ರ ಹೊಂದುತ್ತೇನು?" ಎಂದನು.

"ಓಹೋ, ಹೊಂದದೇನು! ನಮ್ಮ ಗೋತ್ರ, ನಮ್ಮ ಅಳಿಯನ ಗೋತ್ರ ಮತ್ತು ಆ ಹುಡುಗ ಉಮಾಪತಿಯ ಗೋತ್ರ ಭಿನ್ನಭಿನ್ನವಾಗಿವೆ. ಕಾರಣ ಹೊಂದದೇನು? ಒಟ್ಟಿನಲ್ಲಿ ಬಡವರು. ಹುಡುಗ ಸ್ವಲ್ಪ ಪುಡಾರಿ ಅಂತೆ ನೋಡುವವರಿಗೆ ಕಾಣುತ್ತಾನೆ; ಅದು ಹೇಗೇ ಇರಲಿ, ಕೊಡಬೇಕೆಂದು ನಿರ್ಧಾರ ಮಾಡಿದ್ದೇನೆ ಅಲ್ಲದೆ ಆ ಹುಡುಗನೂ ಒಂದು ಬಾರಿ ಬಂದು 'ನೀವೇ ನನ್ನ ತಾಯಿತಂದೆ. ಮನೆಯ ಹೊಣೆಯೆಲ್ಲ ನನ್ನಮೇಲೆ ಬಿದ್ದಿದೆ. ಅವರೇನೋ ಸಂಬಂಧ ನಡೆಸಲು ಒಪ್ಪಲಿಲ್ಲ, ನೀವಾದರೂ ಕೊಟ್ಟು ಉಳಿಸಿರಿ' ಎಂದ. ಇದನ್ನು ಕೇಳಿ ನಮ್ಮ ಗಂಗಮ್ಮನ ಮನಸ್ಸು ಕರಗಿತು. 'ಹೂಂ, ಆಗಲಿ ನೋಡುವ' ಎಂದು ಹೇಳಿದೇನೆ. ಹುಡುಗನೇನೋ ಮೊದಲಿಂದ ಗೊತ್ತಿದ್ದಾನೆ. ನಮ್ಮ ಅಳಿಯನ ಮನೆಗೆ ಕನ್ಯಾ ನೋಡಲಿಕ್ಕೆ ನಾನೇ ಕರೆದುಕೊಂಡು ಹೋಗಿದ್ದೆ. ಈಗ ನಿಮ್ಮ ಅಭಿಪ್ರಾಯ ತಿಳಿಯಬೇಕೆಂತಲೇ ಕರೆದುಕೊಂಡು ಬಂದದ್ದು. ಅಲ್ಲದೆ ತಾವೂ ನಮ್ಮೂರತ್ತ ಬರದೇಬಹಳ ದಿವಸಗಳಾಗಿತ್ತು—ಎಂದು ಬಂಡಿ ಕೊಂಡು ಬಂದೆ."

ಶಾಸ್ತ್ರಿಗಳ ಮನಸ್ಸು ಡೋಲಾಯಮಾನವಾಯಿತು. ಶಿವಣ್ಣಯ್ಯ ಅಪೇಕ್ಷಿಸಿದ್ದ ವರ ತುಂಬಾ ಚಾರಿತ್ರ್ಯಹೀನನೆಂದು ಗೊತ್ತಿತ್ತು. ಈ

ಹಿಂದೆ ತಿಮ್ಮಲಾಪುರದಲ್ಲಿ ಉಪಾಧ್ಯಾಯನಾಗಿದ್ದಾಗ, ಊರಿನವರಲ್ಲಿ ಎರಡು ಪಂಗಡಗಳನ್ನು ಹುಟ್ಟಿಸಿ, ಜಗಳ ಕಾಯಲು ಪ್ರೋತ್ಸಾಹಿಸಿದ ವ್ಯಕ್ತಿಯೆಂದು ಗೊತ್ತಿದ್ದರೂ ಅದನ್ನು ಮುಚ್ಚಿಡುತ್ತಾ "ಪರವಾಗಿಲ್ಲ. ನೆಂಟಸ್ತನ ಬೆಳಸಿ. ಆ ಸಚ್ಚಿದಾನಂದನೇ ಇದ್ದಾನೆ. ನಿಮ್ಮ ಹುಡುಗ ರನ್ನೂ ಕೇಳಿ ನೋಡಿ" ಎಂದರು ಶಿವಣ್ಣಯ್ಯನವರು ಉಮಾಪತಿ ಯೊಂದಿಗೆ ರಕ್ತಸಂಬಂಧ ಬೆಳೆಸಬೇಕೆಂಬ ಆಸೆ ಪುಷ್ಟಿತವಾಗಿ ಹೋಗಿದ್ದು ದರಿಂದ, ಅವರು ಬೇಡವೆಂದು ಹೇಳಲು ನಿರಾಕರಿಸಿದರು.

ಶಿವಣ್ಣಯ್ಯನವರು ಮಾತು ಮುಂದುವರಿಸುತ್ತ, "ಆಗಲೇ ಕೇಳಾ ಗಿದೆ ಶಾಸ್ತ್ರಿಗಳೆ. ರೇಣುಕ ಪ್ರಸಾದ ಒಪ್ಪಲಲ್ಲ. 'ಅವನ ಮುಖ ಲಕ್ಷಣ ಗಳು ನೋಡಿದರೇನೇ ಗೊತ್ತಾಗುತ್ತೆ. ಮುಖದಲ್ಲಿ ಒಂದು ಕಳೆ ಇಲ್ಲ. ಬೀಡಿ ಸೇದಿ ಸೇದಿ ತುಟಿಗಳು ಕಪ್ಪಗಿಟ್ಟಿವೆ. ಆ ಕೆಳಗಿನ ತುಟಿಯ ಮಧ್ಯದಲ್ಲಿ ಬಿಳುಪು ಬೇರೆ ಆಗಿದೆ. ಅವನ ನಡಿಗೆಯೋ ಧೂತ್!' ಎಂದ. ಏನು ಮಾಡುವುದೆಂತ ತಿಳಿಯದಾಗಿದೆ. ಗಂಗಮ್ಮನಿಗೂ ನಮ್ಮ ಗುರುಮೂರ್ತಿಗೂ ಇಷ್ಟ ಉಂಟು. ಆ ಗ್ರಹಚಾರ ನೋಡಿ. ಗಂಗಮ್ಮ ಮೊನ್ನೆ ಏನು ಮಾಡಿದಳು ಗೊತ್ತೆ? ಈ ಹುಡುಗನಿಗೆ ಕೊಡದಿದ್ದರೆ ಊಟ ಮಾಡುವುದಿಲ್ಲ—ಎಂದು ಕುಳಿತುಬಿಟ್ಟಿದ್ದಳು. ಅವಳು ತಬ್ಬಲಿ ಮಕ್ಕಳನ್ನು ಸಾಕಿದವಳು. ಆ ಹುಡುಗರನ್ನು ಬೆಳಸಿ, ವಿದ್ಯಾ ಕಲಿಸಿದ ವಳೆಂದು ಅವಳ ಮಾತನ್ನು ಮಾನ್ಯ ಮಾಡಬೇಕಾಗಿದೆ"

ಅಷ್ಟು ಹೊತ್ತಿಗಾಗಲೇ ಹಳ್ಳಕ್ಕೆ ಬಂಡಿ ಬಂದು ಮುಟ್ಟಿತು. ಹರಿಹರ ಇನ್ನೂ ಎಂಟು ಮೈಲಿಗಳ ದೂರದಲ್ಲಿತ್ತು. ಸಮಯವೇರಿದ್ದರಿಂದ ಹಳ್ಳದಲ್ಲಿ ಸ್ನಾನಮಾಡಿಕೊಂಡು, ಊಟವಾದನಂತರವೇ ಹೊರಡಬೇಕಾಗಿತ್ತು.

ವೀರಪ್ಪ ಸಾಮಾನುಗಳನ್ನು ಇಳಿಸಿ, ಅಲ್ಲಿ ಇಲ್ಲಿ ಬಿದ್ದಿದ್ದ ದಂಟು, ಒಣಗಿದ ಪುರಳಿ, ಕಟ್ಟಿಗೆಗಳನ್ನು ಆರಿಸ ಹೊರಟನು. ಶಿವಣ್ಣಯ್ಯ ಸ್ನಾನಮಾಡಿ ತ್ವರ್ಯದಲ್ಲಿ ಲಿಂಗಾರ್ಚನೆ ತೀರಿಸಿಕೊಂಡು ಅನ್ನಕ್ಕೆ ಇಟ್ಟರು. ಶಾಸ್ತ್ರಿಗಳು ಮೈಲಿಗೆ ಬಟ್ಟೆಗಳನ್ನು ಮಡಿ ಮಾಡಿಕೊಂಡು ಬರಲು ವೀರಪ್ಪ ಹಳ್ಳಕ್ಕೆ ಹೋಪದ್ದಾಯಿತು. ಇನ್ನೂ ಶಾಸ್ತ್ರಿಗಳ ಪೂಜೆ ಮುಗಿಯಲು ಎರಡು ಘಂಟೆಗಳ ಕಾಲ ಬೇಕಾಗಿತ್ತು. ಪಾರಾಯಣ, ಸಹಸ್ರನಾಮಾ ವಳಿ, ಮಂಗಳ ಇತ್ಯಾದಿ ಅನುಷ್ಠಾನ ಮಾಡುವುದಕ್ಕೆ ತುಂಬ ಹೊತ್ತು

ಹಿಡಿಯುತ್ತಿತ್ತು. ಅವರಿಗೆ ಮಡಿಯಿಂದಲೇ ಅಡಿಗೆಯಾಗಬೇಕಾಗಿತ್ತು. ಆದ್ದರಿಂದ ಸುಳಿಗಾಳಿ ಬೀಸುತ್ತಿದ್ದರೂ ಅಂಗಿ ಹಾಕಿಕೊಂಡು ಅಡಿಗೆ ಮಾಡುವಂತಿದ್ದಿಲ್ಲ. ಶಾಸ್ತ್ರಿಗಳು ಒಳ್ಳೆಯ ಕರ್ಮನಿಷ್ಠ ಜಂಗಮರು. ಇನ್ನೊಬ್ಬರ ಮನೆ ತಟ್ಟೆಯಲ್ಲೂ ಸಹ ಊಟಮಾಡುತ್ತಿದ್ದಿಲ್ಲ. ಹೊರಗಡೆ ಸಂಚಾರ ಹೊರಟರ ಬೆಳ್ಳಿ ತಟ್ಟೆ, ಕ್ರಿಯಾಭಸ್ಮ ಘಟ್ಟಿ ಇತ್ಯಾದಿಯೊಂದಿಗೇ ಹೊರಡಬೇಕು.

ಅನ್ನ ಮುಗಿಯುವ ಹೊತ್ತಿಗೆ ಸರಿಯಾಗಿ ವೀರಪ್ಪನೂ ಸ್ನಾನ ಮಾಡಿ ಬಂದ. ಅವನನ್ನು ಹಾಲು, ಮೊಸರು ತರಲಿಕ್ಕೆ ಪಕ್ಕದ ಹಳ್ಳಿಗೆ ಓಡಿಸಿದರು. ಇವರಿತ್ತ ಹುಳಿಗಿಟ್ಟು ಬಿಸಿಲು ಕಾಯಿಸುವುದಕ್ಕೆ ಪ್ರಾರಂಭಿಸಿದರು.

ಹಳ್ಳಿಯಿಂದ ಹಾಲು ಮೊಸರು ಬಂದರೂ, ಶಾಸ್ತ್ರಿಗಳ ಶಿವಪೂಜೆ ಮುಗಿದಿರಲಿಲ್ಲ. ಶಿವಣ್ಣಯ್ಯನವರ ಹೊಟ್ಟೆ, ತುಂಬ ಹಸಿದಿತ್ತು. ಅಂತೆಯೇ ಹೊತ್ತು ಏರಿತ್ತು. ವರ ಕೊಡುವ ದೇವರನ್ನು ಕಾಯುವಂತೆ ಶಿವಣ್ಣಯ್ಯ ಅವರ ಮುಖವನ್ನೆ ನೋಡುತ್ತಿದ್ದರು. ಶಾಸ್ತ್ರಿಗಳ ಹೊಟ್ಟೆಯಲ್ಲೂ ಕಸಿವಿಸಿ ಪ್ರಾರಂಭವಾಯಿತೋ ಅಥವಾ ಪೂಜೆಯೇ ಮುಗಿಯಿತೋ, "ಅಡಿಗೆ ಮುಗಿಯಿತೇನಪ್ಪ, ಊಟ ಮಾಡೋಣವೇ?" ಎನ್ನುತ್ತಿದ್ದಾಗಲೇ "ಅಡಿಗೆ ಮುಗಿದು ಘಂಟೆ ಎರಡು ದಾಟಿತು; ಧ್ವಂಸ ಮಾಡುವುದೊಂದೇ ಬಾಕಿ" ಎಂದು ಶಿವಣ್ಣಯ್ಯನವರು ನಗುತ್ತ ಹೇಳಿದರು.

ಇವರು ಬೀಡು ಬಿಟ್ಟಿದ್ದ ಸನ್ನಿವೇಶ ಬಹು ರಮಣೀಯವಾಗಿತ್ತು. ಸುತ್ತಲೂ ಹಚ್ಚ ಹಸಿರು. ಅಲ್ಲಲ್ಲಿ ಮಾವಿನ ಗಿಡಗಳ ತಣ್ಣೆಳಲು. ಇನ್ನೂ ಸ್ವಲ್ಪ ಮುಂದಕ್ಕೆ ದಡಪೇರಿಯ ಮೇಲೆ ಹೋದರೆ ಗುಡಿಸಿಲುಗಳು. ಗುಡಿಸಿಲುಗಳ ಸುತ್ತಲೂ ಒಣ ಹುಲ್ಲು. ಮಳೆ ಇಲ್ಲದೆ ಕಂಗೆಟ್ಟು ಒಣಗಿಹೋದ ಹುಲ್ಲು ಅದು. ಮಾವಿನ ಗಿಡದಡಿ ಇವರೆಲ್ಲರೂ ಊಟಮಾಡಿದರು. ಶಾಸ್ತ್ರಿಗಳಿಗೆ ಸನ್ನಿವೇಶ ಬಹು ಸೊಂಪೆನ್ನಿಸಿತು. ನಿದ್ದೆಯೂ ಬಂತು. ಇವರ ಪಕ್ಕದ ಮರದಡಿ ಇನ್ನಾರೋ ಊಡಮಾಡುತ್ತಿದ್ದರು. ಓರ್ವ ಸುಶ್ರಾವ್ಯವಾಗಿ ಹಾಡು ಹೇಳುತ್ತಿದ್ದ.

ಶಿವಣ್ಣಯ್ಯ ಹಳ್ಳದ ನೀರನ್ನು ನೋಡುತ್ತ ಕುಳಿತುಕೊಂಡಿದ್ದರು. ಹಳ್ಳ ಈಗ ಮಳೆ ಇಲ್ಲದೆ ಇಳಿದು ಹೋಗಿತ್ತು. ಆ ಹಳ್ಳ ತುಂಬಿ ಬಂದರೆ

ಸುತ್ತಮುತ್ತಲಿನ ಹೊಲಗಳೆಲ್ಲಾ ನೀರಿನಲ್ಲಾಗುತ್ತವೆಯಂತೆ. ಅಂತೂ ದೊಡ್ಡ ಹಳ್ಳ. ಹಳ್ಳದ ನೀರಿನಿಂದ ಕೆಲವು ರೈತರು ಕಪಿಲೆ ಹೊಡೆಯಲು ಅನುಕೂಲ ಮಾಡಿಕೊಂಡಿದ್ದರು.

ವೀರಪ್ಪ ಊಟವಾದ ಮೇಲೆ ಒಂದು ಜೊಂಪು ನಿದ್ದೆಮಾಡಿ ಒಣ ಹುಲ್ಲಿನ ಮೇಲೆ ಹರವಿದ್ದ ಬಟ್ಟೆಗಳನ್ನು ತರಲು ಬೀಡಿ ಸೇದುತ್ತಾ ಹೋದ. ಗುಡಿಸಿಲಿನ ಬಳಿಯಿಂದ ಓರ್ವ ರೈತ ಪಿಕಾಸಿಯೊಡನೆ ಇವನನ್ನು ಬಳಸಿ ಬಂದು, "ಒಂದು ಬೆಂಕಿ ಕಡ್ಡಿ ಇದ್ದರೆ ಕೊಡುವಿರಾ?" ಎಂದ.

ವೀರಪ್ಪ ಬೆಂಕಿಕಡ್ಡಿ ಕೊಟ್ಟ.

"ಯಾವೂರಾಯಿತು ಸ್ವಾಮಿ?"

"ಹರಿಹರ" ಎನ್ನುತ್ತ ಬೀಡಿ ತುಂಡನ್ನು ಒಗೆದು ಎಲ್ಲಾ ಬಟ್ಟೆಗಳನ್ನು ಒಂದೊಂದಾಗಿ ಮಡಿಚಲು ವೀರಪ್ಪ ಪ್ರಾರಂಭಿಸಿದ. ಅವನು ಇನ್ನೂ ಒಂದು ಹೆಜ್ಜೆ ಇಟ್ಟಿರಲಿಲ್ಲ ಆಗಲೇ ಬೆಂಕಿ ಆವರಿಸಿಕೊಂಡಿತ್ತು. ಆ ರೈತ ಇವನೊಂದಿಗೆ "ಏ! ನಿನ್ನ ಮುಂಕು ಒಣ ಹುಲ್ಲು ಬೆಳೆದು ನಿಂತಿದೆಯೆಂದು ನಿನ್ನ ಮಡ್ಡ ಬುದ್ಧಿಗೆ ತಿಳಿಯಲಿಲ್ಲವೆ? ನಮ್ಮ ಗುಡಿಸಲುಗಳಿಗೆ ಬೆಂಕಿ ಹತ್ತಿಸಬೇಕೆಂದು ಎಷ್ಟು ದಿನದಿಂದ ಕಾಯ್ದು ನಿಂತಿದ್ದೆ?" ಎಂದ ಏರಿದ ಧ್ವನಿಯಲ್ಲಿ.

ಆ ವೇಳೆಗೆ ಇನ್ನೊಂದು ಬಂಡಿಯ ಜನ, ಶಾಸ್ತ್ರಿ, ಶಿವಣ್ಣಯ್ಯ—ಎಲ್ಲರೂ ಬಂದು ಮಂತ್ರಮುಗ್ಧರಾಗಿ ನಿಂತರು.

—ಯಾರೂ ಬೆಂಕಿ ಆರಿಸುವ ಪ್ರಯತ್ನಕ್ಕೇ ಹೋಗಲಿಲ್ಲ. ಎಲ್ಲರೂ ಹಾಹಾಕಾರ ಮಾಡುವವರೇ! ಎಲ್ಲರೂ ವೀರಪ್ಪನಿಗೆ ಬೈಯ್ಯುವವರೇ ಇದ್ದರು. ಅವನು ಅವಾಕ್ಕಾಗಿ ನಿಂತು ಬಿಟ್ಟಿದ್ದ. ಗುಡಿಸಲಿನಲ್ಲಿದ್ದ ಜನಗಳೂ ಗುಂಪುಕೂಡಿ ಆರಿಸುವ ಗೊಡೆವೆಗೆ ಹೋಗದೆ ಪ್ರೇಕ್ಷಕರಂತೆ ನಿಂತಿದ್ದರು. ಆ ಗುಂಪಿನಲ್ಲಿ ಒಬ್ಬ ಹೀಗೆಂದ:

"ಈ ಬೆಂಕಿ ನೀವು ಆರಿಸದಿದ್ದರೆ ನಾವು ಮುನ್ನೋಡುವುದಕ್ಕೆ ಬಿಡುವುದಿಲ್ಲ. ಇದರ ಖರ್ಚು ತೆತ್ತಮೇಲೆ ಹೋಗಬೇಕಾದೀತು." ಇದನ್ನು ಕೇಳಿ ಶಾಸ್ತ್ರಿಗಳು ಕಕ್ಕಾಬಿಕ್ಕಿಯಾದರು. ಪೂಜಾವೇಳೆಯಲ್ಲಿ ಜುಟ್ಟಿನಲ್ಲಿ ಸಿಕ್ಕಿಸಿಕೊಂಡಿದ್ದ ಬಿಲ್ವದಳವನ್ನು ಮುಟ್ಟಿಕೊಳ್ಳುತ್ತಾ ನುಡಿದರು:

"ಎಲ್ಲರೂ ಸುಮ್ಮನೆ ಯಾಕಾಗಿ ನಿಂದಿರುವಿರಯ್ಯಾ. ಛಟ್ಟುಗೂಡಿ

ಆರಿಸಿರಿ. ಹ್ನೂ, ಮಣ್ಣು ಹೊಯ್ಯಿರಿ" ಎಂದು ಧೈರ್ಯ ತುಂಬಿದ ಧ್ವನಿಯಲ್ಲಿ ಉತ್ಸಾಹವಿತ್ತರು. ಮಣ್ಣು ಮಳೆಯಂತೆ ಆ ಬೆಂಕಿಯ ಮೇಲೆ ಬಿದ್ದು, ಅದರ ಪ್ರತಾಪಕ್ಕೆ ಕುಠಾರ ಹಾಕಿತು. ಗುಡಿಸಲೂ ಮತ್ತು ಸಾಮಾನುಗಳೂ ಉಳಿದುವು.

ವೀರಪ್ಪನ ಹಣೆಯಿಂದ ಒಂದು ತೊಟ್ಟು ಬೆವರು ಬಿತ್ತು. ಒಳ್ಳೆಯ ಕೆಲಸ ಮಾಡಿದ್ದ. ನಾವು ಉಳಿಯುವ ಹಾಗೆಯೇ ಇದ್ದಿಲ್ಲ—ಎಂದು ಎಲ್ಲರೂ ವೀರಪ್ಪನಿಗೆ ಅನ್ನುತ್ತಿದ್ದರು. ಅಂತೂ ಆ ಪ್ರಕರಣ ಅಲ್ಲಿಗೆ ಮುಗಿಯಿತು. ಕೊರಳು ಕಟ್ಟೆಯಾದ ಮೇಲೆ ಗಾಡಿ ಪುನಃ ಹೊರಟಿತು.

—ಇನ್ನು ಕೇವಲ ಎಂಟು ಮೈಲಿಗಳು ಮಾತ್ರ ಉಳಿದಿತ್ತು. ಹೊತ್ತು ಮುಳುಗಿ ಚಂದ್ರೋದಯವನ್ನು ಕಂಡನಂತರ ಊರನ್ನು ಮುಟ್ಟಬಹುದೆಂದು ಇವರ ನಿರೀಕ್ಷಣೆ. ಅದಕ್ಕೂ ಮೊದಲು ಮುಟ್ಟುವೆನೆಂದು ವೀರಪ್ಪನ ಉತ್ತರ. ಶಾಸ್ತ್ರಿಗಳು ಮತ್ತೆ ಮಾತಿಗಾರಂಭಿಸಿದರು.

"ರೇಣುಕ ಪ್ರಸಾದ ಯಾವ ಅಭ್ಯಾಸ ಮಾಡುತ್ತಿದ್ದಾನೆ?"

"ಎಸ್.ಎಸ್.ಎಲ್.ಸಿ. ಕಟ್ಟಿದಾನೆ. ಅದೊಂದು ತೇರ್ಗಡೆಯಾಗುತ್ತಲೂ ಬಿಡಿಸಬೇಕೆಂದಿದ್ದೇನೆ. ಆ ಪರೀಕ್ಷೆ ಪಾಸಾಯಿತೆಂದರೆ ಸರ್ಕಾರದವರಿಂದ ಮುದ್ರೆ ಚೀಟಿ ಬಂದಂತೆ. ಎಲ್ಲಾದರೂ ಕೆಲಸಕ್ಕೆ ಪ್ರಯತ್ನಿಸಬಹುದಲ್ಲ!" ಶಾಸ್ತ್ರಿಗಳು ಸ್ವಲ್ಪ ಆಶ್ಚರ್ಯದಿಂದ "ಏಕೆ! ಮುಂದೆ ಕಳಿಸುವುದಿಲ್ಲವೆ?"

ಶಿವಣ್ಣಯ್ಯ ಶುಷ್ಕ ಮನಸ್ವಿಗಳಾಗಿ ಅಂದರು:

"ನನಗೆ ಬಹಳ ತಾಪತ್ರಯ. ಮಾಲಿನಿ ಲಗ್ನ ಬೇರೆ ಈ ವರ್ಷ ಬೆಂಗಡೆ ಬಿದ್ದದೆ. ದುಡಿಯುತ್ತಿರುವನೋ ಒಬ್ಬನು. ಈಗಿನ ಕಾಲದಲ್ಲಿ ಗುರುಮೂರ್ತಿ ಐವತ್ತೈದು ರೂಪಾಯಿ ಹೇಗೆ ಸಾಲುತ್ತೆ? ನಮ್ಮ ಹಳೆಯ ಬೀಗರಿಗೆ ಮಾಲಿನಿ ಕೊಟ್ಟಿದ್ದರೆ ಅವರೇ ವಿವಾಹ ಮಾಡಿಕೊಳ್ಳುತ್ತಿದ್ದರು. ಆ ಹುಡುಗನೂ ಸುಂದರ, ಬಿ.ಎ. ಪದವೀಧರನಿದ್ದಾನೆ. ನಾನು ನಿರ್ಧಾರದ ವೃತ್ತ ಬಿಟ್ಟು ಒಂದಡಿ ಸರಿಯುವವನಲ್ಲ."

"ಸಚ್ಚಿದಾನಂದನೇ ಕಾಪಾಡಬೇಕು. ಏನಕೇನ ಪ್ರಕಾರೇಣ ಪ್ರಸಿದ್ಧಃ ಪುರುಷೋ ಭವೇತ್—ಎಂಬಂತೆ ಯಾವ್ಯಾವರೀತಿಯಿಂದಲೋ ಗೆಯ್ತು ಮಾಡಲು ಹವಣಿಸುತ್ತಿದ್ದಾರೆ. ನಾನು ಹೇಳಿದ ಶ್ಲೋಕದ ಅರ್ಥ

ವನ್ನು ದುರುಪಯೋಗ ಪಡಿಸಿಕೊಳ್ಳುವವರೇ ಹೆಚ್ಚು! ಪರಂತು ಮರ್ಯಾದೆಯಿಂದ ಜೀವನ ಸಾಗಿಸಬೇಕು—ಎಂಬುದನ್ನು ಯಾರು ಅರ್ಥಪೂರ್ಣವಾಗಿ ತಿಳಿದುಕೊಂಡಿರುತ್ತಾರೋ, ಅವರೇ ನಿಜವಾದ ಮಾನವರು."

"ಅರ್ಥಪೂರ್ಣವಾಗಿದೆ ನಿಮ್ಮವಾಣಿ. ಅನುಭವದ ಮಾತು ಸ್ವಾಮಿ ಹಿಂದಿನವರು ಅಂದಕ್ಕೆ ಮಾಡಿಟ್ಟಿಲ್ಲ." ತಲೆಯಲ್ಲಾಡಿಸುತ್ತ ಶಿವಣ್ಣಯ್ಯ ಹೇಳಿದರು.

"ಸಂಜೆ ಹೊತ್ತಿಗೆ ಊರು ತಲ್ಪಿಸಿಬಿಡುತ್ತೇನೆಂಬ ಜಿದ್ದಿನಿಂದ. ಎತ್ತುಗಳನ್ನೇಕೆ ಓಡಿಸಲು ಪ್ರಾರಂಭಿಸಿದೆಯೊ ಮಹರಾಯ. ಮೆಲ್ಲನೆ ಬಿಡು—ಪರವಾಗಿಲ್ಲ. ಎತ್ತುಗಳು ದಣಿದಿದ್ದಾವೆ....ನಮಗೂ ಮೈ ಶೂಲಿ!" ಎಂದು ಶಾಸ್ತ್ರಿಗಳು ಬಾಯಿ ತೆಗೆದರು.

ವೀರಪ್ಪ ಗಾಡಿಯನ್ನು ನಿಧಾನವಾಗಿ ಬಿಟ್ಟ. ಎತ್ತುಗಳ ಘಂಟೆ ನಿನಾದವೂ ಮೆಲ್ಲಗೆ ನಿಂತಿತು. ಈಗ ಮತ್ತೆ ಕಲ್ಲು ರಸ್ತೆ ಪ್ರಾರಂಭವಾಯಿತು. ಬಂಡಿ ಕೂತಿದ್ದವರನ್ನು ಎತ್ತಿ ಎತ್ತಿ ಒಗೆಯುತ್ತಿತ್ತು. ಒಂದೊಂದು ನಾರಿ ಹಾಗೆ ಒಗೆದಾಗ ಶಿವಣ್ಣಯ್ಯ ಮತ್ತು ಶಾಸ್ತ್ರಿಗಳ ಜೀವ ಹೋಗುತ್ತಿತ್ತು.

"ನೀವು ಮೆತ್ತೆ ಹಾಕಿಸಿಕೊಂಡು ಬರದೆ ಪ್ರಮಾದ ಮಾಡಿದಿರಿ"

"ನಿಮ್ಮಲ್ಲೊಂದಿದ್ದರೆ ಕೊಂಡು ಬರುವ ಎಂದೆಣಿಸಿದ್ದೆ. ಬಹಳ ತೊಂದರೆಕೊಟ್ಟ ಹಾಗಾಯಿತು....ಓಹೋ ಇಂದು ಮಾಲಿನಿ ನೋಡಲು ಉಮಾಪತಿ ಬರುತ್ತೇನೆಂದು ಮುನ್ಸೂಚನೆ ಕೊಟ್ಟಿದ್ದ. ಈಗಾಗಲೇ ಬರಲಿಕ್ಕಾಯಿತು. ಇಂದು ತಪ್ಪಿಧರೆ ನಾಳೆ ಬರುವುದು ಖಂಡಿತ"

"ಉಮಾಪತಿಗೆ ಸಂಬಳವೆಷ್ಟು?"

"ಏನೆಲ್ಲ ರೂಪಾಯಿ ಅರವತ್ತು ಇರಬಹುದು"

"ನಾನು ಎಲ್ಲೊ ನಲವತ್ತು ಬರಬಹುದೂಂತ ಮಾಡಿದ್ದೆ. ಅಂತಿದ್ದರೆ ಅದೇಕೆ ನಿಮ್ಮಳಿಯ ಬಿಡಿಸಿಕೊಂಡರು?"

"ನೋಡಿ ಅದೊಂದು ಕಥೆ: ಮೊದಲು ನಾನೇ ಆ ಹುಡುಗನೊಡಗೂಡಿ ಕನ್ಯೆ ತೋರಿಸಿದೆ. ಅವನಿಗೂ ಮನಸ್ಸು ಬಂತು. ಸಂಪ್ರದಾಯದ ಪ್ರಕಾರ ನಮ್ಮಳಿಯ ಕೆಲವರೊಡನೆ ಅವರ ಮನೆಗೆ ಹೋದರು.

ಮನೆ ನೋಡಿದ್ದಾಯಿತು...."

"ಅಂದಹಾಗೆ ಹಳೆಯ ಸೆಂಟರಾರು?"

"ಸಿದ್ಧಬಸವಯ್ಯ ಅಂತ ಇದ್ದಾರೆ, ಅವರ ಮಗ. ಅದಿರಲಿ. ನಮ್ಮ ಕಥೆ ಕೇಳಿ. ಅವರ ಮನೆ ನೋಡಿದರು. ಎರಡು ಮುರುಕು ಮನೆ—ಒಂದಿಷ್ಟು ಜಮೀನು—ಅವರ ಭಾಷೆ—ಅವರ ಒರಟಾಟ—ಅಲ್ಲದೆ ದೂರ ದೂರು ಎಂತ ಸರಿಬೀಳಲಿಲ್ಲ. ಬಿಟ್ಟಿದ್ದೂ ಸಂತೋಷ. ಅವರವರ ಇಷ್ಟ. ನಾವು ಯಾವ ಒಲುಮೆಗೊಳಗಾಗಿ ಒತ್ತಾಯ ಮಾಡಬೇಕು? ಆದರೆ ನಿಶ್ಚಯ ಕಾರ್ಯ ಮಾಡಿದಮೇಲೆ ಬಿಟ್ಟಿದ್ದು ನನಗೆ ಸರಿ ಬೀಳಲಿಲ್ಲ."

"ಏನೋ ಅವರವರು ಸ್ವಯಂ ಯೋಚಿಸಿ ಹಿಂದಿನ ಸಂಪ್ರದಾಯ ಗಳನ್ನು ಮುರಿಯುತ್ತಲಿದ್ದಾರೆ. ಕಾಲಚಕ್ರ ತಿರುಗುತ್ತ ಇದೆ. ನಾವು ಏನೂ ಮಾಡುವುದಕ್ಕೂ ಬರುವುದಿಲ್ಲ. ಆಗಲಿ ಉಮಾವತಿಯನ್ನಷ್ಟು ನೋಡೋಣ. ನಾಳೆ ಸಾಯಂಕಾಲ ನಿಮ್ಮಲ್ಲಿಂದ ದಾವಣಗೆರೆಗೆ ಹೊರಡಬೇಕು. ಅವಶ್ಯಕವಾದ ಕೆಲಸ ಒಂದಿದೆ."

"ಅಂತಹನಿದೆ ಶಾಸ್ತ್ರಿಗಳೆ? ಹೋಗಿವಿರಂತೆ ಬಿಡಿ. ಎರದು ದಿನ ಇರಬೇಡವೆ? ಒಳ್ಳೆಮಾತು ಹೇಳಿದಿರಿ! ... ..."

"ನಾನೀಗ ಹದಿನೈದು ದಿನಗಳ ಹಿಂದೆ ನಿಮ್ಮಣ್ಣನ ಮಗ, ಆ ಬಸವ ರಾಜನ ಸಂಗಡ ಹೇಳಿಕಳಿಸಿದ್ದೆ. ಹೇಳಿದನೇ?"

"ಅವನು ಯಾಕೆ ಹೇಳುತ್ತಾನೆ. ದೊಡ್ಡ ಮನುಷ್ಯನಾಗಿದ್ದಾನೀಗ. ಅವನ ಕಥೆಯೊಂದನ್ನು ಕೊಂಚ ಕೇಳಿ ಕಟ್ಟಿಗೆ ಡಿಪೋ ಇಡುವೆನೆಂದು ರೂಪಾಯಿ ಈಸಿಕೊಂಡೊಯ್ದ. ಸ್ವಲ್ಪ ಕೇಳಿ ಗಮನವಿತ್ತು....ನಮ್ಮ ನೆಯ ಮುಂಭಾಗಕ್ಕೆ ಕಾಂಪೋಂಡು ಹಾಕಿಸಬೇಕೆಂತ ತಟ್ಟಿಗಳನ್ನು ಕೊಂಡಿಟ್ಟಿದ್ದೆ. ಅವುಗಳನ್ನೂ ಗಂಗಮ್ಮನಿಂದ ನನಗೆ ಹೇಳಿಸಿ ತೆಗೆದು ಕೊಂಡು ಪೋದ. ತೊಗೊಂಡು ಹೋದ ಪುಣ್ಯಾತ್ಮ ವರ್ಷೋಪ್ಪತ್ತಿನಲ್ಲಿ ಕೊಡಬೇಕೋ ಬೇಡವೋ! 'ನಾನು ಹಿಂದಿರುಗಿಸುವುದಿಲ್ಲ. ನಿಮ್ಮನೆ ಯಲ್ಲಿ ನನ್ನೊಂದು ಭಾಗ ಉಂಟು. ಇಲ್ಲದಿದ್ದರೆ—ಮನೆಯನ್ನು ಭಾಗ ಮಾಡದಿದ್ದರೆ-ಪಿಕಾಸಿಹಾಕಿ ಕೆಡಿಸುವೆ' ಎಂದು ಹಾರಿಸಿ ಬಿಡಬೇಕೇ ದುಷ್ಟ!"

"ಆದಕ್ಕೆಂದೇ ರೂಪಾಯಿಗೆ ಎರಡು ಸೇರು ಜೋಳ ಬಿಕ್ರಿಯಾಗು

ತ್ತಿರುವುದು ಶಿವಣ್ಣ" ಎಂದರು ಶಾಸ್ತ್ರಿಗಳು.

"ಈ ಕಾರಣದಿಂದಾಗಿಯೇ ಮಳೆ ಹೋಗಿದೆ ಅಂತಂದರೆ ತಪ್ಪಿಲ್ಲ. ಇನ್ನೂ ಹತ್ತು ಬಾರಿ ಎನ್ನಿ" ಎಂದು ವೀರಪ್ಪ ಬಾರು ಕೋಲಿನಿಂದ ಎತ್ತೊಂದನ್ನು ತಿವಿಯುತ್ತ ಹೇಳಿದ.

"ಹಾಗಾದರೆ ಜಗಳ ಕಾಯ್ದು ಮಾತು ಬಿಟ್ಟಿರುವನೇನು?......"

"ಒಂದು ವರ್ಷದಿಂದ ಒಡನಾಟವೇ ಇಲ್ಲ"

"ಸೌದೆಡಿಪೋ ಆದರೂ ಚೆನ್ನಾಗಿ ನಡೆಯುತ್ತೆಯೆ?"

"ಎಲ್ಲಿಡಿಪೋ ಬಂತು! ದುಡ್ಡು ಕಬಳಮಾಡಿ, ತಟ್ಟಿಗಳಿಂದ ಕಾಂಪೋಂಡು ಹಾಕಿಕೊಂಡು ತರಕಾರಿ ಬೆಳೆಸುತ್ತಿದ್ದಾರೆ. ಎಲ್ಲಾ ಗುಣ ಗಳನ್ನು ತ್ಯಾಜ್ಯಮಾಡಿದ ಲಫಂಗರು"

ಸೂರ್ಯನು ಹಗಲೆಲ್ಲಾ ಬಡ ಜನತೆಯೊಂದಿಗೆ ತಾನೂ ದುಡಿದು ಶ್ರಮ ಹೊಂದಿದ್ದ. ಎಲ್ಲರೂ ಗೂಡು ಸೇರುವಂತೆ ತಾನೂ ಗೂಡು ಸೇರಿದ. ಯಾರೆಲ್ಲ ಕೆಲಸಮಾಡದೆ ಬಿಡುವು ತೆಗೆದುಕೊಂಡರೂ ತಾನು ಮಾತ್ರ ತೆಗೆದುಕೊಳ್ಳುವಂತಿದ್ದಿಲ್ಲ. ಬೆಳಿಗ್ಗೆ ಕಾರ್ಯೋನ್ಮುಖನಾಗಲೇ ಬೇಕು. ಬಂಡಿ ಊರಿಗೆ ಸೇರಲಿ ಸೇರದಿರಲಿ, ಪಶ್ಚಿಮ ಗುಡ್ಡಗಳ ಕೆಂಪು ಪರದೆಯ ಹಿಂದೆ ಅವಿತುಕೊಂಡ.

ಬೆಳುದಿಂಗಳು ಬಂತು! ಹಾಲು ಬೆಳುದಿಂಗಳು ಮೂಡಿತು. ಬೆಳು ದಿಂಗಳು ಬಂದಂತೆಯೇ ಊರು ಸಮೀಪಿಸುತ್ತಿತ್ತು. ದೂರದಿಂದ ಊರಿನ ವಿದ್ಯುಚ್ಛಕ್ತಿ ದೀಪಗಳು ಮಿನುಗುತ್ತಿದ್ದವು. ಊರು ಸಮೀಪಿಸುವ ವರೆಗೆ ಯಾರೂ ಏನೂ ಮಾತನಾಡಲಿಲ್ಲ. ಸಾಹಸ ಮಾಡಿ ಶಾಸ್ತ್ರಿಗಳು ಗಟ್ಟಿಯಾಗಿ ನಕ್ಕರು. ಆ ನಗು ಸುತ್ತಮುತ್ತಲಿನ ವಾತಾವರಣದೆಡೆ ಅಲೆ ಅಲೆಯಾಗಿ ಪಸರಿಸಿತು ಈ ನಗು ಮಗುದೊಮ್ಮೆ ಮಾತಿಗೆ ಪ್ರಸ್ತಾವನೆ ಹಾಕಿತು.

"ಯಾಕಾಗಿಯೋ ಸ್ವಾಮಿಗಳು ನಗುತ್ತಾರೆ" ವೀರಪ್ಪನೆಂದ.

"ಮಧ್ಯಾಹ್ನದ ನಿನ್ನಾ ಕೆಲಸ ಒತ್ತಿ ನಗು ತಂದಿತು. ಆ ಜನ ಗಳಿಂದ ತಪ್ಪಿಸಿಕೊಂಡು ಊರು ಸೇರುವುದೇ ತ್ರಾಸಾಗಿತ್ತು. ಒಳ್ಳೆ ಸಾಹಸ ಕಾರ್ಯ ಮಾಡಿದ್ದೆ ಕಣಪ್ಪ. ಅಲ್ಲ, ಎಲ್ಲೂ ಬಟ್ಟೆ ಹರಹು ವುದಕ್ಕೆ ಸ್ಥಳವಿರಲಿಲ್ಲವೆ?"

"ಸೇದಬೇಡ ಸೇದಬೇಡ, ಎಂದಂತೆಲ್ಲ ಹೆಚ್ಚಿಗೆ ಮಾಡಲು ಸುರುವು ಮಾಡಿದ್ದಾನೆ. ನೋಡಿ ಇವನಂಗಿ. ಎಲ್ಲಾ ಕಡೆಗೂ ಒಂದೊಂದು ತೂತು. ವೀರಣ್ಣ, ಹೀಗೆ ಮಾಡಬಾರದೇ. ಒಮ್ಮೆಲೆ ಬಿಡುವುದಾಗದಿದ್ದರೆ ಸರತಿಗಳನ್ನೂ ದಿನ ದಿನಕ್ಕೂ ಕಮ್ಮಿ ಮಾಡು ಮಾಡುತ್ತಾ ಹೋಗು. ಕೊನೆಗೆ ದಿನಕ್ಕೊಂದರಂತೆ ನಿಲ್ಲಿಸು. ಇಂತಾದರೆ ಸಂಪೂರ್ಣ ಬಿಡಲಿಕ್ಕೆ ಸಾಧ್ಯ........ಹಾಗಿಲ್ಲದಿದ್ದರೆ ಎಂತು ಗತಿ ಮುಟ್ಟುತ್ತೀಯೊ?! ನಾನು ಹೇಳಿದ್ದು ತಿಳಿಯಿತೆ?" ಎಂದರು ಶಿವಣ್ಣಯ್ಯ.

ಬಂಡಿ ಊರು ಸೇರಿತು. ಧಡಕ್....ಧಡಕ್ ಎಂದು ಶಬ್ದ ಮಾಡುತ್ತಾ ಮನೆಯನ್ನೂ ಸೇರಿತು. ಮನೆಯ ಬಾಗಿಲು ಮುಚ್ಚಿತ್ತು. ವೀರಪ್ಪ ಸಾಮಾನುಗಳನ್ನು ಇಳಿಸಿ, ಕದ ತೆಗೆಯಿಸಲು ಹೋದ. ಬೀಗ ಹಾಕಿದ್ದರು. ಆಶ್ಚರ್ಯವದನನಾಗಿ "ಅಣ್ಣಯ್ಯ, ಕದಕ್ಕೆ ಬೀಗ ಹಾಕಿದ್ದಾರಲ್ಲಾ, ಎಲ್ಲಿಗೆ ಹೋಗಿದ್ದಾರೋ ಏನು ಕಥೆಯೋ!"

"ಪಕ್ಕದ ಮನೆಯಲ್ಲಿ ಕೇಳಿಕೊಂಡು ಬಾಪ್ಪ" ಎಂದರು ಶಾಸ್ತ್ರಿಗಳು. ಪಕ್ಕದ ಮನೆಯುವರು ಉಮಾಪತಿಯೊಂದಿಗೆ ಸಿನಿಮಾಕ್ಕೆ ಹೋಗಿದಾರೆಂದು ಹೇಳಿದರು. ಶಿವಣ್ಣಯ್ಯನವರು ಸಿಟ್ಟಿನಿಂದಾಗಿ ತಳಮಳಿಸಿದರು. ತಾವು ಅದೇ ರಾತ್ರಿಬರುವೆವೆಂದು ತಿಳಿದಿದ್ದರೂ ಮನೆಗೆ ಬೀಗ ಹಾಕಿಕೊಂಡು ಹೋಗಿರುವರಲ್ಲಾ ಎಂದು ಎಂದು ಘುಡುಘುಡುಸಿದರು ಅದೂ ಶಾಸ್ತ್ರಿಗಳು ಬಂದ ದಿನ ಹೀಗಾಗಬೇಕೆ? ಯಾವ ಹೆಚ್ಚಿನ ಒಡನಾಟ ನಡೆಯುದೆ ಇರುವವನ ಜೊತೆ ಇವರಾದರೂ ಏಕೆ ಹೋಗುವ ಅವಶ್ಯಕತೆಯಿತ್ತು? ಚಿತ್ರ ಬಿಡುವವರೆವಿಗೂ ಕೂತುಕೊಳ್ಳಬೇಕಲ್ಲ.

ಅವರ ಮುನಿಸನ್ನು ಯಾರೂ ಕೇಳುವಂತಿಲ್ಲ. ಕೋಪಾಗ್ನಿ ಯಾವುದನ್ನೂ ಆಹುತಿ ತೆಗೆದುಕೊಳ್ಳದೆ ಸ್ವಯಂ ಆರಿ ಹೋಗಬೇಕಾಗಿತ್ತು.

ಆ ದಿನ ಮಧ್ಯಾಹ್ನವೇ ನಾಲ್ಕುಜನ ಸದ್ಗೃಹಸ್ಥರೊಡನೆ ಉಮಾಪತಿ ಹಾಜರಾಗಿದ್ದ. ಹೊಸ ಪರಿಯಾಗಿದ್ದರಿಂದ ತನ್ನ ರೀವಿ ಗಾಂಭೀರ್ಯ ತೋರಿಸಿಕೊಳ್ಳಲು ಮನೆಯವರನ್ನೆಲ್ಲಾ ಒತ್ತಾಯದಿಂದ ಸಿನಿಮಾಕ್ಕೆ ಕರೆದುಕೊಂಡುಹೋಗಿದ್ದ—ಎಂತಲೂ ತಿಳಿದು ಬಂತು.

"ಇನ್ನೊಂದರ್ಧ ಘಂಟೆ ತಾನೆ ? ಕಾಯೋಣ ಬನ್ನಿ" ಎಂದರು ಶಾಸ್ತ್ರಿ.

"ಗುಡಾರ ಹಾಸಿರುವೆ ಕೂತುಕೊಳ್ಳಿ. ಈ ಕಡೆ ಬನ್ನಿ ಈ ಕಡೆ. ಈಗಾದರೂ ಅಂಥ ಹಸಿವೆಲ್ಲಿ" ವೀರಪ್ಪ ಶಾಸ್ತ್ರಿಗಳ ಕಡೆಗೆ ಕೈಮಾಡಿ ಹೇಳಿದ.

"ಹಸಿವೆಯ ಪ್ರಶ್ನೆಯಲ್ಲ....ವಿಶ್ರಾಂತಿ ತೆಗೆದುಕೊಳ್ಳುವ ಪ್ರಶ್ನೆಯ. ರಾತ್ರಿ ಹೊತ್ತು ಊಟಮಾಡಿ ಅರಗಿಸುವ ಶಕ್ತಿ ನನ್ನಲ್ಲಿದೆಯೆ?" ಶಾಸ್ತ್ರಿಗಳು ನಶ್ಯ ಏರಿಸುತ್ತ, ಚಂದ್ರಮನನ್ನು ದಿಟ್ಟಿಸುತ್ತ ಹೇಳಿದರು.

ರಾತ್ರಿ ಒಂಬತ್ತು ಹೊಡೆದು ಮೇಲು ಅರ್ಧ ಘಂಟೆ ಕಳೆದಿರ ಬಹುದು. ಗುರುಮೂರ್ತಿ, ಉಮಾಪತಿ, ಹೆಣ್ಣುಮಕ್ಕಳು ಬರುತ್ತಿದ್ದರು. ಚಲನಚಿತ್ರಕ್ಕೆ ಹೋಗಿದ್ದವರಲ್ಲಿ ರೇಣುಕ ಪ್ರಸಾದ ಇರಲಿಲ್ಲ.

೨

"ನಾನೇ ವಿವಾಹ ಮಾಡಿಕೊಡುತ್ತೇನೆ. ಆ ವಿಚಾರವಲ್ಲಿ ಯೋಚನೆ ಬಿಡಿ. ನಮ್ಮ ಕೈಲಾದರೆ ಮುಯ್ಯಿ, ಉಡುಗರೆ ಮಾಡು ತ್ತೇವೆಯೇ ವಿನಾ, ಇಲ್ಲದೆ ಇದ್ದರೆ ಇಲ್ಲ, ಏಕೆಂದರೆ; ನಾವೂ ಬಡವರೇ. ಮಧ್ಯಮ ವರ್ಗದವರಲ್ಲ. ಒಂದು ಬಾಬಿನ ಖರ್ಚಲ್ಲ. ಹುಡುಗನಿಗೆ ಓದಿಸುವುದಕ್ಕೆ ಬೇರೆ ಕೊಡಬೇಕು"

"ಅದು ಹೇಗೆ ಮುಯ್ಯಿ ಮಾಡದೆ ಇರಲಿಕ್ಕೆ ಆಗುತ್ತೆ? ಏನಾದರೂ ಆಯಿರ್ ಮಾಡಲೇಬೇಕು" ಎಂದು ಉಮಾಪತಿಯೊಂಡಿಗೆ ಕನ್ಯಾನ್ವೇಷ ಣೆಗೆ ಬಂದಿದ್ದ ಸಿದ್ಧಲಿಂಗಯ್ಯ ಶಿವಣ್ಣಯ್ಯನವರ ಮಾತಿಗೆ ಪ್ರಶ್ನೆ ಹಾಕಿದ.

"ನೋಡಿ ನಮಗೂ ಬಹಳ ವರಗಳಿದ್ದವು. ನಾನೊಂದು ಹಟಕ್ಕೆ ಕಟ್ಟುಬಿದ್ದು ಈ ಸಂಬಂಧ ಬೆಳೆಸುತ್ತಿರುವೆನೆಂದು ತಮಗೆ ತಿಳಿಯದೇ ಇಲ್ಲ. ನಮ್ಮ ಯೋಗ್ಯತಾನುಸಾರ ಮುಯ್ಯಿ ಮಾಡಬಹುದು. ಅದನ್ನು ನೀವು ಮಾತ್ರ ಹೇಳಬಾರದು."

"ಅದೂ ಕೂಡ ನಿಜವೆ." ಎಂದು ಶಾಸ್ತ್ರಿಗಳು ಮಧ್ಯಸ್ಥಿಕೆ ವಹಿ ಸಿದರು.

"ಸಾವಿರ ವರ್ಷದ ಸಂಬಂಧ ಅಜ್ಜಿ, ಸರಿಯಾಗಿ ನಡೆದುಕೊಂಡು ಹೋಗಬೇಕೂಂತ ನಮ್ಮ ಆಸೆ. ಮಾಲಿಸಿ ನಮ್ಮವಳಲ್ಲ, ನಿಮ್ಮ ಮಗಳು ಇನ್ನುಮೇಲೆ" ಎಂದು ಅವರ ಜೊತೆಗೆ ಬಂದಿದ್ದ ಮುತ್ತೈದೆ ಮುದುಕಿ ಯೊಂದಿಗೆ ಶಿವಣ್ಣಯ್ಯ ಹೇಳಿದರು.

"ಹಾಗೇ ಮಾಡಿ ಶಿವಣ್ಣಯ್ಯ. ನೀವು ಮುಯ್ಯಿ ಮಾಡಿ, ಮಾಡದೆ ಇರಿ; ಅದು ನಿಮ್ಮ ಪಾಲಿಗೆ ಬಿಟ್ಟದ್ದು. ಅವರು ಹೆಣ್ಣು ಬಿಡಿಸಿಕೊಂಡರೂ ನೀವು ಆ ಹಟದಿಂದ ಕೊಡಲೊಪ್ಪಿದ್ದೀರಿ. ಸಂತೋಷ" ಎಂದು ಅವರ ಪೈಕಿ ಬಂದಿದ್ದ ಇನ್ಸ್ಪೋರ್ವರ್ ಯಜಮಾನರು ಮೆಲ್ಲಗೆ ಹೇಳಿದರು.

"ನಿಮ್ಮ ಹುಡುಗ ಯಾವ ದೊಡ್ಡ ಪರೀಕ್ಷೆ ಪಾಸು ಮಾಡಿದ್ದಾ ನೆಂದು ವಾಚು, ಸೈಕಲ್ ಕೊಡುತ್ತಾರ ಸಿದ್ಧಲಿಂಗಯ್ಯ?" ಎಂದು ಶಾಸ್ತ್ರಿಗಳು ಗುಳಿಗೆ ಒಗೆದರು.

"ಆಗಲಿ, ನಿಮ್ಮ ವಾಚೂ ಬೇಡ, ನಿಮ್ಮ ಸೈಕಲ್ಲೂ ಬೇಡ. ಪ್ರೇಮ

ಒಂದಿರಲಿ” ಎಂದ ಸಿದ್ಧಲಿಂಗಯ್ಯ.

“ನೋಡಿ! ಕಡೆಯದಾಗಿ ನಾನೊಂದು ಉಸುರಿ ಬಿಡುವೆ. ಅವರೇ ಬಂದು ಕನ್ಯೆ ಕೊಡಿ ಅಂತ ಬಾಯಿ ಹಾಕಿದ್ದಕ್ಕೆ ಕೊಟ್ಟಿದ್ದಾಗಿದೇಂತ ನೆನಪಿರಲಿ. ನಾವೇನೋ ಮುಗ್ಧ ಭಾವನೆಯಿಂದ ದೇವರ ಮೇಲೆ ಭಾರ ಹಾಕಿ ಕೊಟ್ಟಿದ್ದೇವೆ. ಪ್ರೇಮ ಕೊನೆಯತನಕ ಒಡೆಯದಂತೆ ನೋಡಿ ಕೊಂಡು ಹೋಗುವ ಭಾರ ಉಮಾಪತಿಯ ಮೇಲೆ ಬಿದ್ದಿದೆ” ಎಂದು ಶಿವಣ್ಣಯ್ಯ ಹೇಳಿ ದೇಹ ಅಲುಗಾಡಿಸಿದಂತೆ ಕುಳಿತರು.

“ನಿಜ. ಹಾಗೆ ಒಡೆಯದೇ ಹೋದರೆ ಆ ಸಚ್ಚಿನಂದನ ಮನಸ್ಸು ಬಂದೀತೆ” ಎಂದರು ಶಾಸ್ತ್ರಿಗಳು.

ಉಮಾಪತಿ–ಮಾಲಿನಿಯರ ಲಗ್ನವಾಗುವುದು ನಿಶ್ಚಯವಾಯಿತು. ನಿಶ್ಚಯ ಕಾರ್ಯವೂ ಸಹ ಮಾರನೆಯದಿನ ಮಾಡಿಯಾಯಿತು.

ಉಮಾಪತಿ ಮಾಲಿನಿಯೊಡನೆ ಲಗ್ನವಾಗುವುದನ್ನು ತಾಯಿ ಸಿದ್ಧಮ್ಮನಿಗೆ ಹೇಳಿರಲಿಲ್ಲ; ಹೇಳುವುದು ಆತನಿಗೆ ಬೇಡವಾಗಿತ್ತು. ಹಿರಿ ಯನೂ ತಾನೆ, ಕಿರಿಯನೂ ತಾನೆ–ಎಂಬ ಗರ್ವ ಆತ ತಳೆದಿದ್ದ. ಇನ್ನು ತಮ್ಮ—ಅವನು ಎಷ್ಟಾದರೂ ಚಿಕ್ಕವನಲ್ಲ! ಅವನೆದುರಿಗೆ ಈ ವಿಷಯ ಪ್ರಸ್ತಾಪಿಸುವುದು ತನ್ನ ಮರ್ಯಾದೆಗೆ ಕುಂದೆಂದು ತಿಳಿದುಕೊಂಡು ಬಂದಿದ್ದ. ತನ್ನ ಗೆಳೆಯರನ್ನೂ ಸಮವಯಸ್ಕರನ್ನೂ ಹಿರಿಯರೆಂದು ಕರೆದುಕೊಂಡು ಬಂದಿದ್ದ. ಶಿವಣ್ಣಯ್ಯನವರ ಅಳಿಯಂದಿರು ತಾವೇ ಹಿಂದು ಮುಂದು ಯೋಚಿಸದೆ ನಿಶ್ಚಯಕಾರ್ಯ ಮಾಡಿದಾಗ ಊರಿ ನಲ್ಲೆಲ್ಲಾ ಹೇಳಿಕೊಂಡಿದ್ದ. ಆದರೆ ಅವರೇ ತಿಳಿದು ಆ ಬೇಡಿ ಮುರಿದು ಪಾರಾಗಿದ್ದುದು ಉಮಾಪತಿಗೆ ಮುಖ ಮುರಿದ ಹಾಗಾಯಿತು. ಹೇಗೋ ಶಿವಣ್ಣಯ್ಯನವರ ಬಳಿ ಬಂದು, ಕಾಡಿ ಬೇಡಿ ಮಾಲಿನಿಯನ್ನು ಕೇಳಿ ಕೊಂಡಿದ್ದಲ್ಲದೆ ಗಂಗಮ್ಮನ ಬಳಿಯೂ ತನ್ನ ಸಭ್ಯತಾ ಹೊದಿಕೆಯನ್ನು ತೋರಿಸಿಕೊಂಡು ಬಹು ಮೃದುವಾಗಿ ನಟಿಸಿದ್ದ. ಅಂದೇ ಗಂಗಮ್ಮ ಈ ಸಭ್ಯತೆಯ ಮೇಲು ಹೊದಿಕೆಗ ಮಾರುಹೋಗಿ ಹೇಳಿದ್ದಳು:

“ಉಮಾಪತಿ, ಹೀಗೆ ನುಡಿಯುತ್ತಾಳೆಂದು ಬಿಸಿಯಾಗಬೇಡ. ಈ ಮಕ್ಕಳನ್ನೆಲ್ಲಾ ಸಾಕಿ ಸಲಹಿದ್ದು ನಾನು. ರೇಣುಕನಿಗೆ ಈಗ ನಡೆದಿರುವ ಸಂಬಂಧ ಒಪ್ಪಿಗೆಯಿದ್ದಿಲ್ಲ. ನಾನೇ ರಾದ್ಧಾಂತ ಮಾಡಿ

ಕೊಡಿಸಿರುವೆ. ನೀನು ಅವರಿಬ್ಬರು ಅಳಿಯಂದಿರಿಗೆ ಬೇಕಾದವನಾಗಿ, ಮಾಲಿನಿಯನ್ನು ಸರಿಯಾಗಿ ಇಟ್ಟುಕೊಂಡು ಹೋಗಬೇಕು ಕಂಡೆಯಾ. ನಿಮ್ಮಲ್ಲೇನಾದರೂ ತಿಕ್ಕಾಟ ಬಂದರೆ ನನ್ನ ಕುತ್ತಿಗೆಗೆ ಬರುತ್ತದೆ" ಎಂದ ಹೇಳುತ್ತಾ ಕಣ್ಣೀರು ಹಾಕಿದ್ದಳು. ಅದಕ್ಕೆ ಅವನು ಸಹಾನುಭೂತಿಯ ಸಹಿ ಹಾಕಿದ್ದ.

"ಛಿ! ಏನು ಮಾತಾಡುತ್ತೀ ಅಕ್ಕಾ. ಹೆಣ್ಣುಕೊಟ್ಟ ಮಾವಂದಿರು ತಂದೆಗೆ ಸಲ್ಲುವ ಪೂಜ್ಯತೆಯನ್ನು ತೆಗೆದುಕೊಳ್ಳುತ್ತಾರೆ. ನಾವೂ ನೀವೂ ಬಡವರು. ನೀರಿಗೆ ನೀರು ಸೇರಿದಂತಾಗಿದೆ. ಆ ಯೋಚನೆ ನಿನ್ನ ಕನಸಿನಲ್ಲೂ ಬೇಡ. ಅವರುಸಿರು ಎಂದೂ ಬಿಸಿಯಾಗುವುದು ಬೇಡ. ಏನು ಮಾತು ! .." ಎಂದು ವಿಧೇಯತೆಯ ರಸವನ್ನು ಗಂಗಮ್ಮನ ಮೇಲೆ ಚಿಮುಕಿಸಿದ್ದ. ಇಂತಹ ಕರುಣೆಯ ಮಾತುಗಳು ಹೊರಟಾಗ, ಗಂಗಮ್ಮನ ಸಹಜವಾದ ಹೆಣ್ಣು ಹೃದಯ ಮಂಜಿನಂತೆ ಕರಗಿತು.

ಗುರುಮೂರ್ತಿ ತಂದೆ ಹೇಳಿದ ಮಾತಿಗೆ ಪ್ರತಿಮಾತು ಆಡುವವನಲ್ಲ. ಅವನೊಬ್ಬ ಮಾಧ್ಯಮಿಕ ಶಾಲೆಯ ಉಪಾಧ್ಯಾಯ. ಉತ್ಕೃಷ್ಟವಾದ ದೇಹ, ನೀಳವಾದ ಮೂಗು, ತೊಂಡೆಹಣ್ಣಿನಂತಹ ತುಟಿಗಳು, ಘಂಟೆ ಬಾರಿಸುವಂತಹ ಮಾತುಗಳು ಅವನವು; ಯಾರನ್ನಾದರೂ ಮರುಳುಗೊಳಿಸುತ್ತಿದ್ದುವು. ಹೆಚ್ಚು ವಾಚಾಳಿಯಲ್ಲ ಅವನು. ಯಾವಾಗಲಾದರೂ ಒಂದು ಮಾತನ್ನಾಡಿದರೆ, ಮುತ್ತಿನಂತಹ ಮಾತನ್ನು ಒಗೆಯುತ್ತಿದ್ದ.

ಇನ್ನು ರೇಣುಕ ಪ್ರಸಾದ. ಅವನು ಎಸ್. ಎನ್. ಎಲ್. ಸಿ. ವಿದ್ಯಾರ್ಥಿ. ಅದೇ ವರ್ಷ ಪರೀಕ್ಷೆ ಕಟ್ಟಿದ್ದ. ವ್ಯಕ್ತಿ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬಾರದೆಂದೋ, ಏನೋ, ತನಗೆ ಹೊಳೆದ ವಿಚಾರಗಳನ್ನು ಕೆಚ್ಚೆದೆಯಿಂದ ನಿರ್ಭೀತಿಯಿಂದ ಹೇಳುತ್ತಿದ್ದ. ಉಮಾಪತಿಯ ವ್ಯಕ್ತಿತ್ವವನ್ನು ತನ್ನ ಅಳತೆಗೋಲಿನಿಂದ ಆಗಲೇ ಅಳೆದು ಆ ಸಂಬಂಧಕ್ಕೆ ಬೇಡವೆಂದಿದ್ದ. ಪರಂತು, ಬಹುಮತ ತನಗೆ ಸಿಕ್ಕದೇ ಹೋದದ್ದರಿಂದ ನಿರುಪಾಯನಾಗಬೇಕಾಗಿ ಬಂತು . .

ಈ ದಿನ ಪುನಃ ಆ ಕುರಿತಾಗಿ ಯೋಚಿಸುತ್ತಲಿದ್ದ. ತನ್ನ ತಂಗಿ ಮಾಲಿನಿಗೆ ಸರಿಯಾದ ವರ ಸಿಕ್ಕಲಿಲ್ಲವಲ್ಲ—ಎಂದು. ಸಿಗುವ ಹಾಗಿ

ದ್ದರೂ ತಮ್ಮ ತಂದೆ ಅದೇಕೆ ಪ್ರಯತ್ನಿಸುತ್ತಿಲ್ಲ. ಸಿದ್ಧಬಸವಯ್ಯನವರ ಮಗ ವಿದ್ಯಾವಂತ ಸುಸಂಸ್ಕೃತ ತರುಣನಿದ್ದೂ, ಅದೇಕೆ ಆ ಸಂಬಂಧ ಬೆಳೆಸಲು ಇಚ್ಛಿಸುತ್ತಿಲ್ಲ! ಓದಿದ ಸುಶಿಕ್ಷಿತ ಹುಡುಗಿಗೆ ಪ್ರಾಥಮಿಕ ಶಾಲಾ ಉಪಾಧ್ಯಾಯನಾದ ಹಳ್ಳಿಯುವನನ್ನು ಅದೇಕೆ ಗಂಟು ಹಾಕಿದರು? ಇವು ಅವನಿಂದ ಬಿಡಿಸಲಾರದ ಸಮಸ್ಯೆಗಳಾಗಿದ್ದವು. ಬಿಡಿಸಲಿಕ್ಕೆ ಬರುವ ಹಾಗಿದ್ದರೂ ಅದನ್ನು ಬಿಡಿಸುವ ಸ್ಥಾನದಲ್ಲಿರಲಿಲ್ಲ ಅವನು. ವಿಧಿಯಾಣಕದಂತಾಗಲೆಂದು ಕಡೆಯ ನಿರ್ಧಾರಕ್ಕೆ ಬಂದು ಮುಟ್ಟಿದ್ದ. ಆದರೂ ಆ ಕುರಿತಾಗಿ ತರ್ಕ ಮಾಡುವುದನ್ನು ಬಿಡಲಾರ. ಎಷ್ಟೇ ಆಗಲಿ ರಕ್ತ ಸಂಬಂಧ! ಇನ್ನೂ ಆ ಬಗೆ ಹರಿಯಾದ ಸಮಸ್ಯೆಯನ್ನು ಯೋಚಿಸುತ್ತಿದ್ದಾಗ ಆತನ ಗೆಳೆಯರು ಮಾಧವರಾವ್ ಮತ್ತು ವಿಶ್ವನಾಥ ಬಂದು,

"ಬನ್ನಿ, ರೇಣುಕ, ವಿಹಾರ ಹೊರಡುವ" ಎಂದು ಕರೆದು ಎರಡು ನಿಮಿಷ ಮೌನವಾಗಿದ್ದು,

"ಈದಿನ ಯಾಕಾಗಿ ಮಂಕಾಗಿದೀಯೆ? ಅಲ್ಲ, ಕವಿಯ ಭಾವ ಪರವಶತೆ ಬಂದು ಬಿಟ್ಟಿದೆಯೋ! ಮತ್ತೆಲ್ಲಿಯಾದರೂ ಉರುಳಿಬಿದ್ದೀಯೆ! ಆಮೇಲೆ ಪಾಸಿಮಾಡುವವರು ಯಾರು?" ಎಂದ ಮಾಧು.

"ಈದಿನ ಯಾಕಾಗಿಯೋ ತುಂಬಾ ಬೇಸರ. ಸುಮ್ಮನೆ ಕೂತುಕೊಂಡೆ...."

"ನದಿ ಆಚೆಗೆ ಹೋಗುವ. ಎಲ್ಲಾ ಬೇಸರ ಓಡಿ ಹೋಗುತ್ತೆ" ಎಂದು ಮಾಧು ನಕ್ಕು "ಯಾಕೋ ಇವತ್ತು ಶನಿ ಗಂಟುಬಿದ್ದಹಾಗೆ ಕಾಣುತ್ತೆ. ಯಾಕೆ ಹೀಗೆ ಮಂಕಾಗಿದ್ದೀಯೆ" ಎಂದು ಮತ್ತೆ ಹೇಳಿದ.

"ತಲೆ ನೋವು" ಎಂದು ರೇಣುಕ ಹೊರಗೆ ಹೊರಡಲನುವಾದ.

ಅಷ್ಟು ಹೊತ್ತಿನವರೆವಿಗೂ ವಿಶ್ವನಾಥ ಯಾವುದೋ ಪುಸ್ತಕ ಒಂದನ್ನು ಹಿಡಿದುಕೊಂಡು, ಸುಮ್ಮನೆ ಪುಟಗಳನ್ನು ಮಗುಚಿ ಹಾಕುತ್ತಲಿದ್ದ. ಎಂಥಾ ಹತ್ತಿರದ ಸ್ನೇಹಿತರಲ್ಲೂ ನಲಿಗೆಯಿಂದ ಮಾತನಾಡುತ್ತಿದ್ದಿಲ್ಲ. ಜನ ಬಳಕೆಯಂತೂ ಅವನಿಗೆ ಮೊದಲೇ ಇಲ್ಲ. ತಾನಾಯಿತು ತನ್ನ ಬಗೆ ಹರಿಯದ ಯೋಚನೆಯಾಯಿತು. ಏನು ಯೋಚಿಸುತ್ತಿದ್ದನೊ, ಯಾವ ಕಲ್ಪನೆಗಳನ್ನು ಕಟ್ಟುತ್ತಿದ್ದನೊ ಯಾರಿಗೂ ತಿಳಿಯದ ಜಟಿಲ ಸಮಸ್ಯೆಯಾಗಿತ್ತು. ಯಾರಾದರೂ ಆತ್ಮೀಯ ಭಾವನೆಯಿಂದ ಅವನನ್ನು

ಕೇಳಿದಾಗ,

"ಪ್ರಪಂಚವೇ ಹೀಗೆ. ಎಲ್ಲರೂ ಬಾಳು ಸುಗಮವಾಗಬೇಕೆಂದು ಹುಟ್ಟಿ ಜೀವಿಸಲು ಯತ್ನಿಸುತ್ತಾರೆ. ಮತ್ತು ಬಾಳು ಸುಗಂಧ, ಸುಕೋಮಲಪುಷ್ಪವೆಂದು ಮುಟ್ಟಲು ಹೋಗಿ, ಆ ಬಾಳಿನಲ್ಲಿರುವ ಮುಳ್ಳುಗಳಿಂದ ಚುಚ್ಚಿಸಿಕೊಂಡು ದುಃಖಪಡುತ್ತಾರೆ. ಇನ್ನುಕೆಲವರು ಆ ಅಂದವಾದ ಹೂವುಗಳನ್ನು ಹರಿದುಕೊಂಡು ಸಂತೃಪ್ತರಾಗುತ್ತಾರೆ. ನಾನು ಮುಳ್ಳನ್ನು ಮುಟ್ಟಿ ರಕ್ತ ಹರಿಸಿಕೊಂಡವ" ಎಂದುಹೇಳುತ್ತಿದ್ದ. ಇವನ ಈ ಹೇಳಿಕೆ ಯಾರಿಗೂ ಅರ್ಥವಾಗುತ್ತಿದ್ದಿಲ್ಲ. ಮನೆಯಲ್ಲೂ ಹಾಗೆಯೇ. ಅವರೊಂದು ಮಾತು ಕೇಳಿದರೆ, ಮಹಾ ವೇದಾಂತಿಯಂತೆ ಅರ್ಥವಿಲ್ಲದ ಮಾತುಗಳನ್ನು ನುಡಿಯುತ್ತಿದ್ದ.

"ಮಾಲಿನಿ ಲಗ್ನ ನಿಶ್ಚಯವಾಯಿತಂತ, ಹೌದೇ?" ಎಂದ ಮಾಧು.

"ಹೂ, ಈದಿನ ಗೊತ್ತುಮಾಡಿಕೊಂಡಿದ್ದಾರೆ"

"ಚಿನ್ನ ಎಷ್ಟು ಇಟ್ಟಿದಾರೆ?" ಎಂದು ವಿಶ್ವನಾಥ ಮಾತನಾಡಲೋ ಅಥವಾ ಬೇಡವೋ ಎಂಬ ಸಂಶಯದಿಂದ ಕೇಳಿದ.

"ಐದು ತೊಲೆ ಬಂಗಾರ ಇಟ್ಟಿದ್ದಾರೆ. ಅದನ್ನು ಯಾವಾಗ ಮಾರಿ ತಿನ್ನುತ್ತಾರೋ ಏನೋ! ನನಗಂತೂ ಯಾಕೆ ಕೊಟ್ಟರೋ ಅನ್ನಿಸುತ್ತದೆ. ನಿಜವಾಗಲೂ ಮನಸ್ಸಿಲ್ಲ ಮಾಧು ...ಯಾಕೆ ಸುಳ್ಳು ಹೇಳಲಿ?"

ಮೂವರೂ ಸೇತುವೆ ಗೋಡೆಯ ಬಳಿ ಒರಗಿ ನಿಂತುಕೊಂಡರು. ತುಂಗಭದ್ರೆ ತುಂಬು ಜವ್ವನದ ಯುವತಿ ಬಿಳಿಯ ಪತ್ತಲವನ್ನು ಉಟ್ಟುಕೊಂಡು ಒಯ್ಯಾರ ಒನಪುಗಳನ್ನು ಮಾಡುತ್ತಾ ಬರುವ ಹೆಂಗಳೆಯಂತೆ ಹರಿಯುತ್ತಿದ್ದಳು. ಮಾಧು ಚಿಕ್ಕ ಚಿಕ್ಕ ಕಲ್ಲು ಹರಳುಗಳನ್ನು ಒಗೆಯುತ್ತ ಹೇಳಿದ:

"ಅಂತಿದ್ದರೆ ಯಾಕೆ ಕೊಡಬೇಕಾಗಿತ್ತು?" ಅವನೇ ಪುನಃ "ಹೋಗಲಿ, ಆ ವಿಚಾರ. ಪರೀಕ್ಷೆ ಇಪ್ಪತ್ತಾರರಿಂದ ಪ್ರಾರಂಭವಾಗುತ್ತೆ" ಎಂದ.

ಪರೀಕ್ಷೆಯೆಂದ ಕೂಡಲೆ ವಿಶ್ವನಾಥನ ಮುಖ ಒಣಗಿದ ನಿಂಬೆಕಾಯಿಯಂತೆ ಆಯಿತು. ಅವನು ಆಗ ಮೀನುಗಳು ಎದ್ದೆದ್ದು ಮುಳುಗುವ ದೃಶ್ಯವನ್ನು ನೋಡುತ್ತಿದ್ದ. ಮಾಧವರಾವ್ ಮುಂದೆ ಹೊರಟ.

ಅವನನ್ನು ಹಿಂಬಾಲಿಸುತ್ತ ರೇಣುಕನೂ ಹೊರಟ. ಅವರಿಬ್ಬರೂ ಹೊರಟು ಹೋಗಿದ್ದು ವಿಶ್ವನಾಥನಿಗೆ ಗೊತ್ತಾಗಲಿಲ್ಲ. ಯಾವ ಸಮಾಧಿ ಯಲ್ಲಿ ಐಕ್ಯವಾಗಿದ್ದನೋ ಏನು ಕಥೆಯೋ! "ಬಾರೋ ವಿಶ್ವನಾಥ, ಮನೆಗೆ ಹಿಂದಿರುಗೋಣ" ಎಂದು ಅವರೆಂದಾಗಲೇ ಅವನಿಗೆ ಅರಿವಾಯಿತು.

ಮೂವರೂ ಮನೆ ಕಡೆ ಹಿಂದಿರುಗುತ್ತಿದ್ದಾಗ ಎದುರಿಗೆ ಪ್ರೇಮ ಚಂದ್ರ ಬರುತ್ತಿದ್ದರು. ಮೂವರೂ 'ನಮಸ್ಕಾರ, ಸಾರ್' ಎಂದರು.

"ನಮಸ್ತೇ. ಏನೆಲ್ಲರೂ ವಿಹಾರ ಹೊರಟಿದ್ದಿರಾ?" ಎಂದು ಅವರು ಕೇಳಿದರು.

"ಹ್ಞೂ, ಓದಿ ಓದಿ ಬೇಸರವಾಗಿತ್ತು ಸಾರ್" ಮಾಧು ಮುಂದಾಗಿ ಹೇಳಿದ.

"ಹೋ, ಹೋ ಗೊತ್ತಾಯಿತು–ಗೊತ್ತಾಯಿತು. ಬನ್ನಿ, ಮರಳಕಡೆ ಹೋಗೋಣ" ಎನ್ನುತ್ತ ಜುಲುಮೆಮಾಡಿ ಅವರು ಈ ಗೆಳೆಯರನ್ನು ಕರೆದುಕೊಂಡು ಹೊರಟರು. ರೇಣುಕಪ್ರಸಾದನಿಗೆ ಇಷ್ಟವಿಲ್ಲದಿದ್ದರೂ ಉಪಾಧ್ಯಾಯರ ಒತ್ತಾಯದಿಂದ ಹೊರಟ.

"ಏನು? ವಿಶ್ವನಾಥ ಸದಾ ಮಾತನಾಡುತ್ತಿರುವುದಿಲ್ಲ. ಯಾಕೆ ಹೀಗೆ ಇರುವುದು? ಈಗ ಮಾತಿದ್ದರೆ ಮರ್ಯಾದೆ ಕಣಯ್ಯ. ಜನಬಳಿಕೆ ಮಾಡಿಕೊಳ್ಳಬೇಕು."

"ಹೌದು. ನೀವು ಹೇಳುವುದು ಸರಿ" ಎಂದ ಮಾಧು.

"ಏನೋ ಮೊದಲಿನಿಂದ ಹಾಗೆಯೆ ಬಂದಿದೇನೆ. ಒಬ್ಬೊಬ್ಬರು ಒಂದೊಂದು ತರಹ" ಎಂದ ವಿಶ್ವನಾಥ.

"ಹಾಗೆಂದರೆ ಹೇಗೆ ವಿಶ್ವನಾಥ. ಗಿಡವಾದಾಗ ಬಗ್ಗದೇ ಇರುವುದು ಮರವಾದಾಗ ಬಗ್ಗೀತೆ! ಈಗಲಿಂದಲೇ ಬದಲಾಯಿಸಲೆತ್ನಿಸಿದರೆ ಮೈ ಸಡಿಲಿಸಿ ಮಾತನಾಡುವುದೊಂದಿರಲಿ, ವ್ಯಾಖ್ಯಾನಕಾರನೇ ಆಗಬಹುದು" ಎಂದ ರೇಣುಕ.

"ಅವನು ಖ್ಯಾತನಾಮ ವ್ಯಾಖ್ಯಾನಕಾರನಾಗುವುದು ಬೇಡ. ಆ ನಾಚಿಕೆ ಬಿಟ್ಟು ಎಲ್ಲರೊಡನೆ ಸರಿಯಾಗಿ ಮಾತನಾಡುತ್ತಾ ಇದ್ದರೆ ಸಾಕು" ಎಂದರು ಪ್ರೇಮಚಂದ್ರರು.

ಪ್ರೇಮಚಂದ್ರರು ಆ ಊರಿನ ಪ್ರೌಢಶಾಲೆಯ ಆಂಗ್ಲಭಾಷಾ

ಪ್ರಾಧ್ಯಾಪಕರು. ಹಿಂದಿಯಲ್ಲೂ ಪ್ರಾಗಲ್ಭ್ಯರೆಂದು ಹೇಳಬಹುದು. ಎಲ್ಲ ಬಾಲಕರೊಡನೆಹೊಂದಿಕೊಂಡು, ಎಲ್ಲರ ಪ್ರೀತ್ಯಾದರಕ್ಕೆ ಒಳಗಾಗಿದ್ದವರೆಂದರೆ ಇವರೇ. ವೇಳೆಯನ್ನು ಕೊಂಚವೂ ಕಳೆಯುತ್ತಿರಲಿಲ್ಲ. ಹೊತ್ತಿಗೆಗಳ ಆದ್ರ್ರ ಅಭ್ಯಾಸಿಗಳು ಇವರು. ಯಾವಾಗ ನೋಡಿದರೂ ಪತ್ರಿಕೆಯಾಗಲಿ, ಪುಸ್ತಕವಾಗಲಿ ಇವರ ಕೈಯಲ್ಲಿ ಇದ್ದೇ ಇರುತ್ತಿತ್ತು. ಕೆಲವು ಅನಾನುಕೂಲತೆಗಳಿಂದ ಎಂ. ಎ, ಪದವಿ ಹೊಂದಲು ಇವರಿಗೆ ಸಾಧ್ಯವಾಗಿರಲಿಲ್ಲ. ಮನೋವಿಶ್ಲೇಷಣಶಾಸ್ತ್ರ, ಆಯುರ್ವೇದ, ಜ್ಯೋತಿಷ್ಯ ಇತ್ಯಾದಿಗಳನ್ನು ಸ್ಥೂಲರಾಗಿ ತಿಳಿದವರಾಗಿದ್ದುದಲ್ಲದೆ, ಸಾಹಿತ್ಯವಂತೂ ಇವರಿಗೆ ಕರಗತವಾಗಿತ್ತು. ಷೆಲ್ಲಿ, ಮುದ್ದಣ, ಕುವೆಂಪು, ಮುಂತಾದವರ ಕೃತಿಗಳೆಂದರೆ ಇವರಿಗಿಲ್ಲದ ಅಭಿರುಚಿ ಹಿಂದಿ ಸುಪ್ರಸಿದ್ಧ ಕತೆಗಾರ ಪ್ರೇಮಚಂದ್ರರ ಕಥೆಗಳೂ ಮೈಥಿಲಿಶರಣಗುಪ್ತರ ಕವನಗಳೂ ಇವರಿಗೆ ತುಂಬಾ ಹಿಡಿಸಿದ್ದವು. ಇಪ್ಪತ್ತಾರುವರ್ಷದ ಪ್ರೇಮಚಂದ್ರರು ಅವಿವಾಹಿತರಾಗಿದ್ದು, ಗೌರವರ್ಣದಿಂದ ಕೂಡಿ ಅಂತಹ ಕುಳ್ಳನೆಯ ವ್ಯಕ್ತಿಯಲ್ಲದಿದ್ದರೂ ಮಧ್ಯಮ ಶ್ರೇಣಿಗೆ ಸೇರಿದವರು. ಉತ್ತಮ ವ್ಯಾಖ್ಯಾನಕಾರರೆಂದು ಊರಿನಲ್ಲಿ ಖ್ಯಾತಿವೆತ್ತಿದ್ದರು. ಪ್ರೌಢಶಾಲೆಯ ಹುಡುಗರಲ್ಲಿ ಸಾಹಿತ್ಯಾಭಿರುಚಿಯನ್ನು ಬೆಳೆಸಲು "ಕಾಂತಿ" ಎಂಬ ಕೈಬರಹದ ಮಾಸಪತ್ರಿಕೆಯೊಂದನ್ನು ನಡೆಸುತ್ತ, ಸ್ವಯಂ ಲೇಖನಗಳನ್ನು ಬರೆಯುತ್ತಿದ್ದರು. ಯಾವ ಕೆಟ್ಟ ದುರಭ್ಯಾಸಗಳ ಬಲೆಗೆ ಬೀಳದಿದ್ದರೂ ಎರಡು ಹೊತ್ತೂ ಕಾಫಿ ತೆಗೆದುಕೊಳ್ಳುತ್ತಿದ್ದರು. ಇತ್ತೀಚೆಗೆ ಸಣ್ಣ ಕಥೆಗಳ ಸಂಕಲನ "ರಶ್ಮಿ"ಎಂಬುದೊಂದು ಗ್ರಂಥವನ್ನು ಬರೆದು ಪ್ರಕಟಿಸಿದ್ದರು. ಶಾಲೆಯಲ್ಲಿ ಯಾವಚಟುವಟಿಕೆಗಳೇ ನಡೆಯಲಿ, ಬಾಲಕರಿಗಿಂತ ಹೆಚ್ಚಾಗಿ ತಾವೇ ಮುನ್ನುಗ್ಗಿ ಎಲ್ಲಾ ಕೆಲಸಗಳನ್ನು ಮಾಡುತ್ತ ಆದರ್ಶಪುರುಷರಾಗಿದ್ದರು.

ಅವರು ಯಾವಾಗಲೂ ವಿಶ್ವನಾಥನ ಬಗ್ಗೆ ತುಂಬಾ ಅನುಕಂಪೆಯಿಂದ ಮಾತನಾಡುತ್ತಿದ್ದರು. ಸದಾ ಅವನಿಗೇನಾಗಿರಬಹುದು–ಎಂಬುದನ್ನೇ ಯೋಚಿಸುತ್ತಿದ್ದರು. ಮನೋವಿಶ್ಲೇಷಣ ಶಾಸ್ತ್ರದ ಉಗಮಕಾರಿಯಾದ ಫ್ರಾಯಿಡನ ಸಿದ್ಧಾಂತಗಳನ್ನು ಇವನ ಮಾನಸಿಕಕ್ಕೆ ಒರೆಹಚ್ಚಿ ನೋಡಿ ಪರೀಕ್ಷಿಸಿದ್ದರೂ ಅರ್ಥವಾಗಿರಲಿಲ್ಲ. ಪ್ರೇಮಚಂದ್ರರ ಪಕ್ಕದ ಮನೆಯೇ ವಿಶ್ವನಾಥನ ಮನೆ. ಅದಕ್ಕಾಗಿಯೇ ಇಷ್ಟು ಅವನ

ವಿಚಾರದಲ್ಲಿ ಆವಿಷ್ಕಾರಮಾಡಲು ಅವರಿಗೆ ಸಾಧ್ಯವಾಗಿತ್ತು. ಅವರ ಹರಿತ ವಿಚಾರ ಸರಣಿಗೆ ಇಷ್ಟು ತಿಳಿಯದೇ ಇರಲಿಲ್ಲ. ಅವನಿಗೆ ದೈಹಿಕರೋಗ ಯಾವುದೂ ಗಂಟು ಬೀಳದೆ, ಮಾನಸಿಕ ರೋಗ ಮಾತ್ರ ಗಂಟು ಬಿದ್ದಿದೆ ಯೆಂದೂ, ಅದು ಅವನನ್ನು ಬುಗುರಿಯಂತೆ ಕೊರೆಯುತ್ತಾ ಕೃಶನನ್ನಾಗಿ ಮಾಡುತ್ತಿದೆಯೆಂದೂ ಅವರಿಗೆ ಅರಿವಾಗದಿರಲಿಲ್ಲ; ಈ ಒಂದು ಕಾರಣದಿಂದ ಬೇಕೆಂದೇ ಅವನೊಡನೆ ಮಾತು ಬೆಳೆಸುತ್ತಿದ್ದರು. ಈಗಲೂ ಹಾಗೆಯೇ ಮಾಡಿದರು.

"ವಿಶ್ವನಾಥ, ಪ್ರಕೃತಿಯನ್ನು ಡಾಕ್ಟರಿಗಾದರೂ ತೋರಿಸು. ನೀನೀಗ ಕೆಲವು ದಿನಗಳಿಂದ ಬಹಳ ಇಳಿಯುತ್ತ ಇದ್ದೀಯೆ. ಪ್ರತಿದಿನ ಯಾಕೆ ವ್ಯಾಯಾಮ ಮಾಡಬಾರದು?"

ಅವರು ಇವನ ಮನಸ್ಸನ್ನು ನೋಯಿಸಬೇಕೆಂದಾಗಲಿ, ಚೇಷ್ಟೆ ಮಾಡಬೇಕೆಂದಾಗಲಿ ಇದನ್ನು ಹೇಳರಲಿಲ್ಲ. ಅವನ ಬಗ್ಗೆ ತುಂಬಾ ನೊಂದು ಕೊಂಡು ಅನುಕಂಪೆಯಿಂದ ಹೇಳಿದ್ದರು. ಈ ಮಾತು ಅವನಿಗೆ ಕಹಿಯಾಗಿ ಪರಿಣಮಿಸಿತು. ಅವರ ಮಾತಿಗೆ ಪ್ರತ್ಯುತ್ತರ ಕೊಡಬೇಕೆಂದು ಮಾಡಿದ. ಆದರೆ ಅವರು ಉಪಾಧ್ಯಾಯರು–ತನ್ನ ಉಪಾಧ್ಯಾಯರು–ತನ್ನ ಪುರೋಭಿ ವೃದ್ಧಿಗೆ ಹೇಳುತ್ತಾರೆಂದು ವಿಚಾರಮಾಡಿದಾಗ ಸೌಮ್ಯವಾಗಿಯೇ ಉತ್ತರ ವಿತ್ತ.

"ಏನೋ ಸಾರ್, ನಾನು ಯಾವಾಗಲೂ ಹಾಗೇಯೇ ವರ್ತನೆ ಮಾಡುತ್ತಿರುವುದು"

ಅಷ್ಟು ಹೊತ್ತಿಗಾಗಲೇ ಇವರು ಮರಳಿಗೆ ಬಂದಿದ್ದರು. ಒಂದೆಡೆಗೆ ಹೋಗಿ ನಾಲ್ವರೂ ಕುಳಿತುಕೊಂಡರು.

"ಎಸ್. ಎಸ್. ಎಲ್. ಸಿ. ಆದನಂತರ ಮುಂದೆ ವಿದ್ಯಾಭ್ಯಾಸ ಮುಂದುವರಿಸಬೇಕೆಂದು ಮಾಡಿರುವೆಯೋ ಅಥವಾ ಇಲ್ಲವೊ ಮಾಧು? ಯಾವುದಾದರೂ ಮುಂಜಾಗ್ರತೆ ವಹಿಸಿ ನಿರ್ಧಾರ ಮಾಡಿಕೊಂಡಿರು" ಎಂದರು ಪ್ರೇಮಚಂದ್ರ.

"ನಾನಂದೂ ಹೋಗಬೇಕೆಂತ ಪೂರ್ಣ ನಿರ್ಧಾರ ಮಾಡಿದೇನೆ. ದಾವಣಗೆರೆ ಕಾಲೇಜ್ ದೂರದಲ್ಲಿಲ್ಲ. ಆದರೆ ಊಟಕ್ಕೆ ಅನಾನುಕೂಲತೆ ಇದೆ."

"ಊಟಕ್ಕೆ ನಿತ್ಯ ತೆಗೆದುಕೊಂಡು ಹೋಗಬಹುದಲ್ಲ. ಈಗ ಹಾಗೆ ಕೆಲವರು ಮಾಡುತ್ತಿಲ್ಲವೆ?"

"ಹಾಗೂ ಬರುತ್ತೆ. ಈಗಲೇ ಆ ಯೋಚನೆ ಯಾಕೆ?"

"ನಮ್ಮ ವಿಶ್ವನಾಥನಿಗೆ ಯಾವ ತರಹೆಯ ಯೋಚನೆಯೂ ಇಲ್ಲ. ಪಾಪ ಪಾಪ, ದೇವರು ಕೊಟ್ಟಿದಾನೆ "

ಮಾಧು ರೇಣುಕನ ಮುಖವನ್ನು ದಿಟ್ಟಿಸಿ ನೋಡುತ್ತ,

"ರೇಣುಕ ಅಭ್ಯಾಸ ಮುಂದುವರಿಸುವುದಿಲ್ಲಂತೆ. ಅವರ ತಂದೆ ಬೇಡೆಂದು ಮೊನ್ನೆ ಹೇಳುತ್ತಿದ್ದರು."

"ನೋಡಿ, ಓದು ಅವರವರ ಅನುಕೂಲತೆ ಅನಾನುಕೂಲತೆಗಳ ಮೇಲೆ ಹೋಗುತ್ತೆ. ನಾವಾದರೂ ಹೇಗೆ ಹೇಳಲಿಕ್ಕೆ ಬರುತ್ತೆ. ಅವರ ವಿಚಾರ ನನಗೂ ಕೂಡ ಸರಿಯಾಗಿ ಗೊತ್ತು. ಆದರೆ ಈಗಿನ ಕಾಲದಲ್ಲಿ ಬರಿಯ ಎಸ್. ಎಸ್. ಎಲ್. ಸಿ. ಒಂದಾಗಿದ್ದರೆ ಘನತೆಯಿಲ್ಲ. ಅದರ ಜೊತೆಗೆ ಯಾವುದಾದರೂ ಕೋರ್ಸ್ ಆಗಿದ್ದರೆ ಉತ್ತಮ. ಅವಕ್ಕೆ ಒಂದು ಕೆಲಸ ಮಾಡು ಪ್ರಸಾದ: ಟೈಪರೈಟಿಂಗ್ ..ಹೋಗಲಿ ಹಿಂದಿ ಯಾವುದು ಪಾಸಾಗಿದೆ?"

"ರಾಷ್ಟ್ರಭಾಷಾ ಪಾಸಾಗಿದೆ....ಪ್ರಮಾಣ ಪತ್ರವೂ ಬಂತು"

"ಸರಿ ಸರಿ. ವಿಶಾರದವರಿವಿಗೆ ಓದಿ ಪಾಸುಮಾಡಿಕೊಂಡರೆ ಹೈಸ್ಕೂಲು ಉಪಾಧ್ಯಾಯನಾಗಿಯಾದರೂ ಕೆಲಸಮಾಡಬಹುದು. ಪರೀಕ್ಷೆ ಫಲಿತಾಂಶ ಬರುತ್ತಲೇ ಹಿಂದಿಗೆ ಕೈಹಾಕು; ಗೊತ್ತಾಯಿತೆ?" ಪುನಃ ಅವರೇ ತಮ್ಮ ಮಾತು ಮುಂದುವರಿಸುತ್ತ "ಏನೆಲ್ಲ ಬರಲಿ, ಓದೇ ಓದು ತ್ತೇನೆ ಎಂತ ಮಾಧು ಆಶಾವಾದಿಯಾಗಿದ್ದಾನೆ. ಸಂತೋಷ; ಪಾಪ, ಆ ಮುದುಕಿ ಇವನು ಪ್ರಬುದ್ಧಮಾನಕ್ಕೆ ಬಂದು ಗೆಯ್ದುಮಾಡುವ ಕನಸು ಕಾಣುತ್ತಿದ್ದಾಳೆ. ದೇವರು ಒಳ್ಳೆಯದು ಮಾಡುತ್ತಾನೆ. ಕಷ್ಟಪಟ್ಟು ಓದು."

ಹೌದು. ಮಾಧವರಾಯನಿಗೆ ಪುಸ್ತಕಗಳಿಗೂ ಕೊರತೆಯಿತ್ತು. ಅವನ ಮನೆಯಲ್ಲಿ ತಂದೆ, ಅಣ್ಣ ಯಾರೂ ದುಡಿಯುವರಿದ್ದಿಲ್ಲ. ಅವನ ಪಾಲಿಗೆ ಯಾರೂ ಇಲ್ಲವಾಗಿದೆ. ಇನ್ನು ತಾಯಿಯಾದರೂ ಇದ್ದಳೆ? ಅವಳೂ ಇಲ್ಲ.....ತಬ್ಬಲಿ ಮಗು ಮಾಧವರಾಯ. ಹೆಸರಿಗೆ ಮಾತ್ರ ತನ್ನ ಅಜ್ಜಿ

—ತಾಯಿಯ ಅವ್ವ ರಾಧಮ್ಮ ಇದ್ದಳು. ರಾಧಮ್ಮ ದಿನವೂ ರೈಲು ಗಾಡಿಗಳಲ್ಲಿ ಭಿಕ್ಷೆ ಎತ್ತಿ ಮೊಮ್ಮಗನ ಓದನ್ನು ಮುಂದುವರಿಸುತ್ತಿದ್ದಳು. ಆ ಭಿಕ್ಷಾಟನೆಯಿಂದ ಊಟ, ಬಟ್ಟೆ, ಶಾಲೆ ಎಲ್ಲವೂ ಸಾಗಬೇಕಾಗಿತ್ತು. ಅವನು ಇದನ್ನು ನೋಡಿ ಒಮ್ಮೊಮ್ಮೆ ಹೇಳುತ್ತಿದ್ದ:

"ಅಜ್ಜಿ, ನಾನು ಪಾಸಾಗುತ್ತಲೂ ಶಾಲೆ ಬಿಟ್ಟು ಗೆಯ್ತುಮಾಡುವೆ. ಆದೆಷ್ಟು ದಿನ ನಿನ್ನ ಭಿಕ್ಷಾಟನೆ ನೋಡಲಮ್ಮ" ಎಂದಾಗ ಆ ಮುದುಕಿ ಹೇಳುತ್ತಿದ್ದಳು: "ನೀನು ಅಂತಹ ಯೋಚನೆಗಳನ್ನು ನಾನಿರುವವರೆಗೆ ಯಾಕಾಗಿ ಯೋಚಿಸುತ್ತೀಯೆ. ಆ ಯೋಚನೆ ಬಿಟ್ಟು ನಿನ್ನ ಪಾಡಿಗೆ ನೀನು ಓದು" ಎನ್ನುತ್ತಿದ್ದಳು.

ಇಂತಹ ಸಂದಿಗ್ಧಸ್ಥಿತಿಗಳನ್ನು ಅರಿತಿದ್ದ ಪ್ರೇಮಚಂದ್ರರು ಅವನ ಮುಂದಿನ ಅಭ್ಯಾಸದ ಬಗ್ಗೆ ಕಳಕಳಿಯಿಂದ ಕೇಳಿದರು. ಅವನಲ್ಲಿ ಹೃದಯಸ್ಥವಾಗಿದ್ದ ಆಕಾಂಕ್ಷೆಯನ್ನು ಕೇಳಿ, ಸಂತೋಷದ ಬಾಷ್ಪಗಳು ಅವರ ಅರಿಯದಂತೆಯೇ ಹೊರಬಂದಿದ್ದವು.

"ಇನ್ನು ಹೊರಡೋಣ. ದೀಪಗಳು ಆಗಲೇ ಹತ್ತಿದವಲ್ಲ" ಎಂದ ರೇಣುಕ.

"ಹ್ಞಾ ನಡೆಯಿರಿ, ತುಂಬಾ ಹೊತ್ತಾಯಿತು" ಎನ್ನುತ್ತ ಪ್ರೇಮಚಂದ್ರರೂ ಹೊರಟರು.

ರೇಣುಕಪ್ರಸಾದನ ಮನೆಯಿಂದಾಗಿ ಅವರೆಲ್ಲ ಹೊರಟುಹೋದರು. ರೇಣುಕ ಮನೆಯೊಳಗೆ ಬರಬೇಕೆಂದು ಕಾಲಿಡುತ್ತಿದ್ದಾಗಲೇ ಅವರ ತಂದೆ,

"ಎಲ್ಲಿಗೆ ಹೊರಟು ಹೋಗಿದ್ದೆ ರೇಣುಕ. ನೆಂಟರು ಬಂದಿದ್ದಾರೆ ಎಂಬುದು ಗೊತ್ತಿದ್ದರೂ ಮನೆಬಳಿ ಇರಬೇಡವೆ?"

ಪ್ರೇಮಚಂದ್ರರೊಡನೆ ಹೊರಗಡೆ ಹೋಗಿದ್ದೆನೆಂದು ಹೇಳಲು ರೇಣುಕನಿಗೆ ಇಷ್ಟ ಬರಲಿಲ್ಲ. ಅದಕ್ಕೆ ತಂದೆ ಏನಾದರೂ ಅಂದರೆ ತುಂಬಾ ಕಷ್ಟವೆಂದರಿತು,

"ಇಂದು ಚರ್ಚಾಸ್ಪರ್ಧೆ ಇತ್ತು. ನಾನೂ ಅದರಲ್ಲಿ ಭಾಗವಹಿಸಿದ್ದೆ" ಎಂದ.

"ಈಗ ಯಾಕೋ ಶಾಲೆಯ ಸಾಹಿತ್ಯ ಚಟುವಟಿಕೆಗಳು ಭರದಿಂದ ನಡೆಯುತ್ತಿವೆ, ಹೌದೇ?"

ಶಿವಣ್ಣಯ್ಯನವರ ಮಾತಿನ ಸರಣಿ ಜಾಡು ತಪ್ಪಿದ್ದನ್ನರಿತು ಸಂತೋಷದಿಂದ "ಹೂಂ, ವಾರ್ಷಿಕೋತ್ಸವ ಮಾಡುತ್ತಾರಂತೆ. ವಾಚನ, ಸ್ಪರ್ಧೆ, ಸಂಗೀತ ಸ್ಪರ್ಧೆ, ಪ್ರಬಂಧ ಸ್ಪರ್ಧೆ ಇತ್ಯಾದಿ ಇಟ್ಟಾಯಿತು. ಇನ್ನೇನು ಆಟಗಳ ಸ್ಪರ್ಧೆ ಒಂದು ಉಳಿದಿದೆ."

ನಿಜವಾಗಲೂ ಅವನು ವಾಕ್ಸ್ಪರ್ಧೆಯಲ್ಲಿ ಆದಿನ ಪ್ರಥಮಸ್ಥಾನ ಗಳಿಸಿದ್ದ. ಅವನು ಹೇಳಿದ ಹಾಗೆ ಆದಿನ ಚರ್ಚಾಸ್ಪರ್ಧೆ ಇದ್ದು, ಸಾಯಂಕಾಲ ನಾಲ್ಕೂವರೆ ಘಂಟೆಗೆ ಅದು ಮುಗಿದು ಹೋಗಿತ್ತು. ಕಾವ್ಯ ವಾಚನದಲ್ಲಿ ಮಾಧು ಮೊದಲ ಪುರಸ್ಕಾರ ಪಡೆದಿದ್ದ. ಚರ್ಚಾಸ್ಪರ್ಧೆ ಯಲ್ಲಿ ರೇಣುಕ ಪ್ರಥಮ ಬಹುಮಾನ ಹೊಡೆದಿದ್ದುದಲ್ಲದೆ, ಪ್ರಬಂಧ ಸ್ಪರ್ಧೆಯಲ್ಲೂ ಮೊದಲನೆಯವನಾಗಿ ಬರಬಹುದೆಂದು ನಂಬಿದ್ದ.

ರೇಣುಕಪ್ರಸಾದನ ಸಾಹಿತ್ಯಾಭಿರುಚಿ ಶಿವಣ್ಣಯ್ಯನವರಿಗೂ ಗೊತ್ತಿತ್ತು. ತಂದೆ ಯಾವುದಕ್ಕಾದರೂ ಹಣ ಕೊಟ್ಟರೆ ಪತ್ರಿಕೆ, ಪುಸ್ತಕಗ ಳನ್ನು ಅವನು ಕೊಂಡುಕೊಳ್ಳುತ್ತಿದ್ದ. ಅನೇಕಬಾರಿ ಪುಸ್ತಕಗಳನ್ನು ಸ್ನೇಹಿ ತರ ಬಳಿ ಕಾಡಿ ಕಾಡಿ ಎರವಲು ತೆಗೆದುಕೊಂಡು ಬರುತ್ತಿದ್ದ. ಹುಡುಗ ರೆಲ್ಲ ಇವನಿಗೆ 'ಪುಸ್ತಕದ ಕ್ರಿಮಿ' ಎಂದು ತಮ್ಮ ಮನಸ್ಸಿನಲ್ಲೇ ಎಂದು ಕೊಳ್ಳುತ್ತಿದ್ದರು. ಆದರೆ ಇವನ ಶ್ರೀಮದ್ಗಾಂಭೀರ್ಯವನ್ನು ನೋಡಿ ಸಲಿಗೆಯಿಂದ ಚೇಷ್ಟೆಮಾಡಲು ಅವರು ಹಿಂಜರಿಯುತ್ತಿದ್ದರು.

"ಪ್ರಬಂಧಸ್ಪರ್ಧೆ ಫಲಿತಾಂಶ ತಿಳಿಯಿತೆ?" ಎಂದು ಆಸ್ಥೆವಹಿಸಿ ಕೇಳಿದರು ಶಿವಣ್ಣಯ್ಯನವರು.

"ಆಯಿತು. ಫಲಿತಾಂಶ ಪ್ರಕಟನೆ ಮಾಡಿಲ್ಲ. ನಾಡದ್ದು ಮಾಡ ಬಹುದು."

"ನಿನ್ನ 'ತ್ರಿದಳ' ಕೊಡು. ಗುರುಶಾಂತಶಾಸ್ತ್ರಿಗಳು ನೋಡುವರಂತೆ. ಯಾವುದಾದರೂ ಲೇಖನ 'ಕಾಂತಿ'ಗೆ ಕೊಟ್ಟಿರುವೆಯೇನು?" ಎಂಬುದಾಗಿ ಪ್ರಶ್ನೆ ಮಾಡಿದರು. ಕೊಂಚ ಸಂಕುಚಿತ ಭಾವನೆಯಿಂದ "ಈ ವಾರ ಯಾವ ಲೇಖನವನ್ನೂ ಕೊಡಲಿಕ್ಕಾಗಲಿಲ್ಲ. ಚಿಕ್ಕ ಕವನ ಒಂದು ಬರೆ ದಿದ್ದೇನೆ."

"ಬಾಪ್ಪ. ರೇಣುಕು ಇಷ್ಟು ಹೊತ್ತಿನವರಿಗೂ ಎಲ್ಲಿಗೆ ಹೋಗಿದ್ದೆ? ನಿನ್ನ ಕಥೆ ನೋಡಬೇಕೆಂದು ತುಂಬಾ ಇಚ್ಛೆಯಾಗಿದೆ. ಎಲ್ಲಿ ತೋರಿಸು"

ಎಂದು ಗುರುಶಾಂತಶಾಸ್ತ್ರಿಗಳು ಕರೆದರು.

"ನಾನೇನೂ ಅಂತಹ ಲೇಖನಗಳನ್ನು ಬರೆಯುವುದಿಲ್ಲ ಅಜ್ಜ. ಎಲ್ಲೋ ಬಿಡುವು ಇದ್ದಾಗ ಒಂದೊಂದು........"

"ಅದನ್ನೇ ನಾನೂ ಕೇಳಿದ್ದು. ತೆಗೆ ನೋಡೋಣ. ಹಾಗೆ ಹಿನ್ನೋಡಬಾರದು. ತಿಳಿದಿದ್ದನ್ನು ಬರೆಯುತ್ತಿರಬೇಕು, ಕೈ ಪಳಗುತ್ತೆ" ಎಂದು ನಸ್ಯ ಏರಿಸಿದರು.

"ಅದೇಕೆ ಹಾಗೆ ಮಾಡುತ್ತೀಯೋ ನಾ ಬೇರೆ ಕಾಣೆ. ಕೊಂಡು ಬಾ ಹೋಗು" ಎಂದು ಶಿವಣ್ಣಯ್ಯ ಹೇಳಿದರು.

ಶಿವಣ್ಣಯ್ಯ ಯಾವಾಗಲೂ ಹಾಗೆಯೇ. ಮನೆಗೆ ಯಾರೇ ಬರಲಿ, ರೇಣುಕನ ಲೇಖನಗಳನ್ನು ತೆಗೆಯಿಸಿ, ಅವನಿಂದಲೇ ಓದಿಸುತ್ತಿದ್ದರು. ಇದರಿಂದ ರೇಣುಕನಿಗೂ ತುಂಬಾ ಪ್ರೋತ್ಸಾಹ ಸಿಕ್ಕಂತಾಗುತ್ತಿತ್ತು. ಮನೆಗೆ ಹೊಸಬರು ಯಾರಾದರೂ ಬಂದರೆ, ತಮ್ಮ ತಂದೆ ಯಾವಾಗ ಹೇಳುವರೋ, ತಾನು ಯಾವಾಗ ಓದುವೆನೋ ಎಂದು ಕಾಯುತ್ತಾ ಕುಳಿತುಕೊಳ್ಳುತ್ತಿದ್ದ. ಆದರೆ ಓದು ಎಂದು ಹೇಳಿದಾಗ, ನಲ್ಲನ ಹೆಸರನ್ನು ಹೇಳುವ ಇಚ್ಛೆಯಿದ್ದರೂ ಬೇಗ ಹೇಳದೆ ಹಗರಣ ಮಾಡುವ ಹೆಂಗಳೆಯರಂತೆ ತಾನೂ ಮಾಡುತ್ತಿದ್ದ. ಇದು ಮಾತ್ರ ಶಿವಣ್ಣಯ್ಯನವರಿಗೆ ಸರಿ ಬೀಳುತ್ತಿದ್ದಿಲ್ಲ.

ರೇಣುಕ 'ತ್ರಿದಳ' ಎಂಬ ಕಥೆಯೊಂದನ್ನು ಬರೆದಿದ್ದ. ಅದನ್ನು ಶಾಸ್ತ್ರಿಗಳ ಎದುರಿಗೆ ಓದಿದಾಗ, ಅವರು ತುಂಬ ಪ್ರಶಂಸಿಸಿ, "ನೀನು ಈ ಸಾಹಿತ್ಯದ ಜೊತೆಗೆ ಆಧ್ಯಾತ್ಮಿಕ ಗ್ರಂಥಗಳನ್ನೂ ಓದು. ಜ್ಞಾನಾರ್ಜನೆ ತುಂಬಾ ಆಗುತ್ತೆ" ಎಂದರು.

"ಓದುತ್ತಿರುವೆ ಅಜ್ಜಯ್ಯ. ಈಗೊಂದು ವರ್ಷದ ಹಿಂದೆ 'ಸಿದ್ಧಾಂತ ಶಿಖಾಮಣಿ' ತರಿಸಿದ್ದೇನೆ. ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಷಟ್ಸ್ಥಲ ಸಿದ್ಧಾಂತವನ್ನು ಉಪದೇಶಿಸಿದ್ದು"

"ಬಹಳ ಸಂತೋಷ—ಬಹಳ ಸಂತೋಷ. ಅಂಥ ಉತ್ತಮಗ್ರಂಥಗಳನ್ನೇ ಓದಬೇಕು"

"ಯಾವುದೋ ಪತ್ರಿಕೆಗೆ 'ಸ್ಮಶಾನದಲ್ಲಿ' ಎಂಬ ಕಥೆ ಕಳಿಸಿದ್ದ. ಅದು ಅಚ್ಚಾಗಿ ಬಂದಿದೆ. ಅದನ್ನೂ ತೋರಿಸು. ಹೋಗು, ಬೇಗ

ಕೊಡು"

"ಒಳಗಿದೆ. ಅದೆಲ್ಲಿ ಬಿದ್ದಿದೆಯೋ ಏನೋ. ಈಗ ಬೇಡ, ಆಮೇಲೆ ತೋರಿಸುತ್ತೇನೆ" ಎಂದ.

"ನನಗೆ ಮೊದಲೇ ಗೊತ್ತಿತ್ತು ಹೀಗೆ ಹೇಳುತ್ತಿಯಾ ಅಂತ. ನಮ್ಮ ದೇವರ ಸತ್ಯ ನಮಗೆ ಗೊತ್ತಿಲ್ಲವೆ! ಇದೊಂದು ದುರ್ನಡತೆ ಬೇಡ, ರೇಣುಕ. ನಿನ್ನ ಈ ಅಧಿಕಪ್ರಸಂಗ ನಿನ್ನ ಪ್ರಗತಿಗೇ ಕುಠಾರ" ಎಂದು ಕೋಪದಿಂದಲೇ ಶಿವಣ್ಣಯ್ಯ ಹೇಳಿದರು

ಈ ಕೋಪದ ಕಿಡಿಗಳಿಂದ ಅವನಿಗೆ ದಂಡದೇಟು ಬಿದ್ದ ಹಾಗೆನ್ನಿಸಿತು. ಹೀಗೆಂದೂ ಹಗರಣ ಮಾಡಬಾರದೆಂದು ಅವನು ಮನಸ್ಸಿನಲ್ಲೇ ಅಂದುಕೊಂಡ. ತಾನು ಯಾಕಾದರೂ ಹೀಗೆ ಮಾಡಿದೆನೋ ಎನ್ನಿಸಿತು ರೇಣುಕನಿಗೆ. ಬೇಗ ಹೋಗಿ ಕಥೆಯನ್ನು ಹುಡುಕಿ ತಂದು ಓದಿದ ಕಥೆಯ ಸಾರಾಂಶ ಹೀಗಿತ್ತು: ಮಂತ್ರ ಮತ್ತು ಜ್ಯೋತಿಷ್ಯ ಬಲ್ಲವನೊಬ್ಬನು ಸ್ಮಶಾನದಲ್ಲಿ ಚಂದ್ರಗ್ರಹಣ ಬಂದಾಗ ಮಂತ್ರಸಿದ್ಧಿಮಾಡಿಕೊಂಡು ದೆವ್ವಗಳನ್ನು ವಶಪಡಿಸಿಕೊಳ್ಳುತ್ತಾನೆ. ದೆವ್ವಗಳು ವಶವಾಗಿದ್ದನ್ನು ನೋಡಿ ಅವನಿಗೆ ತುಂಬ ಸಂತೋಷವಾಗುತ್ತದೆ. ಮೊದಲೇ ಪ್ರಸಿದ್ಧ ಪಡೆದಿದ್ದ ಆ ಜ್ಯೋತಿಷಿ, ದೆವ್ವಗಳ ಸಹಾಯದಿಂದ ಅತಿಮಾನುಷಕಾರ್ಯಗಳನ್ನೆಸಗುತ್ತಾನೆ. ಅವನ ಕೀರ್ತಿ ನಾಲ್ಕು ನಿಟ್ಟಿಗೂ ಬಿರುಗಾಳಿಯಂತೆ ಪಸರಿಸುತ್ತದೆ. ಅವನಿಗೆ "ಮಂತ್ರ ವಿಶಾರದ" ಎಂಬ ಬಿರುದೂ ಲಭ್ಯವಾಗುತ್ತದೆ. ಅದಕ್ಕೆ ತಕ್ಕಂತೆ ಅವನು ಸದಾಚಾರಪ್ರಿಯನೂ ಆಗಿದ್ದ. ಅವನ ವ್ರತ, ಅನುಷ್ಠಾನ, ದೈವಭಕ್ತಿ, ಸದಾಚಾರಸಂಪನ್ನತೆಯಿಂದ ದೆವ್ವಗಳು ಇವನ ಗುಲಾಮತನ ಮಾಡುತ್ತಿದ್ದವು.

—ಹೀಗಿರಲು ಒಬ್ಬ ವೇಶ್ಯೆಯ ಸಂಗದಿಂದ ತನ್ನ ಚಾರಿತ್ರ್ಯವನ್ನು ಕೆಡಿಸಿಕೊಂಡು, ಇವನು ಮಾನಭ್ರಷ್ಟನಾದಾಗ ವಶ್ಯವಾಗಿದ್ದ ದೆವ್ವಗಳು ಇವನ ಪ್ರಾಣಕ್ಕೆ ಸಂಚಕಾರ ತಂದು, ಸಿದ್ಧಿಸ್ಥಳವಾದ ಸ್ಮಶಾನದಲ್ಲಿ ಇವನ ಹೆಣವನ್ನು ತಂದು ಹಾಕುತ್ತವೆ: ಹೀಗೆ ಕಥೆ ಮುಕ್ತಾಯವಾಗುತ್ತದೆ.

ಕಥೆಯ ನಿರೂಪಣಾ ವೈಶಿಷ್ಟ್ಯ ಮತ್ತು ಅವನ ಲಲಿತ ಶೈಲಿಗೆ ಸಂಪಾದಕ ಮಹೋದಯರು ಮೆಚ್ಚಿ, ಕಾಗದ ಒಂದನ್ನು ಹೀಗೆ ಬರೆದಿದ್ದರು: "ನಿಮ್ಮ ಕಥೆ ಬಂದು ತಲುಪಿತು. ಕಥೆಯ ಪಾತ್ರಪೋಷಣೆಗೂ,

ನಿರೂಪಣೆಗೂ ಯಾವ ವಾಚಕನೇ ಆಗಲೀ ತಲೆದೂಗಬೇಕಾಗಿದೆ. ನಿಮ್ಮಂತಹ ಉದಯೋನ್ಮುಖ ಲೇಖಕರು ಕನ್ನಡ ಸಾಹಿತ್ಯಕ್ಕೆ ಹೆಚ್ಚು ಹೆಚ್ಚಾಗಿರಬೇಕು. ಇದನ್ನು ನಮ್ಮ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ" ಎಂದು ಬರೆದಿದ್ದರು.

ಆ ಓಲೆಯನ್ನೂ ಮತ್ತು ಆ ಕಥೆಯನ್ನೂ ಶಾಸ್ತ್ರಿಗಳೂ ಸಹ ಓದಿ ತಲೆದೂಗಿದರು.

"ನೀನು ಕಥೆಯನ್ನು ಚೆನ್ನಾಗಿ ಬರೆದಿದ್ದೀಯೆ. ಉತ್ತಮ ಕವನಗಳನ್ನು ಬರೆಯಲು "ಶಬ್ದಮಣಿದರ್ಪಣ" "ಛಂದೋಂಬುಧಿ" ಮತ್ತು ಹಳೆಗನ್ನಡದ ಉತ್ತಮ ಕಾವ್ಯಗಳನ್ನು ಓದು" ಎಂದು ಸಲಹೆ ಕೊಟ್ಟರು.

ಇಂತಹ ಪ್ರಶಂಸೆಯಿಂದ ಅವನ ಮಾನಸಿಕ ಪರಿಣಾಮ ಯಾವ ಮಟ್ಟಕ್ಕೆ ಹೋಗಬಹುದೆಂದು ನಿರೀಕ್ಷಿಸುತ್ತ ಅವರು ಕುಳಿತರು.

ಯಾವ ಮನುಷ್ಯನೇ ಆಗಲಿ ಪ್ರಶಂಸೆಗಳಿಗೊಳಗಾಗಿ "ತಾನು ಎಲ್ಲರಿಗಿಂತ ಉಚ್ಚ ಮಟ್ಟದಲ್ಲಿದ್ದೇನೆ" ಎಂಬ ಅಹಂಭಾವ ಯಾರಿಗೂ ಬರಬಾರದೆಂದು ಅವನು ಹೇಳಿಕೊಳ್ಳುತ್ತಿದ್ದ; ಅದು ಅವನ ತಾರಕ ಮಂತ್ರವಾಗಿತ್ತು. ಆದುದರಿಂದಲೇ ಹೇಳಿದ. "ಎಲ್ಲಾ ನಿಮ್ಮ ಮತ್ತು ನಟರಾಜನ ಆಶೀರ್ವಾದ"

ಇವನ ಈ ಉತ್ತರ ಶಾಸ್ತ್ರಿಗಳ ಮನಸ್ಸಿಗೆ ಸಂತೃಪ್ತಿಯನ್ನುಂಟು ಮಾಡಿತು. ಈ ರೀತಿ ಇವನು ಸಾಹಿತ್ಯಾಭಿರುಚಿ ಬೆಳೆಸಿಕೊಂಡಿದ್ದಾನೆಂದು, ಅವರು ಎಂದೂ ಎಣಿಸಿರಲಿಲ್ಲ. ಮಗುದೊಮ್ಮೆ ಅದೇ ಅಗಳನ್ನು ಪರೀಕ್ಷಿಸಬೇಕೆಂದು ಯೋಚಿಸಿ ಶಾಸ್ತ್ರಿಗಳು,

"ನೀನು ಅಮರಕೋಶ ಓದಿದ್ದೀಯಾ? ಅಮರ ಓದು. ಅಮರದ ಕಂಠಪಾಠದಿಂದ ಅಪಾರ ಶಬ್ದ ಭಂಡಾರವನ್ನು ಸಂಗ್ರಹಿಸಬಹುದು. ಆಗ ನಿನ್ನನ್ನು ಯಾವ ಹಿಂದಿನ ಕವಿಗಳು ಸೋಲಿಸಬಲ್ಲರು?. ... " ಎಂದ ಮಾತಿನಲ್ಲಿ ಸ್ವಲ್ಪ ಅಣಕದ ಧ್ವನಿಯಿದ್ದರೂ ಅದನ್ನು ತೇಲಿಸಿ ಹೇಳಿದರು.

"ಎಂತಹ ಮಾತು ಹೇಳುತ್ತೀರಿ ಅಜ್ಜ! ಆ ಹಿಂದಿನ ಕವಿಗಳೆಂದರೇನು! ? ನಾನೆಂದರೇನು? ಯಾವ ಹಿಂದಿನ ಕವಿಗಳನ್ನಾದರೂ ಮೀರಿಸಬಹುದು ಎಂತ ಹೇಳುತ್ತೀರಲ್ಲ. ನನಗೂ ಅವರಿಗೂ ಅಜಗಜಾಂತರ ವ್ಯತ್ಯಾಸ; ಭೂಮಿ ಆಕಾಶಗಳ ತಾರತಮ್ಯ–ಧ್ರುವದಷ್ಟು ದೂರ–ನಾನೆಲ್ಲಿ

ಅವರೆಲ್ಲಿ? ಅವರ ಪಾದದ ಕಣಕ್ಕೂ ಸಮನಾಗಲಾರೆ."

ಇವನ ಮಾತನ್ನು ಕೇಳಿ ಶಾಸ್ತ್ರಿಗಳು ಮನಸ್ಸಿನಲ್ಲಿ ಹೇಳಿಕೊಂಡರು. ಸುಖ ಬಂದಾಗ ಹಿಗ್ಗದೆ, ದುಃಖ ಬಂದಾಗ ಕುಗ್ಗದೆ ಇರುವಂತಹ ವ್ಯಕ್ತಿಗಳಲ್ಲೊಬ್ಬ ಇವನು. ಏನು ಮಾಡುವುದು! ಮುಂದೆ ಓದುವ ಚೈತನ್ಯವಿಲ್ಲ. ಹಲ್ಲಿದ್ದವರಿಗೆ ಕಡಲೆ ಇಲ್ಲ. ಕಡಲೆ ಇದ್ದವರಿಗೆ ಹಲ್ಲಿಲ್ಲ.

ರೇಣುಕಪ್ರಸಾದನಿಗೆ ಶಾಸ್ತ್ರಿಗಳ ಸಾಹಿತ್ಯ ವಿಚಾರದಲ್ಲಿ ತಿಳಿದುಕೊಳ್ಳಬೇಕೆಂದೆನ್ನಿಸಿತು. ಅವರು ಕಥೆ, ಕಾದಂಬರಿಕಾರರಲ್ಲದಿದ್ದರೂ ಉತ್ತಮೋತ್ತಮ ಕವಿಗಳಾಗಿದ್ದರು. ವಿವಿಧ ತಂತ್ರಗಳಲ್ಲಿ ಕವನಗಳನ್ನು ರಚಿಸುತ್ತಿದ್ದರು.

"ಏನಜ್ಜಯ್ಯ, ನಿಮ್ಮ ಕವನಗಳು ಪ್ರಕಾಶನ ಕಂಡವೆ?"

"ಇಲ್ಲಪ್ಪ. ರೇಣುಕ, ಹಸ್ತಪ್ರತಿ ಮುಗಿದಿದೆ. ಮುನ್ನುಡಿಯನ್ನು ಯಾರಿಂದಲಾದರೂ ಬರಸಿಯಾದನಂದರ ಬೆಳಕು ಕಾಣುವುದು."

"ನಿಮಗೇಕೆ ಮುನ್ನುಡಿ? ನಿಮಗೆ ಯಾರಿಂದ ಪ್ರೋತ್ಸಾಹ ಸಿಕ್ಕರೇನು, ಸಿಕ್ಕದೆ ಇದ್ದರೇನಂತೆ. ನೀವು ಕೀರ್ತನಕಾರರು, ಕವಿಗಳು...."

"ಹಾಗೆಲ್ಲಾ ಹೇಳಲಿಕ್ಕಾಗುತ್ತದೆಯೇ? ಮುನ್ನುಡಿ ಬಂಗಾರದ ಉಂಗುರಕ್ಕೆ ವಜ್ರದ ಹರಳಿದ್ದ ಹಾಗೆ ಮುನ್ನುಡಿ ಇಲ್ಲದ ನನ್ನ ಆ ಮೊದಲ ಕವನಸಂಗ್ರಹಕ್ಕೆ ಕಳೆ ಬಂದಿತೇ ಶಿವಣ್ಣಯ್ಯನವರೆ?"

"ಅದೇನೋ ನನಗೆ ಅಷ್ಟಾಗಿ ತಿಳಿಯದು. ನಮಗೆ ಅದು ಹರಿಯದ ವಿಚಾರ. ನಿಮಗೆ ಗೊತ್ತು, ಲೇಖನ ಪಟುಗಳಿಗೆ" ಎಂದು ನಡುವೆ ಬಾಯಿ ಹಾಕಿದರು ಶಿವಣ್ಣಯ್ಯನವರು.

"ಒಳ್ಳೆಯದು. ಪರೀಕ್ಷೆ ತೀರಿದ ಕೂಡಲೆ ನಮ್ಮೂರ ಕಡೆಗೆ ಒಂದು ದಿನ ಬಂದು ಹೋಗು. ಅವಳೂ ನಿನ್ನನ್ನು ನೋಡಬೇಕೆಂದು ಆಗಾಗ ಹೇಳುತ್ತಿರುತ್ತಾಳೆ."

"ಆಗಲಿ, ನಾನೂ ವಿಶ್ವನಾಥ ಒಟ್ಟಿಗೆ ಬಂದು, ಒಂದೆರಡು ದಿನ ಇದ್ದು ಹೋಗುತ್ತೇವೆ."

"ರೇಣುಕ, ನೆಂಟರೆಲ್ಲಾ ನಾಳೆ ಬೆಳಗಿನ ಗಾಡಿಗೆ ಹೊರಡುವರು. ಬೆಳಿಗ್ಗೆ ಎಲ್ಲಿಗೂ ಹೋಗದೆ ರೈಲಿನ ತನಕ ನೀನೂ ಗುರುಮೂರ್ತಿ ಸಾಧ್ಯವಾದರೆ ವಿಶ್ವನಾಥ—ಹೋಗಿ ಕಳಿಸಿ ಬನ್ನಿ" ಎಂದರು ಶಿವಣ್ಣಯ್ಯ.

## ೩

ಹೊಸಳ್ಳಿ ಗುರಯ್ಯನವರ ಮಗ ಉಮಾಪತಿಯೊಂದಿಗೆ ನಾಳೆ ಮಾಲಿನಿ ಲಗ್ನ. ವಿವಾಹದ ಸಿದ್ಧತೆಗಳು ಭರದಿಂದ ನಡೆದಿವೆ. ಶಿವಣ್ಣಯ್ಯ ತಮ್ಮ ಆಪ್ತೇಷ್ಟರನ್ನೆಲ್ಲಾ ಬರಮಾಡಿಕೊಂಡಿದ್ದಾರೆ. ಎಲ್ಲರೂ ಎಲ್ಲ ಕೆಲಸಗಳು ಸಾಂಗವಾಗಿ ನಡೆಯಲು, ಒಂದೊಂದು ಕೆಲಸವನ್ನು ಹಂಚಿ ಕೊಂಡು ಮಾಡುತ್ತಿದ್ದಾರೆ.

ಈ ಮಧ್ಯೆ ಶಿವಣ್ಣಯ್ಯನವರಿಗೆ ಒಬ್ಬರು ಹೇಳಿದರು: "ನೋಡಿ, ಎಲ್ಲರನ್ನೂ ಆದರದಿಂದ ಬರಮಾಡಿಕೊಂಡು ವಿಜೃಂಭಣೆಯಿಂದ ವಿವಾಹ ಮಾಡುತ್ತಿದ್ದೀರಿ. ನಿಮ್ಮ ಅಣ್ಣನ ಮಗನನ್ನೂ, ನಿಮ್ಮ ಅಣ್ಣಂದಿರನ್ನೂ ಕರೆಯಬಾರದೆ? ಅವರೆಂತಹ ವಿಶ್ವಾಸಘಾತುಕರೇ ಇರಲಿ, ನಿಮಗೇನು ಮಾಡುತ್ತೆ? ಮನೆಯಲ್ಲಿ ಲಗ್ನ ಎಂದಮೇಲೆ ಕರೆಯುವುದು ವಿಹಿತ." ಆ ಪ್ರಕಾರ ಅವರು ಅಣ್ಣ ಚಂದ್ರಶೇಖರಯ್ಯ ಮತ್ತು ಬಸವರಾಜನನ್ನು ಕರೆ ದಿದ್ದಾರೆ. ಅವರೂ ಸಹ ಪ್ರೀತಿಯ ತೆಳುಹೊದಿಕೆಯನ್ನು ತಮ್ಮ ಪಾಷಾಣ ಹೃದಯಕ್ಕೆ ಮುಚ್ಚಿಕೊಂಡು ಬಂದಿದ್ದಾರೆ.

ಇಂದಿನ ರಾತ್ರಿ ನೆಂಟರು ಬರುತ್ತಾರೆ. ಆದ್ದರಿಂದ ಅಳಿಯದೇವರ ಸುಸ್ವಾಗತಕ್ಕೆ ಕಾರೊಂದನ್ನು ಗೊತ್ತುಮಾಡಿದ್ದಾರೆ. ಊರ ಅಗಸೆ ಬಾಗಿಲಿನಿಂದ ಮೆರವಣಿಗೆ ಬರುತ್ತದೆ. ಲಗ್ನದ ದಿನ ಆರತಕ್ಷತೆ ಮುಗಿದ ಮೇಲೆ ಸುಶ್ರಾವ್ಯವಾದ ಸಂಗೀತ ಕಛೇರಿ ನಡೆಯಬೇಕೆಂದೂ ಶಿವಣ್ಣಯ್ಯ ನವರ ಇಷ್ಟ. ಒಟ್ಟಿನಲ್ಲಿ ಯಾವುದಕ್ಕೂ ಕೊರತೆಯಾಗದೆ, ನೆಂಟರು ನೆಮ್ಮದಿಯಿಂದ ಹೋದರೆ ಸಾಕೆಂಬುದು ಅವರ ಅಭೀಷ್ಟ.

ಮಾಲಿನಿಯ ಗೆಳತಿಯರಿಗೆಲ್ಲ ಈದಿನ ಸಂತೋಷದ ದಿನ. ಅವರೂ ಈ ಸಮಾರಂಭದಲ್ಲಿ ಭಾಗವಹಿಸಿದ್ದಾರೆ. ಮಾಲಿನಿ ಮೊದಲಿಗಿಂತ ಗಂಭೀರ ವಾಗಿರುವುದನ್ನು ನೋಡಿ ಅವಳ ಗೆಳತಿ ಪಾರು ಕೊಂಕು ಧ್ವನಿಯಲ್ಲಿ ಹೇಳಿದಳು: "ಇನ್ನೇನು? ನಮ್ಮ ಮಾಲಿನಿ ಲಗ್ನವಾದಮೇಲೆ ಮಾತನಾಡಿಸು ವುದನ್ನೇ ಎಲ್ಲಿ ಬಿಡುವಳೋ!"

ಅವಳೆಲ್ಲ ಪ್ರಶ್ನೆಗಳಿಗೆ ಮಾಲಿನಿಯ ಒಂದೇ ಉತ್ತರ: "ಥೂ, ಹೋಗೆ

ಪಾರು....

ಉಮಾಪತಿಯನ್ನು ಕಾರಿನಲ್ಲಿ ಕರೆದುತಂದರು. ನೆಂಟರಿಗೆ ಈ ಮೆರವಣಿಗೆ ಬಹಳ ಆಹ್ಲಾದವನ್ನುಂಟುಮಾಡಿತು. ಉಮಾಪತಿಗಂತೂ ತುಂಬಾ ಸಂತೋಷವಾಗಿದೆ. ಅವನೆಂದೂ ಕಾರಿನಲ್ಲಿ ಹತ್ತಿರಲಿಲ್ಲ. ಅವನಿಗೀಗ ರಾಜಪದವಿ ಬಂದು ಬಿಟ್ಟಿದೆಯೆನ್ನಬಹುದು.

"ಬಿಡದಿ ಮನೆಯಲ್ಲಿ ಸರಿಯಾದ ವ್ಯವಸ್ಥೆಯಿಲ್ಲ. ಗೂಡಾರಗಳು ಇದ್ದರೆ, ಚಾಪೆಇಲ್ಲ. ಚಾಪೆಗಳಿದ್ದರೆ ಇನ್ನೊಂದಿಲ್ಲ" ಹೀಗೆ ಆದಿನ ರಾತ್ರಿಯಿಂದಲೇ ದೂರುಗಳು ಪ್ರಾರಂಭವಾದುವು. ಉಮಾಪತಿಯೊಂದಿಗೆ ಬಂದವರಲ್ಲಿ ಒಬ್ಬರಾದರೂ ಯಜಮಾನರಿದ್ದಿಲ್ಲ. ಎಲ್ಲರೂ ಹುಡುಗರೇ ಎಂದು ಹೇಳಬಹುದು ತಲೆಗೊಬ್ಬೊಬ್ಬರು ಒಂದೊಂದು ಮಾತನಾಡುತ್ತಿದ್ದರು.

ಮಾರನೆಯ ದಿನ ಲಗ್ನ ಜರುಗಿ ಊಟ ಹೊತ್ತಾಯಿತು. ಆದುದರಿಂದ ಬೀಗರು ತಾವು ಹೊರಟೇಬಿಡುತ್ತೇವೆಂದು ಕುಳಿತಿದ್ದರು. ಅವರು ಬರಿಯ ಇಂತಹ ಕ್ಷುಲ್ಲಕ ಜಗಳಗಳನ್ನು ತೆಗೆಯುತ್ತಿದ್ದರು.

ಆದಿನ ಬಡವರ ಪ್ರೇಮವೆಂದು ಉಂಗುರವನ್ನೂ ಮತ್ತು ಉಡುಗೊರೆಗಳನ್ನೂ ಅಳಿಯನಿಗೆ ಮುಯ್ಯಿಮಾಡಲು ಹೋದಾಗ ಅವನು ಅವುಗಳನ್ನು ಸ್ವೀಕರಿಸಲಿಲ್ಲ. ಇದರಿಂದ ಶಿವಣ್ಣಯ್ಯನವರಿಗೆ ಅಸಮಾಧಾನವಾಗದೇ ಇರಲಿಲ್ಲ. ಅವರು ಬಡವರಾಗಿದ್ದರೂ ವಿಜೃಂಭಣೆಯಿಂದಲೇ ಲಗ್ನ ಮಾಡಿದ್ದರೆನ್ನಬಹುದು; ಅದೊಂದೂ ಸಾರ್ಥಕವಾಗಲಿಲ್ಲವಲ್ಲ—ಎಂದು ಈಗ ಅವರ ಯೋಚನೆ. ಅಲ್ಲಿಂದಲೇ ಶಿವಣ್ಣಯ್ಯನವರಿಗೆ ಅಸಮಾಧಾನದ ಬೀಜಾಂಕುರವಾಯಿತು. ಆಗಲೇ ಅವರಿಗೆ ಈ ಹಳ್ಳಿಯವರ ಜೊತೆಗೆ ಆದೇಕೆ ಸಂಬಂಧ ಬೆಳೆಸಿದೆನೋ ಎನ್ನಿಸಿತು. ಪರಂತು ಹಳ್ಳಿಯಲ್ಲಿ ಎಲ್ಲರೂ ಹೀಗೆಯೇ ಇರುತ್ತಾರೆಯೇ? ನಜ್ಜನರ ಬೀಡುಗಳೆಂದರೆ ಹಳ್ಳಿ. ಆದರೆ ಉಮಾಪತಿ ಇಂತಹ ಅಳಿಯನೆಂಬುದು ಯಾರಿಗೆ ಗೊತ್ತು?

ಅವರು ಸುವ್ಯವಸ್ಥೆ ಇಲ್ಲವೆಂದು ಜಗಳ ಕಾದ ಪ್ರಕರಣಕ್ಕೆ ಹಲುಬುತ್ತಿರಲಿಲ್ಲ; ಆದರೆ ಉಮಾಪತಿ ಮುಯ್ಯಿ ತೆಗೆದುಕೊಳ್ಳದೇ ಇದ್ದುದಕ್ಕೆ ಅಸಂತೋಷಪಟ್ಟುಕೊಂಡರು. ರೇಣುಕನಂತೂ ಮನನೊಂದುಕೊಂಡನು.

ಅವನು ತಂಗಿಯ ವೀಳ್ಯಕಾರ್ಯಕ್ಕೆ ಮುಂಚಿತವಾಗಿಯಾಗಲೀ, ಅಥವಾ ನಂತರವೇ ಆಗಲಿ, ಅವರ ಮನೆ, ಮೆಟ್ಟಿಲು ಹತ್ತಿರಲಿಲ್ಲ. ಉಮಾಪತಿ ಒಂದು ಬಾರಿಯಾದರೂ ಅವನನ್ನು ಕರೆದಿರಲಿಲ್ಲ. ಆದರೆ ಇವರು ಬಂದು, ನಾಚಿಕೆಯಿಲ್ಲದೆ ಅಟಾಟೋಪ ಮಾಡುತ್ತಿರುವುದನ್ನು ನೋಡಿ ಅವನು ಬೇಸತ್ತ. ಹಿಂಡಿನಲ್ಲಿ ಏನಾದರೂ ಒಳಿತು ಕೆಟ್ಟದಾಗುವುದು ಸಹಜ. ಅದನ್ನು ಸಹನಶೀಲತೆಯಿಂದ ಪರಿಹಾರವನ್ನೇಕೆ ಮಾಡಿಕೊಂಡು ಹೋಗ ಬಾರದೆಂದು ಅವನು ಪಶ್ಚಾತ್ತಾಪಪಟ್ಟುಕೊಂಡ. ವಿವಾಹದ ಮುಂಚೆ ತಮಗೆ ಸಾಧ್ಯವಾದರೆ ಹುಡುಗನಿಗೆ ಮುಯ್ಯಿಮಾಡುವೆವೆಂದು ತನ್ನ ತಂದೆ ಹೇಳಿದ್ದುದು ಹಟಾತ್ತಾಗಿ ಜ್ಞಾಪಕಕ್ಕೆ ಬಂದಿತು. ಅದಕ್ಕೂ ಅವರು ಅಂಗೀ ಕಾರದ ಸಹಿಹಾಕಿ, ಈಗ ಯಾರ ಪ್ರೇರಣೆಯಿಂದಲೋ ಪುಂಡಾಟಿಕೆ ಮಾಡುವುದು ಇವನಿಗೆ ಸರಿಬೀಳಲಿಲ್ಲ. ಇದೂ ಅಲ್ಲದೆ, ಶಿವಣ್ಣಯ್ಯ ಹರ ಳಿನ ಉಂಗುರ ಕೊಡಲಿಕ್ಕೂ ಸಿದ್ಧವಿದ್ದರು.

ಜಿನಸುಗಳನ್ನು ಇಟ್ಟಿದ್ದ ಕೋಣೆಯಲ್ಲಿ ಶಿವಣ್ಣಯ್ಯ ಕುಳಿತಿದ್ದರು. ಅಲ್ಲಿಗೆ ಗಂಗಮ್ಮ ಪೆಚ್ಚುಮೋರೆ ಹಾಕಿಕೊಂಡು ಬಂದು ನಿಂತಳು.

"ಹೇಗೆಯೋ ಆಗಲಿ, ಹೊಳೆಯಲ್ಲಿ ಹುಣಿಸಿ ಹಣ್ಣು ತೊಳೆದ ಹಾಗಾ ಗಂಗವ್ವ" ಎಂದರು ಶಿವಣ್ಣಯ್ಯ.

"ಈಗ ಯಾವ ಮಾತೂ ಆಡಬೇಡಪ್ಪ; ಲಗ್ನ ಸುಸೂತ್ರವಾಗಿ ಸಾಗಲಿ. ಬಂದಿದ್ದನ್ನು ಸಹಿಸಿಕೊಂಡು ಸುಮ್ಮನಿದ್ದು ಬಿಡು." ಎಂದು ಆ ಮಾತನ್ನು ಗಂಗಮ್ಮ ಅಲ್ಲಿಗೇ ನಿಲ್ಲಿಸಿದಳು.

ಈ ರೀತಿ ಮನಸ್ಸಿಗೆ ಬೇಸರವಾಗುವ ಪ್ರಕರಣ ನಡೆದದ್ದು ಆಕೆಗೂ ಅಸಹ್ಯವೆನಿಸಿತ್ತು. ಇದರಲ್ಲಿ ಬಸವರಾಜನ ದಾಯಾದಿ ಮತ್ಸರದ ಕೈವಾಡ ಇಲ್ಲದೇ ಇಲ್ಲ ಎಂಬುದನ್ನು ಆಕೆ ಅರಿತಿದ್ದಳು. ಆದರೆ ಕಾಲ ಮಿಂಚಿ ಹೋಗಿತ್ತು! ಏನು ಮಾಡಲಿಕ್ಕೂ ಸಾಧ್ಯವಿರಲಿಲ್ಲ. ಸಂಗೀತ ಕಛೇರಿ ಆ ದಿನ ಇದ್ದರೂ ಯಾರಿಗೂ ಕೇಳುವ ಇಷ್ಟವೇ ಇದ್ದಿಲ್ಲ. ಆ ಸಂಗೀತದ ಸುಶ್ರಾವ್ಯ ದನಿ ದುಃಖದ—ಆ ವೇದನೆಯ ಅಲೆಗಳೋ ಎಂಬಂತೆ ಶಿವಣ್ಣಯ್ಯನವರಿಗೆ ಭಾಸವಾಯಿತು . . .

ರೇಣುಕಪ್ರಸಾದನ ಮುಖವಂತೂ ಕಪ್ಪಿಟ್ಟು ಹೋಗಿತ್ತು. ಗುರು ಮೂರ್ತಿ ಏನೂ ಮಾಡಲಾರದೆ ನಿಸ್ಸಹಾಯನಾಗಿದ್ದ.

ಬೀಗರನ್ನು ಕೆಣಕಬೇಕೆಂದೋ ಏನೋ ಮಾರನೆಯ ದಿನ ಮಧ್ಯಾಹ್ನ ಉಮಾಪತಿ ಅಂದು ಬಿಟ್ಟ:

"ನಮಗೆ ನೂರಾರು ಹೆಣ್ಣುಗಳಿದ್ದವು. ನಾನಾರೂ ಯಾಕಾಗಿ ಒಪ್ಪಿಕೊಂಡೆನೊ....ಈಗಿನ ಕಾಲದಲ್ಲಿ ಮೂರು ಕಾಸಿಗೊಂದು ಹೆಣ್ಣು."

ಯಾರಿದ್ದಾರೆ, ಯಾರಿಲ್ಲ ಎಂಬುದನ್ನೂ ಅವನು ಯೋಚಿಸಿರಲಿಲ್ಲ. ಬೇರೆ ಅವನು ಯಾವ ಮಾತನ್ನೇ ಆಡಿದ್ದರೂ ಗಂಗಮ್ಮ ಸಹಿಸಿಕೊಳ್ಳುತ್ತಿದ್ದಳು. ಆದರೆ ಈ ಮಾತು ಆಕೆಗೆ ತುಂಬಾ ನೋವನ್ನುಂಟುಮಾಡಿತು. ಆಕೆ ಮಾಲಿನಿಯನ್ನು ಸಾಕಿ—ಸಲಹಿ ವಿದ್ಯೆಯನ್ನು ಕಲಿಸಿದ್ದು—ಪದವೀಧರ ವರನಿಗೆ ಕೊಡಬೇಕೆಂದು ಯೋಚಿಸಿದಾಗ, ಅವನಿಗೆ ಕೊಡುವುದನ್ನು ಬಿಡಿಸಿ, ಉಮಾಪತಿಗೆ ಕೊಡಿಸಿದ್ದು—ಅದಕ್ಕಿಂತ ಪ್ರಥಮ ರೇಣುಕ ಆಳವಾಗಿ ಯೋಚಿಸಿ, ಸಂಬಂಧ ಬೆಳಿಸಲು ಬೇಡವೆಂದಿದ್ದು—ಎಲ್ಲಾ ಆಕೆಗೆ ನೆನವಾದವು. ತಾನೆ ಅವಳ ಕುತ್ತಿಗೆಗೆ ತುತ್ತಾದೆನೆಂದು ಅನ್ನಿಸಿದರಲ್ಲಿಲ್ಲ ಗಂಗಮ್ಮನಿಗೆ. ಇವೆಲ್ಲವೂ ನಡೆದದ್ದು ಕೇವಲ ಎರಡು ನಿಮಿಷಗಳಲ್ಲಿ! ಹೆಣ್ಣಿನ ಸಹಜ ಹೃದಯ ಈ ಮಾತನ್ನು ಕೇಳಲಾಗಲಿಲ್ಲ. ಸಹನಶೀಲತೆಯ ಹಯದ ಲಗಾಮು ತಪ್ಪಿಬಿಟ್ಟಿತು. ಆ ಕುದುರೆಯ ಖುರಪುಟದಿಂದೆದ್ದ ಧೂಳಿನಲ್ಲಿ ಆಕೆ ಮುಚ್ಚಿಹೋದಳು.

"ನಮಗೆ ಅನೇಕ ವಿದ್ಯಾವಂತ ವರಗಳಿದ್ದವು. ನೀನೇ ಬೇಕೆಂದು ಮಾಲಿನಿ ಕಾದು ಕುಳಿತಿರಲಿಲ್ಲ"

"ನನಗೂ ಸಹ ವರದಕ್ಷಿಣೆ ಕೊಡುತ್ತೇವೆಂದು ಅನೇಕರು ಗಂಟುಬಿದ್ದಿದ್ದರು. ಅವುಗಳನ್ನು ತ್ಯಜಿಸಿ ಇಲ್ಲಿ ಲಗ್ನ ಮಾಡಿಕೊಂಡಿದ್ದಕ್ಕೆ ಮರ್ಯಾದೆ ಕೊಟ್ಟಿರಲ್ಲ!"

ತನಗೆ ವರದಕ್ಷಿಣೆ ಕೊಡುವ ಮಹಾನುಭಾವರು ಯಾರಿದ್ದರೋ ಅವನಿಗೇ ತಿಳಿದಿರಲಿಲ್ಲ. ಬಾಯಿಗೆ ಬಂದಹಾಗೆ ಅವನು ಅಹಂ ತೋರಿಸಿಕೊಂಡ.

"ಓಹೋ ಇನ್ನು ಏನೆಲ್ಲ ಕೊಡಬೇಕು . . . ಇನ್ನೂ ಏನಾಗ ಬೇಕಾಗಿತ್ತು?"

"ಓಹೊ! ತುಂಬಾ ಇತ್ತಿದ್ದೀರಿ. ಮುಯ್ಯಿ—ಉಡುಗೊರೆ ಎಂದೂ ಮುಂದೆ ಕೇಳದಂತೆ ಕೊಟ್ಟಿದ್ದೀರಿ."

ಗಂಗಮ್ಮನ ಮನಸ್ಸು ಇನ್ನೂ ವಿಚಲಿತವಾಯಿತು.

"ನೀನೇ ಬಂದು ಹೆಣ್ಣು ಕೊಡಿರೆಂದು ಅಂಗಲಾಚಿದ್ದಕ್ಕೆ ಕೊಟ್ಟೆವು. ನಿನ್ನ ಈ ಕೆಟ್ಟಮತಿಯನ್ನು ನೋಡಿ ಗುರುಸಿದ್ಧಯ್ಯನವರು ಬಿಟ್ಟರು. ಯಾರ ಮಾತಿಗೆ 'ಓ' ಗೊಟ್ಟು ಹೀಗೆ ತರಲೆ ತೆಗೆದಿದ್ದೀಯೆಂಬುದು ನನಗೆ ತಿಳಿಯದ ಮಾತೆ?"

ಮನೆಗೆ ಬಂದ ನೆಂಟರೆಲ್ಲರೂ ಏನೂ ಮಾತನಾಡದೆ ಮೂಕ ವೇದನೆಯನ್ನು ತಳೆದಿದ್ದರು....ಅವರು ಮಧ್ಯೆ ಬಂದು ಬಿಡಿಸಿದರೂ ಉಮಾಪತಿ ಹಿಂಜರಿಯಲಿಲ್ಲ. ಅವನು ತುಂಬ ವ್ಯಗ್ರನಾಗಿ ಮಾತನಾಡುತ್ತಿದ್ದ. ಇನ್ನೂ ಮಾತು ಮುಂದುವರಿಯುತ್ತಲೇ ಇತ್ತು.

"ರೇಣುಕ ಮುಂದಾಗಿ ನಮಗೆ ಹೇಳಿದ್ದ. ನಾವು ಅವನ ಮಾತು ಕೇಳಲಿಲ್ಲ. ಅವನ ಮಾತು ಈಗ ಸ್ಫುಟವಾಗಿ ತಿಳಿಯಹತ್ತಿದೆ . . . ಎಲ್ಲಾ ವಿಧಿಯ ಅಣಕ . . . ಯಾರು ಏನು ಮಾಡಬಹುದು! . . ."

ಜಗುಲಿಯಮೇಲೆ ಕುಳಿತುಕೊಂಡು ತನ್ನ ಕಾಲುಗಳನ್ನು ಚಾಚುತ್ತ, "ಇನ್ನೂ ಕೊಂಚ ತಾಳಿ. ಮುಂದೆ ಗೊತ್ತಾಗುತ್ತೆ, ಹೊಸಳ್ಳಿ ಬೀಗರ ಬಿಸಿ! ಏನೋ ಮಹಾ ಈಕೆಯೇ ನಾಕಿದವಳಂತೆ ಮಾತನಾಡುತ್ತಿದ್ದಾಳೆ. ನೀನು ನನಗೆ ಹೇಳಬೇಡ ...ಯಾರೂ ನನಗೆ ಬುದ್ಧಿ ಹೇಳಲು ಸಂಬಂಧ ವಿಲ್ಲ" ಎಂದ ಉಮಾಪತಿ.

"ಸಾತ್ವಿಕನ ವೇಷ ಧರಿಸಿ 'ನಾನೆಲ್ಲಿ ಅನುಚಿತ ವರ್ತನೆಗಳನ್ನು ಮಾಡಿದ್ದು? ಕೇಳಿ ಗೊತ್ತೇ? ಹೆಣ್ಣು ಕೊಟ್ಟ ಮಾವಂದಿರೂ ತಂದೆಯೂ ನನಗೆ ಒಂದೇ ಶ್ರೇಣಿಯ ಪೂಜ್ಯರು' ಎಂದು ದೈನ್ಯತೆಯಿಂದ ಹೇಳಿದ್ದಕ್ಕೆ ಗುರುಮೂರ್ತಿಗೂ ಒತ್ತಾಯದಿಂದ ಒಪ್ಪಿಸಿದೆ. ಆದರೇನು? ರೇಣುಕ ಈ ಮರುಳು ಮಾತಿಗೆ 'ಹ್ಞೂ' ಗುಟ್ಟಲಿಲ್ಲ."

"ನಾನು ಏನೆಲ್ಲ ಹೇಳಿದರೂ ನೀವು ಯೋಚಿಸಬೇಕಾಗಿತ್ತು. ಆ ವಿಚಕ್ಷಣೆಯ ಬುದ್ಧಿ ನಿಮ್ಮಂಥ ಮಂಕುಗಳಿಗೇಕೆ?"

"ಇಲ್ಲವೆನ್ನುವುದಕ್ಕೆ ನಿನ್ನ ಆಗ್ರಹಪೂರ್ವಕ ಕೇಳಿಕೆಯೊಂದು ಆ ರೀತಿ ಮಾರ್ಪಾಟು ಮಾಡಿತ್ತು. ಆಗ ಏಳನೇ ಶನಿ ಬೆಂಗಡೆ ಹಿಂಬಾಲಿಸಿತ್ತು....." ಎಂದಳು ಗಂಗಮ್ಮ ಏರಿದ ಧ್ವನಿಯಲ್ಲಿ.

ಇನ್ನು ಉಮಾಪತಿ ಅವಾಚ್ಯ ಶಬ್ದಗಳನ್ನುಆಡಲಿಕ್ಕೆ ಪ್ರಾರಂಭಿಸಿದ.

ಇದನ್ನು ಕೇಳಿದ, ಮನೆಯಲ್ಲಿದ್ದ ಶಿವಣ್ಣಯ್ಯನವರ ನೆಂಟರು ಉದ್ವಿಗ್ನರಾಗಿ ಜಗಳ ಬಿಡಿಸಿ, ಅವರಣ್ಣಂದಿರ ಮನೆಯತ್ತ ಉಮಾಪತಿಯನ್ನು ಕಳುಹಿಸಿದರು.

—ಶಿವಣ್ಣಯ್ಯನವರೂ ಅಲ್ಲಿಯೇ ಕುಳಿತಿರಬೇಕೇ! ಇದಕ್ಕಿಂತ ಮೊದಲು ಅವರು ನದಿಯ ಕಡೆಗೆ ಹೋಗಿದ್ದರು. ನದಿಯಿಂದ ಬರುವ ಹೊತ್ತಿಗಾಗಲೇ ಜಗಳ ಪ್ರಾರಂಭವಾಗಿತ್ತು. ಮನೆ ಬಾಗಿಲವರೆವಿಗೂ ಬಂದು, ಪುನಃ ಹಿಂತಿರುಗಿ ಅವರು ಚಂದ್ರಶೇಖರಯ್ಯನವರ ಕಟ್ಟೆಯ ಮೇಲೆ ಹೋಗಿ ಕುಳಿತುಕೊಂಡಿದ್ದರು. ಅಲ್ಲಿಗೆ ಉಮಾಪತಿಯೂ ಬಂದ.

"ಇಬ್ಬರಿಗೂ ತರಳೆ ಹಚ್ಚಿ ಇಲ್ಲಿ ಕೂತುಕೊಂಡಿರಾ ...?" ಎಂದ.

ಅವರ ಎದೆ ದಿಗಿಲೆಂದಿತು. 'ಯಾರು ಜಗಳ ಕಾಯುವುದಕ್ಕೆ ಹೇಳಿದರು? ಯಾರು ಇಲ್ಲಸಲ್ಲದ ವಿಚಾರಗಳನ್ನು ಮನಸ್ಸಿಗೆ ಬಂದಂತೆ ಮಾತನಾಡಲು ಹೇಳಿದರು?' ಇವು ಯಾವೂ ಶಿವಣ್ಣಯ್ಯನವರಿಗೆ ತಿಳಿಯದ ಒಗಟಾದವು. ಅವರ ಹೃದಯ ಅವ್ಯಕ್ತ ವೇದನೆಯಿಂದ ತುಡಿದುಕೊಳ್ಳುವುದಕ್ಕೆ ಪ್ರಾರಂಭಿಸಿತು ಮನೆಗೆ ಬಂದಾಕ್ಷಣ ಶಿವಣ್ಣಯ್ಯ ಗಂಗಮ್ಮನಿಗೆ ಸಿಟ್ಟುಮಾಡಿದರು. ಆಗ ಅಲ್ಲಿದ್ದ ನೆಂಟರೂ ಸಹ ನಡೆದ ಘಟನೆಯ ವಿವರಗಳನ್ನು ಕೂಲಂಕಷವಾಗಿ ಅವರಿಗೆ ಹೇಳಿದರು. ಆಗವರು ಸಮಾಲೋಚನೆ ಮಾಡಿದ ಮೇಲೇ ತಮ್ಮ ಅಳಿಯನದೇ ತಪ್ಪೆಂದು ಅವರಿಗೆ ಭಾಸವಾಯಿತು. ಅಲ್ಲಿಯವರೆವಿಗೂ ಗಂಗಮ್ಮನೇ ಕೆದಕಿ ಬೆದಕಿ ಜಗಳ ತೆಗೆದಿರಬಹುದೆಂದು ಶಿವಣ್ಣಯ್ಯ ಯೋಚಿಸಿದ್ದರು. ಅದಕ್ಕಾಗಿ ಅಳಿಯನ ಪ್ರಶ್ನೆಗೆ ಉತ್ತರವೀಯದೆ ಹೊರಟು ಬಂದಿದ್ದರು.

"ಬಾಪ್ಪ ಉಮಾಪತಿ, ರಾಜೂ ಗುಡಾರ ಬಿಡಿಸು. ಈ ಕಡೆ ಬಾ—ಮೇಲೆ ಬಾ' ಎಂದು ಚಂದ್ರಶೇಖರಯ್ಯ ಅಳಿಯನಿಗೆ ಆದರದ ಸ್ವಾಗತ ನೀಡಿದರು. ಉಮಾಪತಿಗೆ ಇಲ್ಲಿಯವರೆವಿಗೂ ಜಗಳ ಕಾದು ಸಾಕಾಗಿತ್ತೆಂದು ಕಾಣುತ್ತದೆ. ಸ್ವಲ್ಪ ನೀರು ತರಿಸಿಕೊಂಡು ಕುಡಿದು "ಗಂಗಮ್ಮನಿಗೆ ತುಂಬ ಜಂಭ ಮಾವ. ಬಾಯಿಗೆ ಬಂದಂತೆ ಮಾತಾಡುತ್ತಾಳೆ" ಎಂದ.

"ತಮ್ಮ, ನನಗೆ ತಿಳಿಯದ ವಿಚಾರ ಹೇಳುತ್ತೇನೆಂದು ನೀನು ಇಟ್ಟುಕೊಂಡಿರಬಹುದು."

"ಅವಳಿಗೆ ಕಣ್ಣು ನೆತ್ತಿಯ ಮೇಲೆ ಹೊರಟಿವೆ. ಗರ್ವ ಎಂದರೆ ಬಣ್ಣಿಸಲಸಾಧ್ಯ" ಎಂದು ಬಸವರಾಜ ನಡುವೆ ಬಾಯಿ ಹಾಕಿ ಕೇಳಿದ.

"ಏನು ಮಾಡಬೇಕೆಂತ ಹರಿಯಲೊಲ್ಲದು. ರೇಣುಕ ಅಂದನಂತೆ.... ಇದಕ್ಕಿಂತ ಮುಂಚೆ, ಈಗಲ್ಲ.... ನನಗೆ ಹೆಣ್ಣು ಕೊಡಬೇಡಿ ಅಂತ."

"ನಾನೊಂದು ಸೂಕ್ತ ಸಲಹೆ ಹೇಳಲೇನು? ನೀನು ಹೇಳೆಂದರೆ ಹೇಳುತ್ತೇನೆ" ಎಂದ ಬಸವರಾಜ.

"ಹೇಳಿ. ಅದೇನು ಹೇಳಿ" ಎಂದು ಲಗ್ನಕ್ಕೆ ಬಂದವರಲ್ಲಿ ಒಬ್ಬರು ಹೇಳಿದರು.

"ಬೀಡಿ ಹಿಡಿಯಿರಿ. ಆಮೇಲೆ ಮಾತನಾಡುವ" ಎಂದು ಒಂದು ಬೀಡಿಕೊಟ್ಟು ಅವನು ತನ್ನ ತಂದೆಯ ಎದುರಿಗೆ ಸೇದಲಿಕ್ಕೆ ಆರಂಭಿಸಿದ. ಚಹ ಒಂದು ಕೆಟ್ಟ ದುರಭ್ಯಾಸವಾಗಿದ್ದರೂ ಹೇಗೆ ತಂದೆ ತಾಯಿಗಳ ಎದುರಿಗೆ ಕುಡಿಯುತ್ತೇವೆಯೋ, ಹಾಗೆ ಬೀಡಿ ಕುಡಿಯುವುದೂ ಒಂದು ಕೆಟ್ಟ ಚಟವಾಗಿದ್ದರೂ, ಅವರ ಎದುರಿಗೆ ಚಹ ಕುಡಿಯುವಂತೆ ಇದನ್ನೂ ಕುಡಿದರೆ, ಕರ್ತವ್ಯಚ್ಯುತಿಯಾಗಲಾದೆಂದು ಅವನ ವಾದ ಸರಣಿ. ಉಮಾಪತಿಗೆ ಸಲಹೆ ನೀಡಲು ಯೋಚಿಸಿದ.

ಈ ಹಿಂದೆ ಬಸವರಾಜ ಶಿವಣ್ಣಯ್ಯನವರ ಜೊತೆಗೆ ಜಗಳಮಾಡಿದ್ದ. ಆಗ ಗುರುಮೂರ್ತಿ ಮತ್ತು ಬಸವರಾಜ ಕೈಹತ್ತಿ ಜಗಳವಾಡಿದ್ದರು. ಆ ಮತ್ಸರದ ಜೊತೆಗೆ ದಾಯಾದಿಮತ್ಸರವನ್ನು ತೀರಿಸಿಕೊಳ್ಳುವ ಸುಸಮಯವನ್ನು ಈಗ ಹೇಗೆ ತಾನೆ ಅವನು ಕಳೆದುಕೊಂಡಾನು? ಅದಕ್ಕೆಂದೇ ಅವನು ಈ ಸಮಯವನ್ನು ಉಪಯೋಗಿಸಿಕೊಂಡಿದ್ದ. ಇಂತಹ ಸುಸಮಯದಲ್ಲಿಯೇ ತನ್ನ ಚಾಕಚಕ್ಯತೆಯನ್ನು ಉಪಯೋಗಿಸಿಕೊಳ್ಳಬೇಕೆಂದೆಣಿಸಿ ಮೊದಲೇ ಸಿದ್ಧವಾಗಿದ್ದು, ತನ್ನ ಬುದ್ಧಿವಂತಿಕೆಯ ಕುಶಾಗ್ರತೆಯನ್ನು ಈಗ ದ್ಯೋತಕಮಾಡಿಕೊಂಡ:

"ಈಗಲೇ ನೀನು ಮಾಲಿನಿ ಕಳಿಸಿಕೊಡಿ ಎಂತ ಕುಳಿತುಕೊಂಡು ಬಿಡು. ಈ ಹೇಳಿಕೆಯ ಪರಿಣಾಮವನ್ನು ನೋಡುತ್ತಿದ್ದು ನನಗೆ ತಿಳಿಸು. ಹೇಗೆ ಬೀಗರು ಕಾಲಿಗೆ ಬೀಳಲಿಕ್ಕೆ ಬರುವರು—ಎಂಬುದನ್ನಾದರೂ ಪರೀಕ್ಷಿಸು."

ಬಸವರಾಜ ಅದೆಷ್ಟು ದಿನಗಳಿಂದ ಈ ಒಂದು ಕುಯುಕ್ತಿಯನ್ನು

ಆಲೋಚಿಸಿ ತನ್ನ ಮಾನಸಿಕ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟಿದ್ದೆನೋ-ತಿಳಿಯದು. ಈಗ ಅವನು ಅದನ್ನು ಸರಿಯಾಗಿ ಉಪಯೋಗಿಸಿಕೊಂಡಿದ್ದ.

"ಸೂಕ್ತ ಸಲಹೆ ಹೇಳಿದೆ. ನನಗೆ ಇಂತಹ ವಿಚಾರಗಳು ಜಗ್ಗನೆ ಬರಲಿಕ್ಕೆ ಸಾಧ್ಯವೇ ? ಎಷ್ಟೇ ಆಗಲಿ ನೀನು ನಾಲ್ಕು ಜನಗಳ ಕೈಯಲ್ಲಿ ಅಡ್ಡಾಡಿದವನು."

"ಅನುಭವಬೇಕು....ಜೀವನದಲ್ಲಿ ಅನುಭವಬೇಕು. ಇಂಥವರನ್ನು ಬಗ್ಗಿಸಲಿಕ್ಕೆ ನಾವೇ ಸೈ."

"ಹಾಗೆ ಮಾಡು ಬಸವರಾಜ, ನೀನೇ ನಿಜವಾದ ಗಂಡು ನೋಡು. ಶಿವಯ್ಯನ್ನ ಎದುರಿಸಿದವರು ಇಲ್ಲಿಯವರಿವಿಗೂ ಯಾರೂ ಇದ್ದಿಲ್ಲ" ಚಂದ್ರಶೇಖರಯ್ಯ ನುಡಿದ.

ಉಮಾಪತಿ ಅವಡುಗಚ್ಚುತ್ತ "ಯಾರು ನಾನು—ಹೊಸಳ್ಳಿ ಉಮಾಪತಿ ! ಯಾರೆಂದೋ ತಿಳಿದುಕೊಂಡು ಬಿಟ್ಟಿದಾರೆ. ಇಂಥವೆಷ್ಟು ಬಂದರೂ ಬಗ್ಗು ಬಡಿಯಬಲ್ಲೆ. ಹಿಂದೆ ತಿಮ್ಮಲಾಪುರದಲ್ಲಿ ನಡೆದ ಪ್ರಕರಣಕ್ಕೆ ಜೈಲಿಗೆ ಹೋಗಲಿಕ್ಕೂ ಹೆದರದೆ ಎದುರಿಸಿದ್ದನ್ನು ಕೇಳಿದರೆ, ಶಿವಣ್ಣಯ್ಯನ ಎದೆ ಒಡೆದು ಹೋದೀತು !"

ಅಷ್ಟು ಹೊತ್ತಿಗಾಗಲೇ ಮೂರು ಲೋಟಗಳಲ್ಲಿ ಕಾಫಿ ಬಂತು. ಕಾಫಿ ಕುಡಿದು, ಈ ಗೆಳೆಯರು ಇಸ್ಪೀಟು ಆಟಕ್ಕೆ ಕುಳಿತರು. ಚಂದ್ರಶೇಖರಯ್ಯನಿಗೆ ಎಂದೂ ಇಲ್ಲದೆ ಈ ದಿನ ಕಳೆ ತುಂಬಿ ಸೂಸುತ್ತಿತ್ತು. ಎಂಬತ್ತು ವರ್ಷದ ಮುದುಕನಾಗಿದ್ದರೂ ಇನ್ನೂ ತನ್ನ ಖಾಸಾ ತಮ್ಮನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ಸಂಕುಚಿತ ಮನೋಪ್ರವೃತ್ತಿ ! ಅದಕ್ಕಾಗಿಯೇ ತನ್ನ ಮಗನನ್ನೂ ಪ್ರೇರೇಪಿಸುತ್ತಿದ್ದಾರೆ !

ಮಾತನಾಡುವಾಗ ಎದುರಿಗಿದ್ದು ಅವರಂತೆಯೇ ಎರಡು ಮಾತನಾಡಿ ಗುಪ್ತಚಾರರ ಕೆಲಸ ಮಾಡಿಕೊಂಡು, ಆಗಲೇ ಶಿವಣ್ಣಯ್ಯನವರಿಗೆ ಯಾರೋ ಇದನ್ನು ವರದಿ ಕೊಟ್ಟಿದ್ದರು. ಇಂತಹ ಸಮಯ ನೋಡಿ ಬಸವರಾಜ ಕೈವಾಡ ನಡೆಸಿಯೇ ನಡೆಸುವನೆಂದು ಆಗಲೇ ಅವರು ತಿಳಿದುಕೊಂಡಿದ್ದರು; ಅಂತೆಯೇ ನಡೆದೂ ಹೋಗಿತ್ತು.

ಜಗಳಕಾದ ಪ್ರಕರಣ ಒಂದು ಇವರ ಮನಸ್ಸನ್ನು ಮುಳ್ಳುಚುಚ್ಚಿವಂತೆ ಚುಚ್ಚುತ್ತಿರುವಾಗ, ಇದೊಂದು ಹೊಸ ಸುದ್ದಿ ಕೇಳಿ ಶಿವಣ್ಣಯ್ಯ

ನವರು ಕಣ್ಣೀರಿಟ್ಟರು. ಕೋಣೆಯಲ್ಲಿ ಹೋಗಿ ಚಿಕ್ಕವರು ಅಳುವಂತೆ ಮನಸ್ಸು ತೃಪ್ತಿಯಾಗುವ ತನಕ ಗೊಳೋ ಎಂದು ಅತ್ತರು. ತಮ್ಮ ಜೀವನದಲ್ಲಿ ಅವರು ಇಂತಹ ಯಾವ ಪ್ರಕರಣಗಳನ್ನೂ ಕಂಡಿದ್ದಿಲ್ಲ; ಭವಿಷ್ಯತ್ತಿನಲ್ಲಿಯೂ ಕಾಣುವಂತಿದ್ದಿಲ್ಲ. ಶುಭದ ಮೊದಲನಾಂದಿ ಆರಂಭದಲ್ಲಿ ಪ್ರಜ್ವಲಿಸುತ್ತಿದ್ದು, ಅಶುಭದಲ್ಲಿ ಕೊನೆಗೊಂಡಿತಲ್ಲಾ ಎಂದು ಅವರು ಬಡಬಡಿಸುತ್ತಿದ್ದರು. ಅವರು ಪೂರ್ಣ ನಿಸ್ಸಾಹಯಕರಾಗಿದ್ದರೆಂಬುವುದರಲ್ಲಿ ಯಾವ ಸಂಶಯುವೂ ಇದ್ದಿಲ್ಲ

ವಿವಾಹ ಮಾಡಿಸಲು ಬಂದಿದ್ದ ಪುರೋಹಿತರೊಬ್ಬರು "ನಿಶ್ಚಯ ಕಾರ್ಯವಾದ ಮೇಲೆ ಕನ್ಯೆ ಬಿಡಿಸಿಕೊಳ್ಳುವುದು ಪ್ರಮಾದವಲ್ಲ. ನಾಲ್ಕು ಜನಗಳೆದುರಿಗೆ ಇಂತಹ ಕನ್ಯೆಯನ್ನು ಇಂತಹ ವರನಿಗೆ ಕೊಡುತ್ತೇವೆಂದು ಮಾತನಾಡಿ ಸಕ್ಕರೆ ಹಂಚಿರುತ್ತಾರೆ. ಆದರ ವೀಳ್ಯಕಾರ್ಯದಲ್ಲಿ ಊರಿನ ಹಿರಿಯರನ್ನು ಕರೆದು, ಶಾಸ್ತ್ರೋಕ್ತವಾಗಿ ನಿಶ್ಚಯ ಮಾಡಲಾಗುತ್ತದೆ. ಆದುದರಿಂದ ವೀಳ್ಯಕಾರ್ಯವಾದ ಮೇಲೆ ಬಿಡಿಸಿಕೊಳ್ಳುವುದು ಅನುಚಿತ ನಿಶ್ಚಯ ಕಾರ್ಯವಾದ ಮೇಲೆ, ವರನ ಬಗ್ಗೆ ಏನಾದರೂ ಅನುಚಿತ ವಿಚಾರಗಳು ತಿಳಿದು, ಬೇಡವೆಂದು ಬಯಸಿದರೆ ಬಿಡುವುದು ಪ್ರಮಾದವೂ ಅಲ್ಲ, ಘನವಾದ ತಪ್ಪೂ ಅಲ್ಲ ಎಂದಿದ್ದರು. ಇದನ್ನು ಕೇಳಿದಾಗಿನಿಂದ—ತಮ್ಮ ಅಳಿಯಂದಿರ ಜೊತೆಗೆ ಮುನಿಸು ಮಾಡಿಕೊಂಡು, ಆ ಹೇವಕ್ಕಾಗಿ ಹಿಂದು ಮುಂದು ಯೋಚಿಸಿದೆ, ಕೈಕೊಟ್ಟು ಹಗ್ಗ ಕಟ್ಟಿಸಿಕೊಂಡೆನಲ್ಲಾ—ಎಂದು ಶಿವಣ್ಣಯ್ಯ ಮಿಡುಕಿದರು. ರೇಣುಕ ಪ್ರಸಾದನ ಮಾತು ಈಗ ಅವರ ಮನಸ್ಸಿನಲ್ಲಿ ಮಾರ್ದನಿಗೊಡುತ್ತಿತ್ತು. ಆಗ ಹೇಳಿದ್ದ ಮಾತು ಈಗ ಮಾರ್ದನಿಗೊಡುತ್ತಿತ್ತು!

ಒಬ್ಬಳೇ ಮಗಳನ್ನು ವಿವಾಹವಾದ ದಿನವೇ ಕಳುಹಿಸಬೇಕೆಂದು ಕುಳಿತರೆ ತಮಗೆಂತಹ ಅವಮಾನ! ಇನ್ನೂ ನಿಷೇಕವಾಗದೆ ಎಲ್ಲಿಯಾದರೂ ಗಂಡನ ಮನೆಗೆ ಕಳುಹಿಸುವ ಸಂಪ್ರದಾಯ ಲೋಕರೂಢಿಯಲ್ಲಿದೆಯೇ? ಇಂತಹ ಸಂದಿಗ್ಧವೂ ಕ್ಷುಲ್ಲಕವೂ ಆದ ವಿಚಾರಗಳನ್ನು ಹೇಗೆ ಎದುರಿಸಬೇಕು? ಯಾರಾದರೂ ನಾಲ್ಕು ಜನ ಹೇಳುವುದಿಲ್ಲವೆ? ಹೇಳಿದರೂ ಅದಕ್ಕೆ ಅವನು ಒಪ್ಪದೇ ಹೋದರೆ....ಆಗ? ..ಇನ್ನು ಅವರು ಉತ್ತರಿಸಲಾರದಾದರು. ಉತ್ತರ ಕೊಡುವುದಕ್ಕೆ ಹೊರಟಂತೆ ಆ

ಸಮಸ್ಯೆ ಜಟಿಲವಾಗುತ್ತ ಹೋಗುತ್ತಿತ್ತು. ಈ ಬಗೆ ಹರಿಯದ ಯೋಚನೆಯಿಂದ ಅವರ ಮನಸ್ಸು ಬೇಯುತ್ತಿತ್ತು!

ಜಗಳವಾದ ದಿನ ಮತ್ತು ಮಾರನೆಯ ದಿನ ಉಮಾಪತಿ ಊಟಕ್ಕೆ ಬರಲಿಲ್ಲ. ಶಿವಣ್ಣಯ್ಯ ಊರಿನ ಪ್ರಮುಖ ವ್ಯಕ್ತಿಗಳಿಂದ ಹೇಳಿಸಿ ನೋಡಿದರೂ ಅಳಿಯ ದೇವರು ಜುಮ್ಮೆನ್ನಲಿಲ್ಲ; ಮಣಿಯಲಿಲ್ಲ. ಕಾರಣ ವನ್ನು ಕೇಳಿದಾಗ ಅವನು ಈರೀತಿ ಉತ್ತರವಿತ್ತ.

"ಇವತ್ತೇ ಮಾಲಿನಿ ಕಳಿಸಿದರೆ ಬರುವೆ....ಇಲ್ಲದಿದ್ದರೆ ಬರುವುದಿಲ್ಲ." ಹೇಗೆ ಮಾಡಿದರೂ ನಿಷ್ಠೂರವಾಗಿದ್ದೇನೆ. ಸರಿಯಾಗಿಯೇ ಮುಖ ಕಟ್ಟಿ ಕೊಳ್ಳಬೇಕೆಂದು ಶಿವಣ್ಣಯ್ಯ ಬಿರುಸಾಗಿಯೇ ನುಡಿದರು: "ನೀನೇ ಪ್ರಪಂಚದಲ್ಲಿಲ್ಲದ ಅಳಿಯನೋ ಅಥವಾ ಬೇರೆ ಯಾರೂ ಇಲ್ಲಾಂತ ತಿಳಿದಿರುವೆಯೋ? ಇಂಥ ದುರ್ಬುದ್ಧಿ ಇದೆಯೆಂದು ಮುಂಚೆಯೇ ಗೊತ್ತಿದ್ದರೆ ಈ ಸಂಬಂಧ ಯಾವ ಪುಣ್ಯಾತ್ಮ ಮಾಡುತ್ತಿದ್ದ? ಅದಕ್ಕೇನೇ ನಮ್ಮ ಅಳಿಯಂದಿರು ಬಿಡಿಸಿಕೊಂಡು ಚಾಣಾಕ್ಷರಾದರು. ಈಗಂತೂ ಆಗಿದ್ದಾಗಿ ಹೋಯಿತು. ಹೆಣ್ಣು ಧಾರೆಯೆರೆದ ಮೇಲೆ ಕುಲಕ್ಕೆ ಹೊರತು ಎಂತ ಹೇಳುತ್ತಾರೆ. ಕೊಟ್ಟು ಲಗ್ನವೇನೋ ಆಯಿತು. ಇಂದೇ ಕರೆದುಕೊಂಡು ಹೋಗು...."

ಈ ರೀತಿ ಶಿವಣ್ಣಯ್ಯ ಹೇಳುವರೆಂದು ಅವನು ಎಂದೂ ನಂಬಿರಲಿಲ್ಲ. ಏನೋ ಬೆದರಿಕೆ ಹಾಕಿದರೆ ಅವರು ಕ್ಷಮೆ ಕೇಳಬಹುದೆಂದು ನಂಬಿದ್ದ. ಇದು ಗುರುವಿಗೆ ತಿರುಗು ಮಂತ್ರವಾಗಿ ಪರಿಣಮಿಸಿತು! ಅವರು ಕೆಚ್ಚೆದೆ ಯಿಂದ ಹೇಳಿದ್ದನ್ನು ಕೇಳಿ ಅವನಿಗೆ ಆಶ್ಚರ್ಯವಾಗದೇ ಇರಲಿಲ್ಲ. ಈ ಮಾತಿಗೆ ಮಾಲಿನಿಯೂ ಕೂಡ ಅಂಗೀಕಾರದ ಮುದ್ರೆಯನ್ನು ಹಾಕಿ ದ್ದಳು. "ಅಪ್ಪಯ್ಯ, ನನ್ನ ಹಣೆಯ ಬರಹದಲ್ಲಿ ಬರೆದ ಹಾಗೆ ನಡೆ ಯಲಿ. ನಾನು ಇವತ್ತೇ ಹೊರಡುತ್ತೇನೆ. ಅದಕ್ಕೆ ನೀವು ಇಳಿಯ ಷ್ಟಾದರೂ ಯೋಚನೆಯನ್ನು ದಯವಿಟ್ಟು ಮಾಡಬೇಡಿ." ಎಂದಾಗ ಗಂಗಮ್ಮನ ಕರುಳು ಕೊಯ್ದು ಹೋದಂತಾಗಿತ್ತು. ಎಲ್ಲ ಜನಗಳು, —ಬುದ್ಧಿವಂತಳಾದ ಹುಡುಗಿ, ಓದಿದ್ದು ಸಾರ್ಥಕವಾಯಿತು, ಎಂತಹ ಕಷ್ಟಗಳನ್ನೂ ಪ್ರಚಂಡ ಆಶಾವಾದಿಯಾಗಿ ತಡೆಯಬಲ್ಲಳು—ಎಂದು ಅವಳನ್ನು ಹೊಗಳಿಬಿಟ್ಟರು.

ಈ ವಿಷಯ ಉಮಾಪತಿಯೊಂದಿಗೆ ಬಂದಿದ್ದವರಿಗೆ ತಿಳಿದು, ಹೀಗೆ ಮಾಡಿಕೊಂಡು ಹೋಗುವುದು ತರವಲ್ಲ ಎಂದರು. 'ಅಂತಹುದೇನಾ ದರೂ ಹಟ ತೀರಿಸಿಕೊಳ್ಳಬೇಕೆಂದಿದ್ದರೆ ಮುಂದೆ ತೀರಿಸಿಕೊಳ್ಳುವಿರಂತೆ. ಈಗ ಆ ಬಸವರಾಜನ ಮಾತನ್ನು ಕೇಳಿಕೊಂಡು ಮನೆತನದ ಮರ್ಯಾದೆ ಕಳೆದುಕೊಳ್ಳಬೇಡಿ. ಅವರವರು ದಾಯಾದಿಗಳು. ಹಿಂದಿನ ಯಾವುದೋ ರೊಚ್ಚನ್ನು ಆ ನಿರಪರಾಧಿಗಳ ಮೇಲೆ ತೀರಿಸಿಕೊಳ್ಳುವು ದಕ್ಕೆ ಪ್ರಯತ್ನಿಸುತ್ತಿದ್ದಾರೆ.' ಎಂದು ವ್ಯಾಖ್ಯಾನವಿತ್ತಮೇಲೆ ಉಮಾಪತಿ ಶಿವಣ್ಣಯ್ಯನವರ ಬಳಿ ಬಂದು ತನ್ನದು ತಪ್ಪಾಯಿತೆಂದು ನಮಸ್ಕಾರ ಮಾಡಿದ. ಇದರಿಂದ ಶಿವಣ್ಣಯ್ಯನವರಿಗೆ ಸಂತೋಷವಾದರೂ ಇವನಲ್ಲಿ ಮೊದಲಿನ ಆದರ ಬಹು ಕಡಿಮೆಯಾಯಿತು. ಏನೆಲ್ಲ ಆಗಲಿ ಲಗ್ನ ಸಂತೋಷದಿಂದ ಕೊನೆಗೊಂಡಿತಲ್ಲಾ—ಎಂದು ಯೋಚಿಸಿದಾಗ ಅವರ ಮನಸ್ಸು ನೆಮ್ಮದಿಗೊಂಡಿತು.

ಉಮಾಪತಿ ಗಂಗಮ್ಮನ ಬಳಿಯೂ ಬಂದು ತಪ್ಪೊಪ್ಪಿಕೊಂಡಾಗ ಆಕೆಗೂ ಸಂತೋಷವಾಗದೇ ಇರಲಿಲ್ಲ. ಆದರೆ ಆಕೆಗೆ ಇವನ ವಿಷಯ ದಲ್ಲಿ ಮೊದಲಿನ ಆತ್ಮೀಯಭಾವನೆ ಮಾತ್ರ ಅದೃಶ್ಯವಾಗಿತ್ತು. ಈಗ ಗಂಗಮ್ಮನಿಗೆ ಬಸವರಾಜನ ಮೇಲೆ ಇಲ್ಲದ ಕೋಪ ಉಂಟಾಗಿತ್ತು. ಇಂತಹ ವಿಕೋಪಕ್ಕೆ ಇಟ್ಟುಕೊಂಡಿದ್ದು ಆವನಿಂದಲೇ ಎಂದು ಆಕೆಗೆ ನಿರ್ದಿಷ್ಟವಾಗಿ ಗೊತ್ತಾಗಿತ್ತು. ಈಗ ಬಸವರಾಜನೂ ಲಗ್ನದ ಮನೆ ಕಡೆ ಬರುವುದನ್ನು ಬಿಟ್ಟ. ಲಗ್ನದ ಮೊದಲ ದಿನ ಪ್ರೀತಿಯ ತೆಳು ಹೊದಿಕೆಯನ್ನು ಹೊದೆದುಕೊಂಡು ಬಂದು, ತನ್ನ ಕುತಂತ್ರದಿಂದ ಮತ್ತೆ ಅದನ್ನು ಕಳಚಿಬಿಟ್ಟ. ಉಮಾಪತಿ ಅಕಸ್ಮಾತ್ ತಾನು ಹೇಳಿದ ಕುಹಕ ವಿಚಾರಗಳನ್ನು ಸ್ವಯಂ ಬಯಲಿಗೆಳೆದರೆ ತನ್ನ ಗತಿಯೇನೆಂದು ಅವನು ಯೋಚಿಸುತ್ತಲಿದ್ದ. ಅದಕ್ಕಾಗಿ ಉಪಾಯದಿಂದ ಬಸವರಾಜ ಉಮಾ ಪತಿಯನ್ನು ಕರೆಸಿಕೊಂಡು ಹಾಗೆ ಹೇಳದೆ ಇರುವುದಕ್ಕೆ ದೈನ್ಯತೆಯಿಂದ ಬೇಡಿಕೊಂಡನು. ಅದಕ್ಕೆ ಸರಿಯಾದ ಸಹಕಾರವನ್ನು ಉಮಾಪತಿ ಕೊಡಬೇಕಾಗಿ ಬಂತು.

ಭವಿಷ್ಯತ್ತಿನಲ್ಲಿ ಉಪಯೋಗಿಸಬೇಕಾದ ವಿಚಾರಗಳನ್ನು ಬಸವ ರಾಜ ಯೋಚಿಸುತ್ತಲಿದ್ದ. ಯಾವ ರೀತಿಯಾದರೂ ಸರಿಯೇ ಅವರನ್ನು

ಬಗ್ಗುಬಡಿದು, ತಾನು ಹೇಳಿದ ಹಾಗೆ ಕೇಳಿಕೊಂಡಿರುವಂತೆ ಮಾಡುವುದಲ್ಲದೆ, ಹಿಂದೆ ಸಾಲವಾಗಿ ತೆಗೆದುಕೊಂಡ ಹಣವನ್ನು ಕೊಡದೆ ಇರುವುದಕ್ಕೂ ಆಗುತ್ತದೆ. ಬಿದಿರಿನ ತಟ್ಟೆಗಳೂ ಉಳಿಯುತ್ತವೆ. ಸಮಯ ಸಾಧಿಸಿ ಇನ್ನೂ ಅಲ್ಪ ಸ್ವಲ್ಪ ದುಡ್ಡನ್ನಾದರೂ ಎಳೆಯಬಹುದು. ಆ ದುಡ್ಡಿನಿಂದ ಒಂದು ಕಿರಾಣಿ ಅಂಗಡಿ ತೆಗೆದು, ಒಂದು ಭವ್ಯಭವನವನ್ನು ಕಟ್ಟಿಸಿ ಬಾಡಿಗೆ ಕೊಡಬಹುದು. ಹಲ ದಿನಗಳು ಕಳೆದಮೇಲೆ ಕಿರಾಣಿ ಅಂಗಡಿಯ ವ್ಯವಸ್ಥೆಯನ್ನು ಯಾರಿಗಾದರೂ ಕೊಟ್ಟು, ಇಸ್ಪೀಟು ಇತ್ಯಾದಿ ಮನರಂಜನ ಕಾರ್ಯಗಳಲ್ಲಿ ತೊಡಗಬಹುದು—ಇತ್ಯಾದಿ ಕಲ್ಪನೆಯ ಭವ್ಯ ಹರ್ಮ್ಯಗಳನ್ನು ಕಟ್ಟುತ್ತಿದ್ದ. ಆ ಭವನಗಳಿಗೆ ತಳಪಾಯವೇ ಇರಲಿಲ್ಲ; ಅದರ ಅಂತಸ್ತುಗಳೆಷ್ಟು ಎಂಬುದನ್ನು ಅವನು ಯೋಚಿಸಲರಿಯ. ಇಂತಹ ಯೋಗ ಸಿಕ್ಕಬಹುದೆ?....ಮುಂದೆ ಸಿಕ್ಕೀತೆ? ಎಂದು ಅವನು ಸದಾ ಯೋಚಿಸುತ್ತಿದ್ದ.

*

# ೪

ಶಾಲಾ ಫಲಿತಾಂಶ ಹೊರಬಿದ್ದು ಒಂದು ವಾರವಾಗಿತ್ತು. ಮಾಧವ ರಾಯ ಪ್ರಥಮ ಶ್ರೇಣಿಯಲ್ಲೂ ರೇಣುಕಪ್ರಸಾದ ದ್ವಿತೀಯ ಶ್ರೇಣಿಯಲ್ಲೂ ತೇರ್ಗಡೆಯಾಗಿದ್ದರು. ವಿಶ್ವನಾಥನ ಫಲಿತಾಂಶ ಎಲ್ಲರಿಗೂ ಮೊದಲೇ ಗೊತ್ತಿತ್ತು. ಫಲಿತಾಂಶದ ದಿನ ಪತ್ರಿಕೆಯಲ್ಲಿ ತನ್ನ ಕ್ರಮ ಸಂಖ್ಯೆ ಇಲ್ಲದ್ದನ್ನು ಕಂಡು ವಿಶ್ವನಾಥ ಎಲ್ಲಿಗೋ ಪರಾರಿಯಾಗಿದ್ದ. ಅವರ ತಂದೆ ಈಗೆಂಟು ದಿನಗಳಿಂದ ಹುಚ್ಚರಂತೆ ಮಗನನ್ನು ಹುಡುಕುತ್ತಿದ್ದರು. ಈ ವಿಷಯವನ್ನು ಪತ್ರಿಕೆಯಲ್ಲೂ ಪ್ರಕಟಮಾಡಿದ್ದರು. ಆದರೆ ಯಾವ ಪತ್ತೆಯೂ ಇದ್ದಿಲ್ಲ. ಮಗ ಎಲ್ಲಿಗೆ ಹೋದನೊ? ಇದ್ದಾನೆಯೋ ಅಥವಾ ಇಲ್ಲವೋ? ಎಂಬುದೂ ಸಹ ಅವರಿಗೆ ಗೊತ್ತಾಗುವಂತಿದ್ದಿಲ್ಲ. ರೇಣುಕಪ್ರಸಾದ ಮತ್ತು ಮಾಧವರಾಯ ಕಳಿಕಳಿಯಿಂದ ದಾವಣಗೆರೆಯಲ್ಲಿ ಸ್ನೇಹಿತನನ್ನು ಹುಡುಕಿ ನೋಡಿದರೂ ಅವನು ಸಿಕ್ಕಲಿಲ್ಲ.

ರೇಣುಕಪ್ರಸಾದ ಇತ್ತೀಚೆಗೆ ಕೆಲಸ ಹುಡುಕುತ್ತಿದ್ದನು. ಊರಿನಲ್ಲಿ ಯಾವ ಕೆಲಸವೂ ಸಿಕ್ಕುವಂತಿದ್ದಿಲ್ಲ. ತಮ್ಮ ಕಡೆಯವರು ಬಂದರೆ ಪ್ರೋತ್ಸಾಹದಿಂದ ಸೇರಿಸುತ್ತಾರಂತೆ ಯಾವುದೋ ಒಂದು ಕಾರ್ಖಾನೆಯಲ್ಲಿ; ಇನ್ನುಳಿದವರಿಗೆ ಸ್ಥಳವಿದ್ದರೂ ಕೊಡುವುದಿಲ್ಲ. ಬೇರೆ ಕಾರ್ಖಾನೆಗಳಲ್ಲಿ 'ಕೆಲಸವಿಲ್ಲ' ಎಂದು ಬೋರ್ಡುಗಳನ್ನು ತೂಗು ಹಾಕಿದ್ದರು. ದಾವಣಗೆರೆಯಲ್ಲಿಯೂ ಇದೇ ಬಾಳು. ಎಲ್ಲ ಕಡೆಗೂ ಸ್ಥಳವಿಲ್ಲವೆಂದು ನುಡಿಯುತ್ತಿದ್ದರೇ ವಿನಾ ಒಬ್ಬರಾದರೂ ಆದರದಿಂದ ಕೆಲಸ ಹುಡುಕಿಕೊಂಡು ಬಂದವರನ್ನು ಮಾತನಾಡಿಸಲಿಲ್ಲ. ಒಂದು ಮುದ್ರಣಾಲಯದಲ್ಲಿ ಹೋಗಿ ಕೇಳಿದಾಗ ಅಲ್ಲಿನ ಒಡೆಯರು ಹೀಗೆ ಹೇಳಿದರು:

"ನಮ್ಮ ಮುದ್ರಣಾಲಯದಲ್ಲಿ ಮೂವರಿದ್ದಾರೆ. ಗಿರಾಕಿಗಳೇ ಇಲ್ಲ. ತಿಂಗಳಲ್ಲಿ ಉಳಿಯುವ ಅರವತ್ತು ರೂಪಾಯಿಗಳನನ್ನು ನಿಮಗೆ ಕೊಟ್ಟು ನಾವೇನು ಮಾಡುವುದು........?"

.... ...ಇನ್ನೇನು, ಸ್ಟೇಷನ್ನಲ್ಲಿ ಕೂಲಿ ಮಾಡುವುದು ಇದಕ್ಕಿಂತ ಎಷ್ಟೋ ಉತ್ತಮ ಎನ್ನುವವರೆವಿಗೂ ಅವನ ಮನಸ್ಸು ಬೇಸರವಾಗಿತ್ತು. ಅವನ ತಂದೆಯುವರೂ ಆಸ್ಥೆವಹಿಸಿ ಕೆಲಸ ಹುಡುಕುತ್ತಿದ್ದರು. ಒಂದು

ಸ್ಟೋರಿನಲ್ಲಿ ಕರೆದುಕೊಂಡು ಹೋಗಿ ಕೇಳಿದಾಗ, ಟೈಪರೇಟಿಂಗ್ ಬಂದ ವರಿಗೆ ಮಾತ್ರ ಕೆಲಸಕ್ಕೆ ಸೇರಿಸುತ್ತೇವೆಂದು ಹೇಳಿದರು.

ಇತ್ತ ಮಾಧವರಾಯ ಕಾಲೇಜು ಸೇರುವ ಸಿದ್ಧತೆಯಲ್ಲಿದ್ದ. ಅವ ರಜ್ಜಿ ಸಮಾಜದ ಬಡ ವಿದ್ಯಾರ್ಥಿಗಳ ಫಂಡಿನಿಂದ ಮೊದಲು ಕಟ್ಟುವ ಶುಲ್ಕಕ್ಕಾಗಿ ಸಾಲ ತಂದು ಕೊಟ್ಟಿದ್ದಳು ಪ್ರತಿದಿನವೂ ತನ್ನ ಮೊಮ್ಮಗ ಗಾಡಿಗೆ ಹೋಗಿ ಬರಬೇಕೆಂದು ಆಕೆ ನಿರ್ಧರಿಸಿದ್ದಳು. ಪಾಸಿನ ಮೂರು ರೂಪಾಯಿ ಬಿಟ್ಟರೆ, ತಿಂಗಳಿಗೆ ಒಂದು ರೂಪಾಯಿ ಅವನ ಉಪಾಹಾರ ಇತ್ಯಾದಿ ಖರ್ಚಿಗಾಗಿ ಕೊಡುವೆನೆಂದು ಆಕೆ ಅವನಿಗೆ ಆಸೆ ತೋರಿಸಿದ್ದಳು. ಅಲ್ಲಿ ಅವನು ಕೊಠಡಿ ಬಾಡಿಗೆ ಹಿಡಿಯಲು ಮುದುಕಿ ನಿರಾಕರಿಸಿದ್ದಳು. ಅಂತೂ ಹೇಗಾದರೂ ಮಾಡಿ ಮುಂದಿನ ಅಭ್ಯಾಸಮಾಡಬೇಕಾಗಿತ್ತು ಅವನು.

ಇತ್ತ ಎಲ್ಲೂ ಕೆಲಸ ಸಿಕ್ಕಲಿಲ್ಲ ರೇಣುಕಪ್ರಸಾದನಿಗೆ. ಯಾವುದೋ ದಲ್ಲಾಳಿ ಅಂಗಡಿಯಲ್ಲಿ ಅವರ ತಂದೆ ಮಗನನ್ನು ಅಂಗಡಿ ಗುಮಾಸ್ತೆ ಕಲಿಯುವುದಕ್ಕೆ ನಿಯುಕ್ತ ಮಾಡಿದರು. ಅವರು ಒಂದು ವರ್ಷದ ಮೇಲೆ ಸಾಧ್ಯವಾದರೆ, ಸಂಬಳ ಹಾಕಿ ಕೊಡುವೆವೆಂದು ದೂರದ ಆಸೆಯನು ತೋರಿಸಿದ್ದರು. ರೇಣುಕ ಪ್ರತಿನಿತ್ಯವೂ ಹೋಗಿ ಹಳೆಯ ಗುಮಾಸ್ತನಿಂದ ಲೆಕ್ಕ ಕಲಿಯುತ್ತಿದ್ದ. ಮತ್ತು ಮೇಲ್ವಿಚಾರಣೆಯನ್ನು ಆಗಾಗ ನೋಡಿ ಕೊಳ್ಳುತ್ತಿದ್ದ. ಪ್ರತಿದಿನ ಬೆಳಗ್ಗೆ ಎಂಟು ಘಂಟೆಯಿಂದ ಹನ್ನೆರಡರತನಕ, ನಂತರ ಎರಡರಿಂದ ರಾತ್ರಿ ಒಂಬತ್ತರವರೆವಿಗೂ ಅವನು ಅಂಗಡಿಯಲ್ಲಿ ಬಿದ್ದಿರಬೇಕಾಗಿತ್ತು. ಇತ್ತೀಚಿಗೆ ಅವನ ಸಾಹಿತ್ಯ ಚಟುವಟಿಕೆಗಳೂ ನಿಂತು ಹೋಗಿದ್ದವು. ಅವುಗಳನ್ನೆಲ್ಲಾ ಸೃಜಿಸಲು ಬಿಡುವಿದ್ದರೆ ತಾನೆ? ಆಗಾಗ "ಕಾಂತಿ" ಕೈಬರಹ ಪತ್ರಿಕೆಗೆ ಪುಟ್ಟ ಪುಟ್ಟ ಕವನಗಳನ್ನು ಮಾತ್ರ ಕೊಡುತ್ತಿದ್ದ. ಅವನಿಗೆ ಹಣದ ಅಭಾವವೇನೋ ಪೂರ್ಣವಿತ್ತು. ತಾನು ದುಡಿಯುವ ವ್ಯಕ್ತಿಯಾಗಿದ್ದರೂ ಒಂದು ಕಾಸೂ ಮನೆಗೆ ತರುವಂತಿ ದ್ದಿಲ್ಲ. ಆಗಾಗ ಅಣ್ಣನಿಂದ ಬೇಡಿ ತೆಗೆದುಕೊಳ್ಳುತ್ತಿದ್ದ.

"ಎಷ್ಟು ದಿನಗಳವರೆಗೆ ಹೀಗೆ ದುಡಿಯಬೇಕು? ದುಡ್ಡಿಲ್ಲದೆ ಗೆಯ್ಮೆ ಎನ್ನುವುದು ಎನ್ನುವುದು ಎಂತಹ ಅನ್ಯಾಯ! ನೀನೇನು ಅಂಗಡಿಯ ವ್ಯವಸ್ಥಾಪನೆ ಮಾಡುವುದಿಲ್ಲವೆ? ಈ ರೀತಿ ಹೆರರ ರಕ್ತದಿಂದ ದುಡಿದು

ಹಾಯಾಗಿ ತಿನ್ನಬೇಕೆಂದು ನಿಮ್ಮ ನಾಹುಕಾರು ಮಾಡಿದ್ದಾರೆಯೆ?" ಎಂದು ಗಂಗಮ್ಮ ಒಂದು ದಿನ ಹೇಳಿದಾಗ,

"ಅಕ್ಕಾ, ಲೆಕ್ಕ ಬರೆಯುವುದು ಸರಿಯಾಗಿ ಕೈಗೂಡಿ, ಅವರಿಗೆ ಸಂತೋಷವಾದ ಮೇಲೆ ಸಂಬಳ ಕೊಡಲಿಕ್ಕೆ ಪ್ರಾರಂಭಿಸುತ್ತಾರೆ. ಆ ಸಮಯದ ವರೆಗೆ ಹೇಗಾದರೂ ಮಾಡಿ ಸುಮ್ಮನಿರಬೇಕು" ಎಂದು ಆ ಅಂಗಡಿಯ ಒಡೆಯರು ಮಾಡುತ್ತಿರುವುದು ಶುದ್ಧ ತಪ್ಪೆಂದು ತಿಳಿದಿದ್ದರೂ ಗಂಗಮ್ಮನ ಸಮಾಧಾನಕ್ಕಾಗಿ ಅವನು ಹೇಳಿದ.

"ಯಾವಾಗ ಕೊಡುತ್ತಾರೋ, ಏನು ಕಥೆಯೋ ದೇವರೊಬ್ಬ ಬಲ್ಲ. ನಿಮಗೆ ತಿಳಿದಂತೆ ಮಾಡಿರಪ್ಪ ಇಲ್ಲಿಯವರೆವಿಗೂ ಮಾಡಿದ ಅಭ್ಯಾಸದ ಫಲ ಇಷ್ಟೇಯೇ?"

ಎಂದಾಗ ರೇಣುಕಪ್ರಸಾದನ ಮನಸ್ಸು ಸಿಡಿಯದಿರಲಿಲ್ಲ. ತಾನು ಎಸ್.ಎಸ್ ಎಲ್.ಸಿ. ಮತ್ತು ರಾಷ್ಟ್ರಭಾಷಾ ಪಾಸಾಗಿರುವುದಲ್ಲದೆ ಉತ್ತಮ ಲೇಖಕನೂ ಹೌದು! ಕನ್ನಡ ಲೇಖಕರ ಮಾಲೆಯಲ್ಲಿ ಇವನನ್ನು ಎಣಿಸದೇ ಇದ್ದರೂ ಅವರ ವಾದ ರಜಕ್ಕೆ ಸಮನಾಗಬಹುದೆಂದು ಕೊಳ್ಳುತ್ತಿದ್ದ. ಈಗ ಗಂಗಮ್ಮನ ಮಾತು ಕೇಳಿದಾಗ ಅದು ಹದಿನಾರಾಣೆಯ ಸತ್ಯ ಎನ್ನಿಸಿತು. ಇಲ್ಲಿಯವರೆವಿಗೆ ಓದಿದರೂ ಒಂದು ಮೂವತ್ತು ರೂಪಾಯಿ ಸಂಪಾದಿಸುವ ಯೋಗ್ಯತೆಯಾಗಲಿಲ್ಲವೆಂದು ಅವನ ಹೃದಯ ಹಿಂಡುತ್ತಿತ್ತು ..

"ಹುಂ, ಅವರು ಸಂಬಳ ಹಾಕಿ ಕೊಡುವವರೆವಿಗೂ ನಂಬಿಕೆಯಿಂದ ಕೆಲಸಮಾಡುತ್ತಿರು. ಅಲ್ಲೋ, ಇಷ್ಟುದಿನದಿಂದ ಜಾತ್ರೆ ನಡೆಯುತ್ತಲಿದೆಯಲ್ಲ, ಒಂದು ದಿನವಾದರೂ ಹೋಗಿ ಬಂದೆಯಾ? ರಾತ್ರಿ ಒಂಭತ್ತು ಘಂಟೆವರೆಗೂ ಅದೆಂತಹ ಕೆಲಸವೋ ಏನೋ?! ಜಾತ್ರೆಯತ್ತ ಹೋಗಿ ಬಾ." ಅವನ ಆ ಬಿಡುವಿಲ್ಲರ ಗೆಯ್ಮೆಯನ್ನು ನೋಡಿ ಮಮ್ಮಲ ಮರುಗಿ ಗಂಗಮ್ಮ ಹೇಳಿದಳು.

"ಮಾಧೂನು ಕಂಡಿಲ್ಲ. ಇಬ್ಬರೂ ಒಂದು ದಿನ ಹೋಗಿ ಬರೋಣಾಂತ ಬಿಟ್ಟಿದ್ದೆವು."

"ಒಂದು ದಿನ ಯಾಕೆ ಪ್ರತಿದಿನ ಜಾತ್ರೆಯೊಳಗೆ ಜನ ಅಡ್ಡಾಡಿಕೊಂಡು ಬರುತ್ತಾರೆ. ಆ ಹುಡುಗನನ್ನೂ ಕರೆದುಕೊಂಡು ಹೋಗು."

ಅಷ್ಟು ಹೊತ್ತಿಗೆ ಸರಿಯಾಗಿ ತನ್ನ ಊರಿನಿಂದ ಉಮಾಪತಿ ಬಂದ. ಗಂಗಮ್ಮ ಒಳಗಡೆ ಹೋಗಿ ಅವನಿಗೆ ನೀರು ತಂದುಕೊಟ್ಟಳು.

"ಈಗ ಗಾಡಿಗೆ ಬಂದೇನು ಉಮಾಪತಿ?"

"ಹುಂ, ಈಗ ತಾನೆ ಬಸ್ಸಿಗೆ ಬಂದೆ. ಈಗೇನು ಸರಾಗವಾಗಿ ಬರಬಹುದು. ಹೊಳೆ ಬಂದರೆ ಪ್ರಯಾಣ ಸ್ವಲ್ಪ ಕಷ್ಟ. ಆಗಲೂ ದೋಣಿ ಹಾಕುತ್ತಾರೆ. ಪರವಾಗಿಲ್ಲ ಅದಕ್ಕೇನು?"

"ಎಲ್ಲರೂ ಮನೆಕಡೆ ಚೆನ್ನಾಗಿದ್ದಾರೆಯೆ? ನಿಮ್ಮ ತಮ್ಮನ ಪರೀಕ್ಷೆ ಏನಾಯಿತು?"

"ಅವನದು ಹೋಯಿತು. ಓದೋದಿಲ್ಲ, ಬರಿಯ ತಲೆ ಹರಟೆ. ಆದರೂ ಬುದ್ಧಿವಂತ. ಕ್ಲಾಸಿನೊಳಗೆ ಏನು ಹೇಳುತ್ತಾರೋ ಅಷ್ಟಕ್ಕೆ ಬಿಟ್ಟು ಬಿಟ್ಟಿರುತ್ತಾನೆ. ಹಾಸ್ಟೆಲ್‌ನಲ್ಲಿ ಓದಿದ್ದರೆ ಮೊದಲನೆ ತರಗತಿಯಲ್ಲಿ ಪಾಸಾಗಬಹುದಾಗಿತ್ತು....ಆದರೆ ಹಾಸ್ಟೆಲ್ ಸಂಚಾಲಕತ್ವ ಬೇರೆ ಮಾಡುತ್ತಿದ್ದ."

"ಅದಕ್ಕೆಲ್ಲ ಏನು? ಆ ವಿಶ್ವ ...ರೇಣುಕನ ಜೊತೆಗಿರುತ್ತಿದ್ದನಲ್ಲ, ಫೇಲಾಗಿದ್ದಕ್ಕೆ ಹೇಳದೆ ಕೇಳದೆ ಓಡಿ ಹೋಗಿದಾನೆ. ಫೇಲಾದರೇನು ಕಳ್ಳತನ ಮಾಡಿರುತ್ತಾರೆಯೆ?" ಎಂದಳು ಗಂಗಮ್ಮ.

ಈ ವೇಳೆಗೆ ಗಂಡನಿಗೆ ಉಪ್ಪಿಟ್ಟು—ಕಾಫಿ ಕೊಡಲು ಮಾಲಿನಿ ಅಜ್ಜಿಯನ್ನು ಕರೆದಳು. ಅವಳಿಗೇ ಕೊಡುವುದಕ್ಕೆ ಹೇಳಿದರೂ ಆಕೆ ನಾಚಿಕೆಯಿಂದ ಹಿಮ್ಮೆಟ್ಟಬೇಕಾಯಿತು.

"ನಿಮಗೇನು ಲಗ್ನವಾಗಿಲ್ಲೇನು? ಯಾಕೆ ಕೊಡಬಾರದು. ಬಾಬಾ, ಹಾಗೆ ಮರುಕ ಮಾಡಬಾರದು" ಎಂದು ಗಂಗಮ್ಮ ಹೇಳಿದಾಗ, ನಿರ್ವಾಹವಿಲ್ಲದೆ ಉಮಾಪತಿ ಮತ್ತು ರೇಣುಕನೆದುರು ಮಾಲಿನಿ ತಿಂಡಿ ತಂದಿಟ್ಟಳು.

ಉಮಾಪತಿ ಓರೆಗಣ್ಣಿನಿಂದ ಮಾಲಿನಿಯನ್ನು ನೋಡದೆ ಇರಲಿಲ್ಲ. ಅವಳನ್ನು ನೋಡುತ್ತಿದ್ದ ಹಾಗೆಯೇ ಅವನಿಗೆ ಮೈಯಲ್ಲಿ ವಿದ್ಯುಚ್ಛಕ್ತಿ ಹರಿದಂತಾಯಿತು. ತನಗೇಕೆ ಹಾಗಾಯಿತೆಂಬುದೂ ಕೂಡ ಅವನಿಗೆ ಗೊತ್ತಾಗಲಿಲ್ಲ. ಅವನ ಮುಖಪಟಲದಲ್ಲಿ ವಿವಿಧ ವಿಕಾರಗಳು ನಡೆದು ಹೋದುವು. ಆ ವಿಲಕ್ಷಣ ಸನ್ನಿವೇಶದಿಂದ ತಪ್ಪಿಸಿಕೊಳ್ಳಲು ಹೇಳಿದ:

"ಈವೊತ್ತು ಚಿತ್ರ ಯಾವುದು?"

"ವೀರ ಅಭಿಮನ್ಯು."

"ಜಾತ್ರೆ ತುಂಬಾ ಸೇರಿದೆಯಾ?"

"ಹೂಂ, ಇನ್ನೂ ಅಷ್ಟಿಲ್ಲ ಎಂತ ಹೇಳಬಹುದು."

"ಜಾತ್ರೆ ಕಡೆಗೆ ಹೋಗೋಣವೆ?"

"ಹೂಂ...."

ಭಾವಮೈದುನರಿಬ್ಬರೂ ಸಂಗಮೇಶ್ವರ ಜಾತ್ರೆಕಡೆಗೆ ಹೊರಟರು. ದೂರದಲ್ಲಿಯೇ ವಾದಿರಾಜಾಚಾರ್ ಮತ್ತು ಮಾಧವರಾವ್ ಬರುತ್ತಿದ್ದರು.

"ವಾದಿರಾಜ ಯಾವಾಗಲೋ ಬಂದುಬಿಟ್ಟಿದ್ದಾನೆ" ಎಂದ ರೇಣುಕ.

"ಯಾವ ವಾದಿರಾಜ?"

"ಮಾಧುವಿನ ಚಿಕ್ಕಪ್ಪನ ಮಗ"

"ಏನು ಮಾಧು, ಕಾಣಲಿಲ್ಲ. ಹುಣ್ಣಿಮೆಯ ಚಂದ್ರನ ಅಪೂರ್ವ ದರ್ಶನ" ಎಂದ ದೂರದಿಂದಲೇ ರೇಣುಕ.

"ಊರಿನಲ್ಲಿರಲಿಲ್ಲ. ಅಜ್ಜಿ ನಾನು ಮಂತ್ರಾಲಯಕ್ಕೆ ಹೋಗಿದ್ದೆವು"

"ನನ್ನೊಡನೆ ಹೋಗುವ ವಿಷಯ ತಿಳಿಸಬಾರದಾಗಿತ್ತೇ?"

"ಬಹಳ ತ್ವರಿತದಲ್ಲಿ ಹೊರಟುಹೋದೆ. ಏನು ವಿಹಾರ ಹೊರಟಿರೊ?"

"ಹೂಂ" ಅಂನ್ನುತ್ತ ಅವರಿಬ್ಬರೂ ಹೊರಟರು.

ಅವರಿಬ್ಬರೂ ಎತ್ತುಗಳನ್ನು ನೋಡಿಕೊಂಡು ಬಂದು ಕಾಫಿ ಕುಡಿದರು. ಮೊದಲಿನ ಆ ಯಾವ ವಿಶಾಲ ಭಾವನೆಯಿಂದಲೂ ಅವರು ಮಾತನಾಡುತ್ತಿದ್ದಿಲ್ಲ. ಯಾವುದೋ ಒಂದು ವೇದನೆ ಆ ರೀತಿ ಮಾತನಾಡಲು ಅಡ್ಡಿ ಮಾಡುತ್ತಿತ್ತು.

"ವೀರ ಅಭಿಮನ್ಯು ನೋಡಲಿಕ್ಕೆ ಹೋಗೋಣವೆ?"

"ನಾ ಒಲ್ಲೆ ...ಅದನ್ನು ನೋಡಿರುವೆ"

ಎಂದು ಔಪಚಾರಿಕವಾಗಿ ರೇಣುಕ ಹೇಳಿದ. ಅವನೊಡನೆ ಹೆಚ್ಚು ಮಾತು ಬೆಳೆಸಲು ಸಹ ಆಗದ ಹಾಗೆ ರೇಣುಕನ ಮನಸ್ಸು ವಿಹ್ವಲವಾಗಿತ್ತು. ವಿವಾಹದ ದಿನ ಉಮಾಪತಿ ತನ್ನ ಸಾಕು ತಾಯಿಗೆ ನುಡಿದ ಅವಹೇಳನದ ಮಾತುಗಳು ಅವನ ಸ್ಮೃತಿಪಟಲದಲ್ಲಿ ಮೂಡಿದಾಗ

ಅವನಿಗೆ ತುಂಬಾ ನೋವಾಗುತ್ತಿತ್ತು. ಈಗಲೂ ಹಾಗೆಯೇ ಆಯಿತು. ಏನೆಲ್ಲ ಆಗಿರಲಿ ಭಾವ ಅಲ್ಲವೇ! ಅಲ್ಲದೆ ತಾನಾಗಿಯೇ ಮನೆಗೆ ಬಂದಿದ್ದ; ಆದಕ್ಕಾಗಿಯಾದರೂ ರೇಣುಕ ಮಾತನಾಡಬೇಕಾಗಿತ್ತು.

"ಹೂಂ, ಹೋಗೋಣ ಬಾ. ಇನ್ನೊಂದು ಬಾರಿ ನೋಡುವ"

ಎಂದು ಇಬ್ಬರೂ ಚಿತ್ರ ನೋಡಲು ಹೊರಟರು. ಚಿತ್ರದಲ್ಲಿಯೂ ಅದೇ ಬಾಳು: ದಾಯಾದಿ ಮತ್ಸರದ ಆಟಾಟೋಪ. ವಾಸ್ತವಿಕ ಪ್ರಪಂಚದಲ್ಲಿ ಶಿವಣ್ಣಯ್ಯ—ಚಂದ್ರಶೇಖರಯ್ಯ ಆದರೆ, ಅಲ್ಲಿ ಪಾಂಡವರು ಕೌರವರು. "ವೀರ ಅಭಿಮನ್ಯು" ನೋಡುತ್ತಿದ್ದಾಗ ಮಹಾಭಾರತದ ಪ್ರತಿಯೊಂದು ಘಟನೆಗಳೂ ರೇಣುಕನ ನೆನಪಿಗೆ ಬಂದವು ಕೌರವರು ಮೋಸದಿಂದ ಅರಗಿನ ಮನೆಯಲ್ಲಿ ಪಾಂಡವರನ್ನು ಸುಡುವುದಕ್ಕೆ ಪ್ರಯತ್ನಿಸಿದ್ದು, ಅವರನ್ನು ಜೂಜಿನಾಟದಲ್ಲಿ ಸೋಲಿಸಿ ಅರಣ್ಯಕ್ಕೆ ಅಟ್ಟಿದ್ದು—ಈ ಎಲ್ಲ ಮಾತ್ಸರ್ಯಗಳು ಯಾವ ಪುರುಷಾರ್ಥಕ್ಕಾಗಿ?—ಕೇವಲ ಕ್ಷುಲ್ಲಕ ದಾಯಾದಿ ಮಾತ್ಸರ್ಯಕ್ಕಾಗಿ. ಈಗ ವೀರಅಭಿಮನ್ಯು ತನ್ನ ವಂಶದ ಮಾನ ಸಂರಕ್ಷಣೆಗಾಗಿ, ತಮ್ಮ ಹಕ್ಕಿಗಾಗಿ ತನ್ನ ಅಂಗಗಳು ಕತ್ತರಿಸಿ ಹೋದರೂ ಎಚ್ಚರವಿಲ್ಲದವನಂತೆ ಕಾದಾಡುತ್ತಿದ್ದಾನೆ.

"ವೀರ ಅಭಿಮನ್ಯು, ನೀನೆ ಧೀರ ...!" ಎಂದಿತು ಅವನ ಆಂತರಿಕ ಮನಸ್ಸು. ಆ ಹಿಂದೆಯೇ ಹಿಂದಣ ಘಟನೆಯೊಂದು ಅವನ ನೆನಪಿಗೆ ಬಂತು.

ಅಂದು ಶಿವಣ್ಣಯ್ಯ ಬಸವರಾಜನ ಖಾಲಿ ನಿವಾಸದಲ್ಲಿದ್ದ ತಮ್ಮ ಕಲ್ಲನ್ನು ಗುರುಮೂರ್ತಿಯೊಂದಿಗೆ ತರಲು ಹೋದಾಗ ಬಸವರಾಜ ತಡೆದು ಜಗಳದ ಕಿಚ್ಚನ್ನು ಹೊತ್ತಿಸಿದ್ದ. ಆಗ ಗುರುಮೂರ್ತಿ ಅದನ್ನು ಪ್ರತಿಭಟಿಸಿ ವೀರ ಅಭಿಮನ್ಯುವಿನಂತೆ ಹೋರಾಡಿದ. ಆದರೆ ತಾನು ಮಾತ್ರ ಓರ್ವ ಹೇಡಿಯಂತೆ, ಹೆಂಗಸಿನಂತೆ ನಿಂತುಕೊಂಡು ಜಗಳದ ಸಮಯದಲ್ಲಿ "ಅಣ್ಣಾ, ಜನಗಳು ನೋಡುತ್ತಾರೆ. ಬಿಡು ಬಿಡು" ಎನ್ನುತ್ತ ದಬ್ಬಿಕೊಂಡು ಹೋಗಿದ್ದು ಎಲ್ಲವೂ ನೆನಪಾದುವು. ಮನಸ್ಸು ಕೆರಳಿತು. ತಾನು ಮಾತ್ರ ವೀರ ಅಭಿಮನ್ಯುವಿನಂತೆ ಆಗಲಿಲ್ಲವಲ್ಲಾ ಎಂದು ರೇಣುಕ ದುಃಖಪಟ್ಟ.

"ನಾನು ಲೇಖಕ, ಇಂತಹ ಒರಟುತನಕ್ಕೆ ಹೇವರಿಸುವ ಸ್ವಭಾವ

ದವನು ಎಂದಿತು" ಒಂದು ಮನಸ್ಸು.

"ನೀನು ನಿಸರ್ಗದ ಉಪಾಸಕನಾಗು. ಕವಿ ಸಹಜ ಶೈಲಿಯಿಂದ ವರ್ಣಿಸು. ಆದರೆ ತನ್ನ ಮನೆಗೇ ಬೆಂಕಿ ಹತ್ತಿದಾಗ, ಅದನ್ನು ನಿಂತು ಕೊಂಡು ನೋಡುತ್ತಾ ಕವನವೊಂದನ್ನು ಬರೆದರೆ ನೀನೊಬ್ಬ ಮನುಷ್ಯನೇ. ಎರಡು ಸರಿಯಾದ ಏಟುಗಳನ್ನು ಬಿಟ್ಟದ್ದರೆ ನಿನ್ನ ಕೈ ಸವೆಯುತ್ತಿತ್ತೇ? ಕುಣಿಯುಲಾರದ ಸೂಳೆ ನೆಲ ಡೊಂಕೆಂದು ಹೇಳಿದಳಂತೆ."

"ಅಣ್ಣಾ, ನೀನೇ ನಿಜವಾದ ವೀರ ಅಭಿಮನ್ಯು! ಹಾಯ್! ನಾನು ಉತ್ತರ ಭೂಪ . . . " ಎಂದಿತು ಇನ್ನೊಂದು ಮನಸ್ಸು.

ಹೀಗೆ ಎರಡು ಮನಸ್ಸುಗಳಿಗೆ ತುಮುಲ ಯುದ್ಧ ನಡೆದಿದ್ದವು. ಚಿತ್ರ ನಡೆಯುತ್ತಿದ್ದರೂ ಅದರ ಕಡೆಗೆ ಅವನ ಗಮನವೇ ಇರಲಿಲ್ಲ. ಹೊಸ ಚಿತ್ರವೊಂದನ್ನು ಕಾಣುತ್ತಿದ್ದ ರೇಣುಕಪ್ರಸಾದ. ಆ ಚಿತ್ರದ ನಿರ್ಮಾಪಕ ಮತ್ತು ದಿಗ್ದರ್ಶಕನೂ ಅವನೇ ಆಗಿದ್ದ. ಚಿತ್ರ ಮುಗಿದು ಜನ ಹೊರಟರೂ ಅವನಿಗೆ ಪರಿವಿಯೇ ಇದ್ದಿಲ್ಲ! ಎಲ್ಲಾ ಜನಗಳ ಕೂಗು ಕೇಳಿಸಿದನಂತರ ಭಾವಪರವಶತೆಯ ಶೈಲದಿಂದ ಅವನು ಮೆಲ್ಲನೆ ಮೆಟ್ಟಲು ಗಳನ್ನು ಇಳಿದ. ಇಬ್ಬರೂ ಮನೆಗೆ ಬಂದು ಊಟ ಮಾಡಿದರು. ಗುರುಮೂರ್ತಿ ತಾಂಬೂಲ ತಂದಿಟ್ಟ. ಅದೇ ತಾನೆ ಶಿವಣ್ಣಯ್ಯ ಬಂದರು.

"ಯಾವಾಗ ಬಂದೆ ಉಮಾಪತಿ?"

"ಈವೊತ್ತು ಸಾಯಂಕಾಲ"

"ಮನೆಕಡೆ ಎಲ್ಲರೂ ಆರೋಗ್ಯವಾಗಿದ್ದಾರೆಯೆ?"

"ಹೂಂ"

ಸಮಯ ತುಂಬಾ ಆಗಿತ್ತು. ಆದ್ದರಿಂದ ಶಿವಣ್ಣಯ್ಯ ಶಿವಪೂಜೆಗೆ ಹೊರಟರು ಕುರ್ಚಿಯ ಮೇಲೆ ಕುಳಿತುಕೊಂಡು "ಹೇಗೆ ಎನ್ನಿಸಿತು ಚಿತ್ರ?" ಎಂದ ಉಮಾಪತಿ.

"ಚೆನ್ನಾಗಿತ್ತು. ಒಳ್ಳೇ ಭಾವೋದ್ರೇಕದ ಕಥೆ"

"ನಾವು ತಿಮ್ಮಲಾರಪುರದಲ್ಲಿದ್ದಾಗ ಹೀಗೇನೆ ನಮಗೂ ನಮ್ಮ ಎದುರು ಪಾರ್ಟಿಯವರಿಗೂ ಜಗಳ ಬಿದ್ದಿತು. ಆವಾಗ ಒಂದೇ ಹೊಡೆ ತಕ್ಕೆ ಒಬ್ಬನನ್ನು ಹೊಡೆದಿದ್ದೆ. ಮೂರ್ಛೆ ಬಂದು ಬಿಟ್ಟಿತ್ತು."

"ಎಷ್ಟು ದಿನದ ಹಿಂದೆ?" ಎಂದ ಗುರುಮೂರ್ತಿ.

"ಈಗೊಂದು ವರ್ಷದ ಹಿಂದೆ."

ಹೆಣ್ಣುಕೊಟ್ಟ ಅತ್ತೆಗೆ ಸಮಾನಳಾದ ಗಂಗಮ್ಮನಿಗೇ ಅವಾಚ್ಯ ಶಬ್ದಗಳನ್ನು ಆಡಿದ ಮಹನೀಯ, ಆ ಹಳ್ಳಿಯವರ ಜೊತಗೆ ಹೊಡೆದಾಡಿದೆ ಎಂದು ಹೇಳಿದ್ದು ಅವನ ಮಾತನ್ನು ಕೇಳಿದವರಿಗೆ ಅಂತಹ ಆಶ್ಚರ್ಯವ ನ್ನೇನೂ ಉಂಟುಮಾಡಲಿಲ್ಲ. ಆವೇಳಿಗೆ ಕೈಯನ್ನು ಒರೆಸಿಕೊಳ್ಳುತ್ತಾ ಶಿವಣ್ಣಯ್ಯ ಹೊರಗೆ ಬಂದರು.

"ಎಷ್ಟು ದಿವಸ ರಜ ತೆಗೆದುಕೊಂಡು ಬಂದಿದ್ದೀಯೆ?"

ಉಮಾಪತಿ ಒಂದು ಬಾರಿ ತಲೆ ಕೊಡವಿದ. ಕೂದಲುಗಳು ಯಾವಾಗಲೂ ಸಿನಿಮಾ ನಟ ದಿಲೀಪ್‌ಕುಮಾರನ ಹಾಗೆ ಇರಬೇಕಂತೆ ಅವನಿಗೆ ಆಸೆ. ತಲೆ ಕೊಡವಿದಾಗ ಒಂದೆರಡು ಕೂದಲು ಹಣೆಯ ಮೇಲೆ ಬಿದ್ದವು.

"ನಾನು ಎಂದೂ ರಜ ತೆಗೆದುಕೊಳ್ಳುವುದಿಲ್ಲ. ಇನ್ಸ್‌ಪೆಕ್ಟರ್ ಗೊತ್ತಿ ರುತ್ತಾರೆ ಆಫೀಸಿಗೆ ಹೋದಾಗ ಭರ್ಜರಿ ಟಿಫಿನ್ ಮಾಡಿಸಿಬಿಡುತ್ತೇನೆ. ಚಿತ್ರಕ್ಕೆ ಆಟ್ಟದ ಮೇಲೆ ಕರೆದುಕೊಂಡೊಯ್ಯುತ್ತೇನೆ. ಅವರು ಪ್ರಯಾಣ ಬಂದಾಗ ಅವರೆಲ್ಲ ಸತ್ಕಾರದ ಹಣ ನನ್ನದೇ ಆಗಿರುತ್ತದೆ. ಅವರೇನೂ ಮಾಡುವಂತಿಲ್ಲ. ಅದರಲ್ಲಿ ನಾನೇ ಮುಖ್ಯೋಪಾಧ್ಯಾಯ. ಪಾಪ! ಆ ಬಡ ಮೇಷ್ಟ್ರುಗಳು ಸಹ ನನ್ನ ಬಗ್ಗೆ ಏನೂ ದೂರುವಂತಿಲ್ಲ. ನನ್ನನ್ನು ನೋಡಿದ ಕೂಡಲೆ ಅವರೆಲ್ಲ ಗಡಗಡ ನಡುಗುತ್ತಾರೆ. ಊರಿನಲ್ಲಿ ಜನ ಗಳು ತರಲೆ ಎಬ್ಬಿಸುವುದಿಲ್ಲ. ಯಾಕಾಗಿ ಎಂದರೆ ನನ್ನ ಸ್ವಭಾವ ಅವ ರಿಗೆ ತುಂಬಾ ಪರಿಚಯ ಉಂಟು. ಹಾಗೇನಾದರೂ ಎಬ್ಬಿಸಿದರೆ ಏನು ಶಾಸ್ತಿ ಮಾಡಬೇಕೋ ಅದನ್ನು ಮಾಡಿ "ಹೊರಟಿಯಾ ಜೋಗಿ, ಹೆಗ ಲಿಗೆ ಕಡಾಸ" ಎನ್ನುವಂತೆ ಹೇಳದೆ ಕೇಳದೆ ಹೊರಟುಬಿಡುತ್ತೇನೆ"

ಅವನ ಮಾತಿನಲ್ಲಿ ಕೊಂಚ ಉತ್ಪ್ರೇಕ್ಷೆಗಳಿದ್ದರೂ ಎಲ್ಲವೂ ಸತ್ಯ ವಾಗಿಯೇ ಇದ್ದವು. ಇದನ್ನು ಕೇಳಿ ಶಿವಣ್ಣಯ್ಯನವರಿಗೆ ಮೈ ಬೆವರದೆ ಇರಲಿಲ್ಲ. ಒಳ್ಳೆಯ ಮಾರಿಯನ್ನು ಕುರುಡರಂತೆ ಗಂಟು ಹಾಕಿಕೊಂಡೆ ವಲ್ಲಾ ಎಂದುಕೊಂಡರು. ಸ್ವಲ್ಪವೂ ಸಂಕೋಚವಿಲ್ಲದೆ ತನ್ನ ಪೌರುಷ ವನ್ನು ವರ್ಣಿಸುತ್ತಾನೆ—ಎಂಬುದೂ ಅವರಿಗೆ ಹೊಳೆಯದೇ ಇರಲಿಲ್ಲ. ಕಾಲ ಮಿಂಚಿಹೋಗಿದೆ. ಎಂತಹ ವಿಚಾರಗಳೇ ಬರಲಿ ಎಂತಹ ಕಷ್ಟ

ಗಳೇ ಅವನಿಂದಾಗಿ ಬರಲಿ, ಪ್ರಚಂಡ ಆಶಾಪಾದಿಗಳಾಗಿ ಅವರು ಎದುರಿಸಬೇಕಾಗಿತ್ತು.

"ನೀನು ನಿಜವಾಗಲೂ ಧೈರ್ಯದವನೇ ಇದ್ದೀಯೆ. ಈ ವಿಚಾರ ನಮಗೆ ಮೊದಲು ಗೊತ್ತಾಗಿದ್ದಿಲ್ಲ....ಗೊತ್ತಿದ್ದರೆ...." ಎಂದು ಅಷ್ಟಕ್ಕೇ ಗುರುಮೂರ್ತಿ ನಿಲ್ಲಿಸಿದ. ಅವನ ಆ ವಾಕ್ಯದಲ್ಲಿ ಅಣಕ ಮನೆ ಮಾಡಿಕೊಂಡಿತ್ತು. ಕೊಂಚ ಚೇಷ್ಟೆಯೂ ಮಿಶ್ರವಾಗಿತ್ತು. ಈ ಧ್ವನಿ ಉಮಾಪತಿಗೆ ಅರ್ಥವಾಯಿತು. ಸ್ವಲ್ಪ ಲಜ್ಜೆಯೂ ಅವನ ಮುಖದಲ್ಲಿ ಜಿನುಗಿತು.

"ನಾವೆಂತಹ ಧೀರರಯ್ಯ ನೀವುಗಳು...." ಎಂದ.

ಗುರುಮೂರ್ತಿಗೆ ಮಾತು ಬೆಳೆಸಲು ಇಷ್ಟವಿರಲಿಲ್ಲ. ಮತ್ತೆಲ್ಲಿಯಾದರೂ ಮಾತಿನ ಚಕಮಕಿಯಾದರೆ ತುಂಬ ಕಷ್ಟವೆಂದರಿತು, ಅಷ್ಟಕ್ಕೇ ನಿಲ್ಲಿಸಿ

"ಹೊತ್ತಾಯಿತು ಭಾವನವರಿಗೆ, ಹಾಸಿಗೆ ಬಿಚ್ಚು ರೇಣುಕ" ಎಂದ.

ಆ ದಿನ ರಾತ್ರಿ ಉಮಾಪತಿಯ ಮನಸ್ಸು ವಿಚಲಿತವಾಯಿತು. ಇನ್ನೊಂದು ಸರಿಯಾದ ಘಟನೆಯನ್ನು ಮದುವೆಯಲ್ಲಿ ನಡೆಸಿದಹಾಗೆ ನಡೆಸಬೇಕು ಎಂದು ಯೋಚಿಸಲಿಕ್ಕೆ ಪ್ರಾರಂಭಿಸಿದ. ಯಾವುದೇ ಕಾರಣದಿಂದಲಾದರೂ ಸರಿಯೇ ಗುರುಮೂರ್ತಿ ಶಿವಣ್ಣಯ್ಯನವರಿಗೆ ತೊಂದರೆಯನ್ನೀಯಬೇಕು. ಹೀಗೆಂದುಕೊಂಡ ಅವನಿಗೆ ನಿದ್ರೆಯೇ ಬರಲಿಲ್ಲ. ಹಾಸಿಗೆಯ ಮೇಲೆ ಮಗ್ಗುಲು ತಿರುಗಿಸಿ ಯೋಚಿಸಿದ; ಹೊಳೆಯಲಿಲ್ಲ. ನಾಳೆ ಯೋಚಿಸಿದರಾಯಿತು. ಈಗ ಯೋಚಿಸಿಯಾದರೂ ಮಾಡುವುದೇನಿದೆ ಎಂದುಕೊಂಡ.

ಮಾರನೆಯ ದಿನ ಬೆಳಗ್ಗೆ ಕಾಫಿಯನ್ನು ತೆಗೆದುಕೊಳ್ಳುತ್ತಲೇ ಉಮಾಪತಿ ಪೇಟೆಯತ್ತ ಧಾವಿಸಿದ. ತಾನು ಹೋದ ಹೋಟೆಲಿನಲ್ಲಿಯೇ ಚಾಣಕ್ಯ ಬಸವರಾಜನಿರಬೇಕೇ! ಉಮಾಪತಿಯ ದೃಷ್ಟಿಯಲ್ಲಿ ಅವನು ನಿಜವಾಗಲೂ ಕಲಿಯುಗದ ಚಾಣಕ್ಯನಾಗಿದ್ದ. ಉಮಾಪತಿಗೆ ಅದೆಷ್ಟು ಸಂತೋಷವಾಗಿರಬೇಡ! ಅವನು ತನ್ನ ಮಗಳಿಗೆ ದೋಸೆ ತಿನ್ನಿಸುತ್ತಿದ್ದ. ಉಮಾಪತಿಯನ್ನು ನೋಡಿದಾಕ್ಷಣವೇ ಹೇಳಿದ:

"ಹೋ ಹೋ! ಯಾವಾಗ ಸವಾರಿ ದಯಮಾಡಿಸಲಾಗಿತ್ತು?"

"ನಿನ್ನೆ ಸಾಯಂಕಾಲ ನೀನು ಕಾಣಲೇ ಇಲ್ಲವಲ್ಲ."

"ತಮ್ಮ ಮಿಲನವಾಗಲಿಲ್ಲ, ಅಷ್ಟೆ. ಇತ್ತಕಡೆ ಕೂತುಕೊಳ್ಳುವ ಕೃಪೆಯಾಗಬೇಕು."

ಅವನು ಬಯಲಾಟದಲ್ಲಿ ಭಾಗವಹಿಸಿದಾಗ ಉರುಲು ಹೊಡೆದ ವಾಕ್ಯಗಳವು. ಅವುಗಳನ್ನು ಇಲ್ಲಿಯೂ ಉಪಯೋಗಿಸಿದ. ಉಮಾಪತಿ ಜೋನೆಗೆ ಹೇಳಿದ.

"ಮತ್ತೇನು ವಿಶೇಷ ಉಮಾಪತಿ?"

"ಎಲ್ಲಾ ತಮ್ಮದೆ. ನಿನ್ನೆ ಒಂದು ಕೆಲಸವಾಗಿ ಬಿಟ್ಟಿತು "

"ಹೂಂ, ಏನು ಹೇಳದು" ಎಂದ ಕಾಫಿ ಕುದಿಯುತ್ತ ಬಸವರಾಜ. ಆ ವೇಳೆಗೆ ದೋಸೆ ಬಂತು.

"ಹಿಂದೆ ನಾವು ತಿಮ್ಮಲಾಪುರದಲ್ಲಿ ಜಗಳವಾಡಿದ್ದನ್ನು, ಎಲ್ಲಾ ಗುರುಮೂರ್ತಿ, ರೇಣುಕನೆದುರಿಗೆ ಹೇಳುತ್ತಿದ್ದೆ. ಆಗ ಗುರುಮೂರ್ತಿ ಸುಮ್ಮನಿರಬೇಕೋ ಬೇಡವೋ 'ನೀನು ನಿಜವಾಗಲೂ ಧೈರ್ಯದವನೇ ಇದ್ದೀಯೆ. ಈ ವಿಚಾರ ನಮಗೆ ಮೊದಲೇ ಗೊತ್ತಿದ್ದರೆ....ಗೊತ್ತಾಗಿದ್ದಿಲ್ಲ ...' ಅಂತ ಏನೇನೋ ಹೇಳಿ ಬಿಡಬೇಕೇ ಇನ್ನೂ ಇವರ ಸೊಕ್ಕು ಹೋಗಲಿಲ್ಲ, ಏನು ಮಾಡಬೇಕು ಹೇಳು."

"ನಾನು ಲಗ್ನದಲ್ಲೇ ಒಂದು ಕೈ ತೋರಿಸು ಎಂದೆ. ತಪ್ಪಾಯಿತೆಂತ ಹೋಗಿ ಕಾಲಿಗೆ ಹೇಗೆ ಬಿದ್ದಿಯೋ! ಮೂರೂ ವರ್ಜ್ಯವಾಡಿದ ಮಾಪಂದಿರು. ." ಎಂದು ನಗೆಯಾಟವ.

"ಹೌದಪ್ಪ, ಈಗೇನು ಮಾಡಲಿ ಹೇಳು?"

"ಇಲ್ಲಿ ಬೇಡ. ಮನೆಗೆ ಹೋಗೋಣ ನಾನೆಲ್ಲ ಅಲ್ಲಿಯೇ ಹೇಳುತ್ತೇನೆ" ಎನ್ನುತ್ತ ದುಡ್ಡುಕೊಡಲು ಬಸವರಾಜ ಜೇಬಿಗೆ ಕೈಹಾಕಿ ಹುಡುಕುತ್ತ ನಿಂತ. ಆ ಹಣ ಅದೇಕೋ ಕೈಗೆ ಬರಲಿಲ್ಲವೆಂದು ಕಾಣುತ್ತದೆ. ಹಾಗೆ ಹೀಗೆ ಕೈಯನ್ನು ಜೇಬಿನಲ್ಲಿ ಸಾವರಿಸುತ್ತಲಿದ್ದ. ಆದರೆ ಬೇಗ ಕಾಫಿ ಕುಡಿದು ಉಮಾಪತಿ ಹಣಕೊಟ್ಟ. ಮನೆಗೆ ಹೋಗುವವರೆವಿಗೂ ಅವನು ತಡೆಯುವಂತಿದ್ದಿಲ್ಲ. ಪೆನ್ನಿನ ಮಸಿ ಉಕ್ಕಿ ಬರುವಂತೆ ಆಗಿತ್ತು ಅವನ ಮನಸ್ಸು. ದಾರಿಯಲ್ಲಿಯೇ ಪ್ರಾರಂಭಿಸಿದ.

"ನಿನಗೆ ಹೇಗಾದರೂ ಶೋಭನ ಪ್ರಸ್ತ ಆಗಿಲ್ಲವಲ್ಲ. ಅದರಲ್ಲೂ

ಇಂದು ಊರಿನಿಂದ ಯಾರೂ ನಿನ್ನೊಡನೆ ಬಂದಿಲ್ಲ. ಈಗಲೆ ನನಗೆ ಶೋಭನವಮಾಡಿಕೊಡಿ ಎಂತ ಹಟ ಹಿಡಿದು ಕುಳಿತುಬಿಡು. ಒಂದು ಪಕ್ಷ ಮಾಡಿಕೊಡದಿದ್ದರೆ, ನಾನು ಹೆಂಡತಿ ಬಿಡುವೆನೆಂತ ಕುಳಿತುಕೊ."

ಈ ಮಾತು ಉಮಾಪತಿಯ ಕರ್ಣವನ್ನು ಸೀಳಿತು! ಅವರು ನಿಷೇಕ ಪ್ರಸ್ತ ಮಾಡಿಕೊಡದಿದ್ದರೆ ಹೆಂಡತಿಯೇನು ಮಾಡಬಲ್ಲಳು? ಅವಳನ್ನು ಅದಕ್ಕಾಗಿ ಬಿಡುತ್ತೇನೆಂದು ಕುಳಿತುಕೊಳ್ಳುವುದು ಸರ್ವಥಾ ಕರ್ತವ್ಯ ಪರಾಙ್ಮುಖತೆಯ ವಿಚಾರವಾದೀತೆಂದು ತಿಳಿದು

"ಆಗಲಿ ಹಾಗೆ ವೇಷ ಹಾಕೋಣಂತೆ. ಆದರೆ ಕಾರ್ಯಗತ ಬೇಡ. ಅಲ್ಲದೆ ನಾನೇ ಹೇಗೆ ಕೇಳಲಿ. ಸ್ವಲ್ಪ ಮರ್ಯಾದೆ ಬೇಡವೆ?"

"ಇಂತಹ ಸಮಯದಲ್ಲಿ ಅಂತಹದನ್ನೆಲ್ಲ ತ್ಯಾಜ್ಯ ಮಾಡಬೇಕು. ಇಲ್ಲದಿದ್ದರೆ ಹೇಗೆ ಕೆಲಸವಾಗುತ್ತೆ?"

"ನನಗಂತೂ ಆ ಮಾತು ಒಪ್ಪದು. ಓಹೋ! ಒಂದು ಕೆಲಸ ಮಾಡುತ್ತೀಯಾ?"

"ಏನು?"

"ನಾನಿಲ್ಲೇ ಬಸ್ ನಿಲ್ದಾಣದಲ್ಲಿರುತ್ತೇನೆ. ನೀನು ಹೋಗಿ, ಉಮಾಪತಿ ಬಸ್ ಸ್ಟ್ಯಾಂಡಿನಲ್ಲಿದ್ದಾನೆ. ಅವನಿಗೆ ಇವತ್ತೇ ಶೋಭನ ಪ್ರಸ್ತ ಮಾಡಿಕೊಡಬೇಕಂತೆ ಎಂದು ಹೇಳು ಆಂ....ನಿನಗೆ ನಾನೇನೂ ಹೆಚ್ಚಿಗೆ ಹೇಳಬೇಕಾಗಿಲ್ಲ."

"ಅಲ್ಲವಯ್ಯ, ನಾನು ನಿಮ್ಮ ಲಗ್ನ ತೀರಿದಂದಿನಿಂದ ಅವರೊಡನೆ ಮಾತು ಬಿಟ್ಟಿರುವೆನಲ್ಲ! ಕೇಳಿ ಗೊತ್ತುಂಟೆ?"

"ಹೊಗೋ, ನೀವೇನು ಜಗಳಾಡಿದ್ದೀರಾ?" ಎಂದು ಒತ್ತಾಯದಿಂದ ಉಮಾಪತಿ ಬಸವರಾಜನನ್ನು ಅವರ ಮನೆಗೆ ಕಳುಹಿಸಿಕೊಟ್ಟ. ವಿವಾಹದಲ್ಲಿ ತನ್ನ ಕುತಂತ್ರವನ್ನು ಪ್ರಕಟಪಡಿಸಿದಾಗಿನಿಂದ ಇವರೊಡನೆ ಮಾತನಾಡುವದನ್ನೇ ಅವನು ಬಿಟ್ಟಿದ್ದ. ಪರಂತು ನಿರ್ವಾಹವಿಲ್ಲದೆ, ತನ್ನ ಕಾರ್ಯ ಸಾಧನೆಗಾಗಿ ವಿಚಾರಸಾಧಕನ ವೇಷ ತಳೆದು ಹೊರಟೇ ಬಿಟ್ಟ.

ಶಿವಣ್ಣಯ್ಯ ಹೊರ ಜಗುಲಿಯ ಮೇಲೆ ಪತ್ರಿಕೆ ಓದುತ್ತ ಕುಳಿತಿದ್ದರು. ಇತ್ತೀಚಿಗೆ ಮನೆಗೆಂದೂ ಬರದೇ ಇರುವವನು, ಇಂದು

ಬಂದಿದ್ದು ಶಿವಣ್ಣಯ್ಯನವರ ಕುತೂಹಲ ಕೆರಳಿಸಿತು. ಬಸವರಾಜ ಬಂದವನೇ ಹೇಳಿದ :

"ಚಿಕ್ಕಪ್ಪ, ಉಮಾಪತಿ ಬಸ್ ಸ್ಟ್ಯಾಂಡಿನಲ್ಲಿ ಕುಳಿತಿದಾನೆ. ಅವನಿಗೆ ಇವೊತ್ತೇ ಶೋಭನ ಪ್ರಸ್ತ ಮಾಡಿಕೊಡ ..." ಮಾತು ಇನ್ನೂ ಮುಗಿಯದ ಮುಂಚೆಯೆ ಶಿವಣ್ಣಯ್ಯ ಮುಖ ಕೆಂಪು ಮಾಡಿಕೊಂಡು "ನಾವು ಯಾರೆಂತ ತಿಳಿದಿದ್ದಾನೆ? ಈ ರೀತಿಯೇ ಕೇಳುವುದು? ಈ ರೀತಿಯೇ ಪ್ರಸ್ತ ಮಾಡಿಕೊಡು ಎಂದು ಕೇಳುವುದು? ಅವನೊಂದಿಗೆ ಒಬ್ಬ ಮುತ್ತೈದೆಯಾದರೂ ಬಂದಿದಾಳೇನು ? ." ಎಂದರು. ಇವರ ಮುನಿಸನ್ನು ಕಂಡು ಅವನು ತಣ್ಣಗಾದ.

"ಅವರ ಮನೆಯವರೇ ಹೇಳಿದಾರಂತೆ."

"ಏನು ಹೇಳಿದರೆ—ಹೀಗೆ ಮಾಡಲಿಕ್ಕೆ ಹೇಳಿದ್ದಾರಂತೇನು? ಹೋಗು ಇವತ್ತು ಸಾಧ್ಯವಿಲ್ಲ ಎಂತ ಹೇಳು."

ಬಸವರಾಜ ನಿರ್ವಾಹವಿಲ್ಲದೆ ಕಾಲಿಗೆ ಬುದ್ಧಿ ಹೇಳಿದ. ಅವರಿಗೆ ಇದೆಲ್ಲವೂ ಬಸವರಾಜನ ಕುಯುಕ್ತಿ ಎಂದೆನ್ನಿಸದಿರಲಿಲ್ಲ.

ಅವರು ಹೊರಟುಹೋದ ಮೇಲೆ ಶಿವಣ್ಣಯ್ಯ ಗಂಗಮ್ಮನಿಗೆ ಹೇಳಿದರು.

"ಕಂಡೆಯಾ ಗಂಗಮ್ಮ, ಎಂಥೆಂಥ ಚೇಷ್ಟೆ ಮಾಡಲುಪಕ್ರಮಿಸಿದ್ದಾರೆ?"

"ಮಾಡಲಿ ಮಾಡಲಿ, ದೇವರು ಬುದ್ಧಿ ಕೊಟ್ಟಿದಾನೆ ಮಾಡುತಾರೆ" ಎಂದು ಬಾಗಿಲ ಒಳ ಭಾಗದಲ್ಲಿ ನಿಂತುಕೊಂಡು ಗಟ್ಟಿಯಾಗಿ ಗಂಗಮ್ಮ ನುಡಿದಳು.

ರೇಣುಕ ಪ್ರಸಾದನಿಗೆ ಈ ವಿಷಯ ತಿಳಿದು ಕಿಡಿಕಿಡಿಯಾದ. ಶಿವಣ್ಣಯ್ಯನವರ ಪತ್ರಿಕೆ ಜಗುಲಿಯಿಂದ ಬಿದ್ದು ಗಾಳಿಗೆ ಅಲುಗಾಡುತ್ತಿತ್ತು. ಯಾವಾವ ಸಂದರ್ಭಗಳನ್ನು ಹೇಗೆ ಈ ದಾಯಾದಿಗಳು ಮಾರ್ಮಿಕವಾಗಿ ಉಪಯೋಗಿಸಿಕೊಳ್ಳುತ್ತಾರೆಂಬುದು ಈಗ ಅರ್ಥವಾಯಿತು ಅವರಿಗೆ. ಇನ್ನುಮೇಲೆ ಇಂತಹ ಏನೇ ಚಟುವಟಿಕೆಗಳು ನಡೆಯಲಿ, ಎಲ್ಲವೂ ಇವನಿಂದಲೇ ನಡೆಯುತ್ತ ಇವೆ ಎಂದು ಅವರು ತಿಳಿದುಕೊಳ್ಳದೇ ಇರಲಿಲ್ಲ. ಅಲ್ಲದೆ ಆ ಕಾರ್ಯಸಾಧನೆಗೆ ತಾನೇ ಕಂಕಣ

ಕಟ್ಟಿ ನಿಂತಿದ್ದಾನೆಂದು ಮನಸ್ಸಿನಲ್ಲಿಮಿಂಚಿದಾಗ ಮುಳ್ಳು ಚುಚ್ಚಿದಂತಾಯಿತು ಅವರಿಗೆ.

ಸುಮಾರು ಅರ್ಧ ಘಂಟೆಯಾಗಿರಬಹುದು. ಪುನಃ ಬಸವರಾಜ ವೇಗವಾಗಿ ಬಂದು, "ಕಕ್ಕಾ, ನಾನು ಕೆಡಕು ಬಯಸಲು ಹೇಳುತ್ತಿಲ್ಲ. ಇವೊತ್ತು ಅವನು ತುಂಬಾ ಹಟ ಹಿಡಿದಿದಾನೆ. ಆದುದರಿಂದ ಇವೊತ್ತು ಕಾರ್ಯ ನೆರವೇರಿಸಿ ಕೊಡದಿದ್ದರೆ, ಅವರ ಪರಿಣಾಮ ಸರಿಯಾಗಲಿಕ್ಕಿಲ್ಲ ಎಂತ ನಂಬುವೆ"

ಶಿವಣ್ಣಯ್ಯನವರ ತಲೆ ಕಾದಿತು ಎಚ್ಚರವಿಲ್ಲದೆ ನುಡಿದರು:

"ಅಲ್ಲೋ, ನೀನೆ ಮನೆಯವನಾಗಿ ಹೀಗೆ ಕುತಂತ್ರ ಮಾಡುತ್ತಿದ್ದೀಯಲ್ಲ! ಸ್ವಲ್ಪ ಪಾಪ—ಪುಣ್ಯಕ್ಕೆ ಮನುಷ್ಯನಾದವನು ಅಂಜಬೇಕು. ನೀನು ನಮ್ಮ ಪತಿಯಿಂದ ಬುದ್ಧಿ ಹೇಳಬೇಕಪ್ಪ, ಅದನ್ನು ಬಿಟ್ಟು ನೀನೂ ಅವನ ಹಾಗ ಕುಣಿಯುತ್ತಿ. ಈ ಕೆಲಸಕ್ಕೆ ಅವನು ನಿನ್ನನ್ನು ನಿಯೋಜಿಸಿದ್ದಾನೆ. ಎಂಥ ದ್ವಿಪಾದ ಪಶುಗಳು ನೀವು. ಥೂತ್!"

ಅವನಿಗೂ ಕೋಪ ಹತ್ತಿ ಹೊಗೆ ಬರಲಿಕ್ಕೆ ಸುರುವಾಯಿತು.

"ನನಗ ನೀನೇನು ಹೇಳಬೇಡ ಕಕ್ಕ."

"ಇರಲಿ ಹೋಗು ನಿನ್ನೀ ವಿಶಾಲ ಭಾವನೆ. ಲಗ್ನದಲ್ಲಿ ಏನೇನು ನಡೆಸಿವೇಂತ ಗೊತ್ತಿಲ್ಲವೇನು? ಆ ಜಗಳದಲ್ಲಿ, ಲಗ್ನದಲ್ಲಲ್ಲ—ಕಲ್ಲು ತರುವಾಗ--ನನಗೇ ಗಾಯಮಾಡಿದ ಬಹಾದ್ದೂರ ನೀನು. ಈ ಕುಂಟಲಗಿತ್ತಿ ಕೆಲಸ ಪ್ರವರ್ತಿಸುವುದಕ್ಕೆ ಈಗ ಜೋರ ಬಂದಿದೀಯೆ"

ಎಂದಾಗ ಅವನ ತಲೆ ಗರ್ರನೆ ತಿರುಗಿತು. ಮುಂದೆ ಮಾತನಾಡುವ ಸಹನೆಯೂ ಅವನಿಗೆ ಉಳಿಯಲಿಲ್ಲ. ಮಾತಿಗೆ ಮಾತು ಬೆಳೆಸಿದರ ಉಪಯೋಗವಿಲ್ಲ. ಮುಂದೆ ಯಾವ ರೀತಿಯಾದರೂ ಕಾರ್ಯ ಸಾಧನೆಯಿಂದ ಸೇಡು ತೀರಿಸಿಕೊಳ್ಳಬೇಕೆಂದು, ನಿಶ್ಚಯಿಸಿ ನಿಧಾನವಾಗಿ ತಲೆ ಬಗ್ಗಿಸಿಕೊಂಡು ಅವರು ಹೋಗಿ ನಡೆದುದನ್ನು ಉಮಾಪತಿ ಉಪ್ಪು ಕಾರ ಹಚ್ಚಿದ ವರದಿ ಮಾಡಿದ.

ಇತ್ತ ಉಮಾಪತಿಯೂ ಸಹ ಇವನ ಮಾತು ಕೇಳಿಕೊಂಡು ಸಿದ್ಧನಾಗಿದ್ದ. ಶಿವಣ್ಣಯ್ಯ ಇಂದಿಲ್ಲವೆಂದಾಗ ಪತ್ನಿ ತ್ಯಾಜ್ಯ ಮಾಡಲಿಕ್ಕೆ ಸಾಧ್ಯವೆ? ಇನ್ನೊಂದು ಲಗ್ನಕ್ಕೆ ಅದೆಷ್ಟು ಖರ್ಚು! ಜನಗಳಾದರೂ

ಏನೆಂದುಕೊಂಡಾರು? ಇಂದಿಲ್ಲದಿದ್ದರೆ ಬೇರೆದಿನ ನಿಷೇಕಪ್ರಸ್ತ ಮಾಡಿ ಕೊಡಲಿ. ಇಲ್ಲದಿದ್ದರೆ ಹೀಗೆಯೇ ಹೊರಟು ಹೋದರೂ ಉತ್ತಮ. ಇದಕ್ಕೆ ಪೂರ್ವಭಾವಿಯಾಗಿ ಈ ಪ್ರಸ್ತಾವನ್ನು ಮಾಡಬಾರದಾಗಿತ್ತು; ಮಾಡಿದಮೇಲೆ ನಿಧಾನವಾಗಿ ಸಾಧಿಸುವ—ಎಂದು ಯೋಚಿಸಿ ಬಸವ ರಾಜನನ್ನು ಬೀಳ್ಕೊಟ್ಟು, ತಾನು ದಾವಣಗೆರೆಗೆ ಹೋಗಿ ಪ್ಯಾಸಿಂಜರ್ ಬಂಡಿಗೆ ಪುನಃ ಹಿಂತಿರುಗುವೆನೆಂದು ಹೇಳಿ ಹೊರಟ.

ಕತ್ತಲಾಯಿತು, ದಾವಣಗೆರೆ ಗಾಡಿಯಿಂದ ಉಮಾಪತಿ ಬಸವಂತ ರಾಯರ ಮನೆಗೆ ಬಂದಿಳಿದ. ಬಸವಂತರಾಯ ರೇಣುಕಪ್ರಸಾದನ ಮಿತ್ರ ವಿಶ್ವನಾಥನ ತಂದೆ ಇವನ ಲಗ್ನದಲ್ಲಿ ನಿಂತು ಕೆಲಸ ಮಾಡಿದವರು; ತುಂಬಾ ಪರಿಚಯವಿತ್ತು. ಬಸವಂತರಾಯರು ಇವನಿಗೆ ಆದರದ ಸ್ವಾಗತ ನೀಡಿ ಉಪಚಾರ ಮಾಡಿದರು ಅವನು ಆ ದಿನದ ಘಟನೆಗಳನ್ನು ಒಂದೊಂದಾಗಿ ಅವರ ಮುಂದೆ ಹೇಳಿದ. ಅವರು ಇವನ ಹೊಲಸು ನಡವಳಿಕೆಗೆ ಮನ ನೊಂದು ಹೇಳಿದರು. "ಇನ್ನೊಬ್ಬರ ಪ್ರೇರೇಪಣೆಯಿಂದ ಯಾವ ಕೆಲಸ ವನ್ನೂ ಮಾಡಬಾರದು. ದೇವರು ನಮಗೆ ಬುದ್ಧಿ ಕೊಟ್ಟಿದ್ದಾನೆ. ಸ್ವತಃ ನಾವು ವಿಚಾರಮಾಡಬೇಕು ಹಾಗೆಲ್ಲಾ ಆ ಬಸವರಾಜನ ಮಾತು ಕೇಳಿ ಹಾರಾಡಬಾರದು. ಅವನು ದೊಡ್ಡ ವ್ಯಭಿಚಾರಿ" ಎಂದು ಮಾತು ನಿಲ್ಲಿಸಿದರು.

"ಹಿರಿಯರ ಮನಸ್ಸು ನೋಯಿಸಬಾರದು. ದೇವರು ಒಳ್ಳೆಯದು ಮಾಡುವುದಿಲ್ಲ" ಎಂದು ಬಸವಂತರಾಯರ ಹೆಂಡತಿ ಪಾರ್ವತಿಬಾಯಿ ಹೇಳಿದಳು.

ಇತ್ತ ಉಮಾಪತಿ ಅಲ್ಲಿಗೆ ಬಂದಿರುವ ವಿಚಾರ ಗಂಗಮ್ಮನಿಗೆ ಪಾರ್ವತಿಬಾಯಿಯ ಮಗಳು ಭ್ರಮರಾಂಬೆಯಿಂದ ತಿಳಿಯಿತು. ಆಕೆಯೂ ಕೂಡ ಬಂದು ಸುಮ್ಮನೆ ಮಾತನಾಡದೆ ಕುಳಿತುಕೊಂಡಳು. ಮತ್ತೆ ಬಸವಂತರಾಯರು ಮಾತು ಮುಂದುವರಿಸಿ

"ಅಗೋ, ಗಂಗಮ್ಮನೂ ಬಂದಳು. ಮನೆಯಲ್ಲಿ ಹಿರಿಯರಿರುವಾಗ ಬೇರೆಯವರೊಡನೆ ಯಾಕೆ ಹೇಳಿ ಕಳುಹಿಸಬೇಕಿತ್ತು? ನಿನಗೆ ಕೇಳಲಿಕ್ಕೆ ಇಷ್ಟವಿಲ್ಲದಿದ್ದರೆ ಗಂಗಮ್ಮನಿಗೆ ಹೇಳಬೇಕಾಗಿತ್ತು."

"ಅವರು ನಾಳೆಯೇ ಮಾಡಿಕೊಡುತ್ತಾರೆಯೆ ?" ಎಂದ.

"ನಾಳೆ ಮಾಡಿಕೊಡುವ ಅಂಶ ಅತ್ತ ಬಿಡಿ. ಇಂದಿನದು ಹೇಳಿ."

"ಏನೋ ಆಗಿ ಹೋಯಿತು. ಅದನ್ನಾದರೂ ಯಾಕೆ ನೆನಸ ಬೇಕು."

"ಹೋಯಿತು ಬಿಡಿ, ಗಂಗಮ್ಮ" ಎಂದು ಬಸವಂತರಾಯರ ಹೆಂಡತಿ ನಡುವೆ ಭಾಗವಹಿಸಿ ಮಾತನಾಡಿದಳು.

ಅಷ್ಟರಲ್ಲಿ ಭ್ರಮರಾಂಬೆ ಕಾಫಿ ತಂದಿಟ್ಟು ಪುಟಿದು ಒಳಗೆ ಸೇರಿದಳು.

"ಇಷ್ಟು ಹೊತ್ತಿನಲ್ಲೇಕೆ ಕಾಫಿ !"

"ಇರಲಿ ಕೊಳ್ಳಿ, ಅದಕ್ಕೇನು. ಇನ್ನು ನಾಳಿನ ವಿಚಾರ. ನಿನಗೆ ನಾಳೆ ರಾತ್ರಿಯೋ ಶೋಭನ ಮಾಡಿಕೊಡಬೇಕೆ?"

"ಹೂಂ"

"ನಾನೇ ಸ್ವಯಂ ಶಿವಣ್ಣಯ್ಯನವರ ಬಳಿ ಬಂದು ಒಪ್ಪಿಸುತ್ತೇನೆ. ಹೀಗೆ ದಾರಿಗೆ ಬರಬೇಕು. ಸುಮ್ಮನೆ ಪೋಕರಿ ಪುಂಡರು ಕಟ್ಟಿಕೊಂಡು ಓಡಾಡಬಾರದು. ಇದರಿಂದ ನೀವೂ ಏನೂ ವ್ಯಥೆ ಮಾಡಿಕೊಳ್ಳಬೇಡಿ, ಗಂಗಮ್ಮ ನಮ್ಮ ವಿಶ್ವನಾಥ ಈಗ ಓಡಿಹೋಗಿದಾನೆ. ಅದಕ್ಕೆ ವ್ಯಥೆ ಮಾಡುತ್ತ ಅನ್ನ ನೀರು ಬಿಟ್ಟರೆ ಕೆಲಸ ಹೇಗೆ ನಾಗಬೇಕು?"

"ಅನ್ನನೀರು ಯಾರು ಬಿಟ್ಟಿದ್ದಾರೆ ಬಸವಂತಣ್ಣ."

"ಹೂಂ. ಹೋಗೋಣವೆ ನಿಮ್ಮ ಮಾವಂದಿರ ಮನೆ ಕಡೆಗೆ?"

ಅವನೂ ಹೂಂಗುಟ್ಟಿದ್ದ. ಬಸವಂತರಾಯರು ಹತ್ತಿರದ ಸೆಂಟರ ಹಾಗೆ ಆಸ್ಥೆವಹಿಸಿ ಕರೆದುಕೊಂಡು ಬಂದು, ಮಾರನೆಯ ದಿನ ನಿಷೇಕ ಪ್ರಸ್ತ ಮಾಡಿಕೊಡಲಿಕ್ಕೆ ಹೇಳಿದರು. ಹಿಂದೆ ನಡೆದ ಕಲುಷಿತ ಹಾಗೂ ಹೃದಯವಿದ್ರಾವಕ ಘಟನೆಗಳನ್ನೆಲ್ಲಾ ಮರೆಯಲಿಕ್ಕೆ ಅವನ ಪರವಾಗಿ ಬೇಡಿಕೊಂಡರು. ಅವರಿಗೂ ಇಂತಹ ಜಗಳಗಳು ಸರ್ವಥಾ ಬೇಕಾಗಿರ ಲಿಲ್ಲ.

"ಮೊದಲು ನಮ್ಮ ಹತ್ತಿರ ಬಂದು ಪ್ರಸ್ತಾಪಿಸಿದ್ದರೆ ಯಾರು ಬೇಡ ಅನ್ನುತ್ತಿದ್ದರು. ಅವನ ಮಾತು ಕಟ್ಟಿಕೊಂಡು ಈ ರೀತಿ ರಾದ್ಧಾಂತ ಮಾಡಿದರೆ ಯಾರಿಗೆ ದುಃಖವಾಗಲಿಕ್ಕಿಲ್ಲ? ಆಗಲಿ" ಎಂದು ಸಮಾಧಾನದ ಮಾತುಗಳನ್ನಾಡಿ,

"ವಿಶ್ವನಾಥನ ವಿಚಾರ ಏನಾದರೂ ತಿಳಿಯಬಂತೇ ?"

"ಪರೀಕ್ಷೆ ಫಲಿತಾಂಶದ ದಿನ ಎಲ್ಲಿಗೋ ಹೊರಟು ಹೋದವನು ಪತ್ತೆಯೇ ಇಲ್ಲ. ಹುಡುಕಿಸುತ್ತ ಇದ್ದೇನೆ. ದೇವರಿದಾನೆ .ಒಂದಲ್ಲ ಒಂದು ದಿನ ಬರುತ್ತಾನೆ. ಹೂಂ. .ಆಗಲಿ ಬರುತ್ತೇನೆ ಇನ್ನು" ಎಂದು ಹೇಳಿ ಬಸವಂತರಾಯರು ಹೊರಟುಹೋದರು.

ಮರುದಿನ ನಿಷೇಕಪ್ರಸ್ತ ಶಾಸ್ತ್ರೋಕ್ತವಾಗಿ ಮುಗಿಯಿತು. ಈ ವಿಚಾರ ಬಸವರಾಜನಿಗೂ ತಿಳಿದು ಅವನಿಗೆ ದುಃಖವಾಗದೆ ಇರಲಿಲ್ಲ. ತನ್ನಮಾತಿಗೆ ಬೆಲೆ ಕೊಡದೆ ಬಸವಂತರಾಯರ ಮಾತಿಗೆ ತನ್ನ ಚಿಕ್ಕಪ್ಪ ಬೆಲೆಕೊಟ್ಟರಲ್ಲಾ ಎಂದು ವ್ಯಗ್ರನಾಗಿ, ಈ ವಿಷಯವನ್ನು ಉಮಾ ಪತಿಯ ಎದುರಿಗೆ ಆಡಿ ತೋರಿಸಿಯೇ ಬಿಟ್ಟ. ಅವನೂ ಇವನ ಮಾತಿಗೆ ಪ್ರತ್ಯುತ್ತರ ಹೇಳುವ ಸ್ಥಿತಿಯಲ್ಲಿದ್ದಿಲ್ಲ. ಯಾವ ಕಾರ್ಯಕ್ಕಾಗಿಯೇ ಆಗಲಿ, ಅವನ ಅಪೂರ್ವ ಸಲಹೆಗಳಿಗಾಗಿ ಕೇಳುತ್ತಿದ್ದ. ಆದರೆ ಆ ಸಲಹೆಗಳ ಮೇರೆಗೆ ನಡೆಯುವುದು ಮಾತ್ರ ಸಾಧ್ಯವಾಗುತ್ತಿರಲಿಲ್ಲ. ಆಗ ತಾನು ಇವನ ಮಾತಿನಂತೆ ನಡೆಯುವುದು ವಿಹಿತವೋ ಅಥವಾ ನನ್ನ ಮಾವಂದಿರ ಆನೆಯಂತೆ ನಡೆಯುವುದು ಉತ್ತಮವೋ ಎಂದು ತನಗೆ ತಾನೆ ಪ್ರಶ್ನೆ ಹಾಕಿಕೊಳ್ಳುತ್ತಿದ್ದ. ಆದರೀಗ ಬಸವರಾಜನೊಡನೆ ಹೆಚ್ಚು ಒಡನಾಟ ಆಡಲು ಅಪೇಕ್ಷಿಸುತ್ತಿದ್ದಿಲ್ಲ. ರೇಣುಕಪ್ರಸಾದನೊಂದಿಗೆ ಸಾಯಂಕಾಲ ವಿಹಾರ ಹೋಗುತ್ತಿದ್ದ. ಎಂದಿನಂತೆ ಮಾತುಕಥೆ ಆಡು ತ್ತಿದ್ದ. ಇದರಿಂದ ಮಾಲಿನಿಗೂ ಹಿಡಿಸಲಾರದ ಸಂತೋಷವಾಗಿ, ಮನೆ ತುಂಬ ಚೆಲ್ಲುವಂತೆ ನಿಷ್ಕಾರಣ ನಗುತ್ತಿದ್ದಳು!

೫

ಮಗ್ಗಲು ತೊಟ್ಟಿಯೊಂದರಲ್ಲಿ ನೀರು ಬೀಳುತ್ತಿತ್ತು. ಹೊರಗಡೆ ತಿಂಗಳ ಬೆಳುದಿಂಗಳು ಅಮೃತಧಾರೆಯಾಗಿ ಹರಿಯುತ್ತಿತ್ತು. ಎಲ್ಲೆಲ್ಲಿಯೂ ಪ್ರಶಾಂತ ವಾತಾರಣ. ರೈಲ್ವೆ ಸ್ಟೇಷನ್ನಲ್ಲಿ ಇಂಜನ್ ಒಂದು ಕೂಗಿತು. ಈ ಪ್ರಶಾಂತ ವಾತಾವರಣದ ಶಾಂತತೆಗೆ ಮಗ್ಗಲು ತೊಟ್ಟಿಯಲ್ಲಿ ಬೀಳುತ್ತಿದ್ದ ನೀರು ಧಕ್ಕೆ ತಂದಿತ್ತು. ಆ ನೀರು ಬೀಳುತ್ತಿದ್ದ ಹಾಗೆಯೇ ವಿಶ್ವನಾಥನ ಕಣ್ಣಿನಿಂದ ನೀರು ಜುಳುಜುಳು ಬೀಳುತ್ತಿದ್ದವು. ಇನ್ನೊಂದು ಬಾರಿ ಅದೇ ಇಂಜನ್ ಕೂಗಿತು. ಕಣ್ಣೀರು ಹರಿದು ಹರಿದು ತಲೆದಿಂಬು ತೊಯ್ದು ಹೋಗಿತ್ತು. ಅವನು ಅದನ್ನು ತಿರುಗಿಸಿಟ್ಟುಕೊಂಡು ಪುನಃ ಮಲಗಲು ಯತ್ನಿಸಿದ ಆದರೆ ನಿದ್ರಾಂಗನೆ ಎಂದೋ ಅವನಿಂದ ಬಹು ದೂರ—ದೂರ ಹೊರಟು ಹೋಗಿದ್ದಳು.

ಈ ಎರಡು ತಿಂಗಳುಗಳಲ್ಲಿ ಅವನ ಜೀವನ ತುಂಬಾ ಮಾರ್ಪಟ್ಟು ಹೋಗಿತ್ತು. ಅವನ ಜೀವನದಲ್ಲಿ ಕ್ರಾಂತಿಗಳೆದ್ದಿದ್ದವು, ವಿಪ್ಲವಗಳು ಮೊಳಗಿದ್ದವು.

"ಬಾ ಮಗು, ಇನ್ನಾದರೂ ಬಂದರೆ ಸಾಕು. ನಿನ್ನನ್ನು ಒಮ್ಮೆಯಾದರೂ ನೋಡಬೇಕಾಗಿದೆ. ನಿನಗಿಷ್ಟವಾದುದನ್ನು ಮಾಡಿಕೊಂಡು ಸುಖವಾಗಿರುವಂತೆ. ನೀನಿಚ್ಛಿಸಿದರೆ ಇನ್ನೊಂದು ಬಾರಿ ಪ್ರಯತ್ನಿಸು; ತೇರ್ಗಡೆಯಾಗುವೆ. 'ಮರಳಿ ಯತ್ನವಮಾಡು, ಮರಳಿ ಯತ್ನವಮಾಡು, ಕೈಗೂಡದಿರಲು ಮರಳಿ ಯತ್ನವಮಾಡು' ಎಂಬ ಕವನವನ್ನು ಪ್ರಾಥಮಿಕ ಶಾಲೆಯಲ್ಲಿ ಓದಿದುದರ ಫಲವೇನು? ನಿನ್ನ ವಾಲಿಗನು ಪುಸ್ತಕದ ಬದನೆಕಾಯಿಯಾಗಿ ಹೋಯಿತೆ? ಇಷ್ಟೇ, ನಾವು ನಿನಗೆ ಮುಂದಾದರೂ ಹೇಳುವದು. ಅದೂ ಇಷ್ಟವಿಲ್ಲದಿದ್ದರೆ ಮನೆಯಲ್ಲಿಯೇ ಇರುವೆಯಂತೆ ಬಾ. ನೀನಿಚ್ಛಿಸಿದರೆ ಯಾವ ಕೆಲಸವನ್ನಾದರೂ ಮಾಡಿಕೊಂಡಿರುವೆಯಂತೆ ಹೊರಟು ಬಾ. ನಿನ್ನ ತಂಗಿ ಯಾವಾಗಲೂ ನಿನ್ನನ್ನೇ ಕೇಳುತ್ತಿರುತ್ತಾಳೆ. ಬಾ ಕಂದ, ಬಾ ಚಿನ್ನ" ಎಂದು ಅವನ ತಾಯಿ ಕನಸಿನಲ್ಲಿ ಬಂದು ಹೇಳಿದ ಹಾಗಾಯಿತು. ಆಗ "ಅವ್ವ, ಅವ್ವ" ಎಂದು ಅವನು ಕನವರಿಸಲಿಕ್ಕೆ ಪ್ರಾರಂಭಿಸಿದ. ಪಕ್ಕದಲ್ಲಿ ಮಲಗಿದ್ದ ಪುಟ್ಟ "ಏಕೋ

ಏನಾಯಿತೋ ವಿಶ್ವನಾಥ... .. ಮಲಗಿಕೊಳ್ಳೊ. . . .ಇನ್ನೂ ಹೊತ್ತಿದೆ ಮಲಗಿಕೊಳ್ಳೊ" ಎಂದು ಸಮಾಧಾನಮಾಡಿ ಮಲಗಿಸಿದ.

ನಿದ್ದೆ ಮತ್ತೆ ಬರಲಿಲ್ಲ. ಹೇಳಲಾರದ ತೀರಲಾರದ ಯೋಚನೆ ಯಿಂದ ತಲೆಯ ನರಗಳು ಹೊಡೆಯುತ್ತಿದ್ದವು. ಆ ಸಮಯಕ್ಕೆ ಸರಿ ಯಾಗಿ "ಏಳೋ ವಿಶ್ವನಾಥ, ದೋಸೆ ಹಿಟ್ಟು ರುಬ್ಬು. ಹೊತ್ತಾಯಿತು ಏಳೋ" ಎಂಬುದಾಗಿ ಶಾಂತಲಿಂಗ ಎಬ್ಬಿಸಿದ.

"ಊಹು, ಸ್ವಲ್ಪ ಸುಮ್ಮನಿರಯ್ಯ, ತಲೆ ಹೊಡೆಯುತ್ತಲಿದೆ. ಯಾಕೆ ಹಾಗೆ ಹೊಡಕೊಳ್ಳುತ್ತಾ ಇದೀಯೆ" ಎಂದು ವಿಶ್ವನಾಥ ಎದ್ದ. ದೋಸೆಗೆ ಹಿಟ್ಟು ರುಬ್ಬಿಯಾದ ಮೇಲೆ, ಚಟ್ನಿ ರುಬ್ಬಲಿಕ್ಕೆ ಮೊದಲು ಮಾಡಿದಾಗ ಬೆಳಗಿನ ಐದು ಘಂಟೆಯಾಗಿತ್ತು. ಅವನ ಕೈ ರುಬ್ಬು ಗಲ್ಲನ್ನು ಉರುಳಿಸುತ್ತಿತ್ತು, ಮನಸ್ಸು ಮಾತ್ರ ಒಂಭತ್ತು ಮೈಲಿ ದೂರದ ಲ್ಲಿದ್ದ ಊರಿನಲ್ಲಿ ಸುಳಿಯುತ್ತಿತ್ತು

ಅಂದು ವರ್ತಮಾನ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ತನ್ನ ಭಾವ ಚಿತ್ರದ ಕಡೆಗೆ ವಿಶ್ವನಾಥನ ಮನಸ್ಸು ಸುಳಿಯಿತು ಹಠಾತ್ತಾಗಿ ಆದಿನ ಪ್ರಕಟವಾಗಿದ್ದ ವಿಷಯದ ಕಡೆಗೂ ಮನಸ್ಸು ಸುಳಿಯಿತು.

"ನನ್ನ ಮಗ ವಿಶ್ವನಾಥರಾವ್ ಎಂಬುವನು ಮನೆಯಲ್ಲಿ ಬೇಸರಿಸಿ ಕೊಂಡು ಎಲ್ಲೋ ಹೊರಟು ಹೋಗಿದ್ದಾನೆ. ಕೆನ್ನೆಯ ಮೇಲೆ ಗಾಯದ ಕಚ್ಚೊಂದಿದೆ. ಬಣ್ಣದಲ್ಲಿ ಕಪ್ಪು ಗುಂಗುರ ಕೂದಲುಗಳನ್ನು ಹೊಂದಿ ದವನಾಗಿ, ಮೂರು ಭಾಷೆಗಳಲ್ಲಿ ಮಾತನಾಡಬಲ್ಲ. ಅದರಲ್ಲಿ ಕನ್ನಡ ಮತ್ತು ಮರಾಠಿಯಲ್ಲಿ ತುಂಬಾ ಚೆನ್ನಾಗಿ ಮಾತನಾಡುತ್ತಾನೆ. ಪತ್ತೆ ಹಚ್ಚಿದರಾಗಲಿ ಅಥವಾ ಮುಖತಃ ಬಂದು ತಲುಪಿಸಿದರಾಗಲಿ ಯೋಗ್ಯ ಬಹುಮಾನ ಕೊಡುತ್ತೇವೆ.

ಚಿ. ವಿಶ್ವನಾಥನಿಗೆ, ಮಗು, ನೀನು ಹೋದಂದಿನಿಂದ ನಿನ್ನ ತಾಯಿ ಬಹಳ ಕೃಶಳಾಗಿದ್ದಾಳೆ. ಎಲ್ಲಿದ್ದರೂ ಇದನ್ನು ತಂತಿ ಯೆಂದು ತಿಳಿದು ಹೊರಟು ಬಾ." ಇದನ್ನು ನೆನೆಸಿಕೊಂಡಾಗ ಅವನಿಗೆ ಅಳು ಕಟ್ಟೆಯೊಡೆದು ಒರುವ ಕೆರೆಯ ನೀರಿನಂತೆ ಉಕ್ಕಿ ಬಂತು. ಕಣ್ಣೀರು ಚಟ್ನಿಯಲ್ಲಿ ಬಿದ್ದು ಹೋದುದು ಅವನ ಗಮನಕ್ಕೆ ಬರಲಿಲ್ಲ.

ಊರಿಗೆ ಹೋಗಿ ತಂದೆ ತಾಯಿಗಳನ್ನು ಸಮಾಧಾನ ಮಾಡುವುದು

ಒಳಿತೆಂದು ಭಾಸವಾದಾಗ, ಪುನಃ ತನಗೆ ಲಗ್ನ ಮಾಡುವೆವೆಂದು ಅಂದು ಒತ್ತಾಯದಿಂದ ಹೇಳಿದ್ದು ಅವನಿಗೆ ಜ್ಞಾಪಕಕ್ಕೆ ಬಂತು. "ಬೇಡವಾದ ಲಗ್ನವನ್ನೇಕೆ ಮಾಡಲು ಮುನ್ನೋಡುತ್ತಿರುವರು? ಛೆ! ಆಗದು. ಈ ಹೋಟಲಿನಲ್ಲಿರುವುದೇ ಹತ್ತುಪಾಲು ಒಳ್ಳೆಯದು. ಎಂದೆಂದಿಗೂ ಊರ ಕಡೆಗೆ ಮುಖ ತೋರಿಸಬಾರದು ಈಗ ಮಾಡಿರುವ ಕಾರ್ಯ ತುಂಬಾ ಚೆನ್ನಾಗಿವೆಯೆಂದು ಅವನಿಗೆ ಹೊಳೆಯಿತು. "ಹೋಗಬಾರದು, ಹೋಗ ಲಾಗದು!"—ಎಂದು ಅವನ ಒಳದನಿ ಕಿರುಚುತ್ತಿತ್ತು. ಚಟ್ನಿ ಸಣ್ಣ ನಾಗಿದ್ದರೂ ಕೈ ಇನ್ನೂ ಕಲ್ಲನ್ನು ಉರುಳಿಸುತ್ತಲೇ ಇತ್ತು. ತೀರಲಾರದ ಆಳವಾದ ಯೋಚನೆ ಇನ್ನೂ ತೀರುವ ಹಾಗಿದ್ದಿಲ್ಲ.

"ನನಗೀಗ ಕಡಮೆ ವಯಸ್ಸೇನು? ಇಪ್ಪತ್ತು ಮೂರು ವರ್ಷ. ವಿವಾಹದ ವಯಸ್ಸಲ್ಲವೇನು? . ನಿಜ, ನಾನಿರುವ ಸ್ಥಿತಿ ಯಾರಿಗಾದರೂ ಅನಿರ್ವಚನೀಯವಾದ ಅಳಲನ್ನುಂಟು ಮಾಡದೆ ಇರದು. ಅದೆಷ್ಟು ಕೃಶ! ಅದೆಷ್ಟು ಬಡಕಲು! ಆದರೆ ದೃಢಕಾಯನಾಗುವ ಆಸೆ ಇನ್ನೂ ಉಳಿದಿಲ್ಲ . . . ಆದರಿಂದ ನಿರ್ಲಿಪ್ತನಾದರೆ ಮಾತ್ರ ಸಾಧ್ಯ. ಆಗುವ ಬಗೆ ಹೇಗೆ? ಅದೆಷ್ಟು ಪ್ರಯತ್ನಿಸಿದರೂ ಸಾಧ್ಯವಾಗಿಲ್ಲ. ಆ ಹೊಲಸು ಕೃತ್ಯ ಒಳಿತಲ್ಲ—ಒಳಿತಲ್ಲ ಎಂದು ಯೋಚಿಸುತ್ತಿದ್ದಂತೆ ಅದರ ಬಲೆ ಯಲ್ಲಿ ಬಿದ್ದಿರುತ್ತೇನೆ. ಸಾಂಪ್ರತ, ಅದರಿಂದ ಪೃಥಕ್ಕರಣನಾಗುವ ಬಗೆ ನನಗರಿಯದ ಜಟಿಲ ಸಮಸ್ಯೆ. ನನ್ನ ಜೀವನದಲ್ಲಿಯೇ ಲಗ್ನವಾಗುವ ಯೋಗವಿಲ್ಲದ ಮೇಲೆ ಯಾರೂ ಯಾವುದನ್ನೂ ಮಾಡಲಾರರು." ಹೀಗೆ ಯೋಚಿಸುತ್ತಿರುವಾಗಲೇ ಶಾಂತಲಿಂಗ ಚಟ್ನಿ ತರಲಿಕ್ಕೆ ಕೂಗಿ ಹೇಳಿದ. ಆಗ ತಾನೇನು ಮಾಡುತ್ತಿರುವನೆಂದು ಅರಿವಾಗಿ, ವಿಶ್ವನಾಥ ಚಟ್ನಿ ತುಂಬಿಕೊಂಡು ಹೊರಟ.

"ಎಷ್ಟು ಹೊತ್ತು ವಿಶ್ವನಾಥ, ಚಟ್ನಿ ರುಬ್ಬುವುದು?" ಎಂದು ಮಾಲಿಕ ಚನ್ನಮಲ್ಲಿಕಾರ್ಜುನರು ಗದರಿಸಿ ಕೇಳಿದರು.

"........" ಉತ್ತರವನ್ನೇ ಕೊಡಲಿಲ್ಲ. ಕಾಲ ಹೆಬ್ಬೆರಳಿನಿಂದ ನೆಲ ಕೆರೆಯುತ್ತಾ ಹಾಗೆಯೇ ನಿಂತುಕೊಂಡಿದ್ದ.

"ಹೋಗು, ದೋಸೆ ಹೊಯ್ಯಿ" ಎಂದರು.

ಗಣೇಶ ಫಲಹಾರ ಮಂದಿರ ಮೂಲೆಯಲ್ಲಿ ಒಂದು ಕಡೆ ಇತ್ತು.

ಹೋಟಲಿನಲ್ಲಿ ಕಾಲಿಟ್ಟರೆ ಸಾಕು, ನೊಣಗಳು 'ಝೊಂಯ್' ಎಂದು ಮುತ್ತುತ್ತಿದ್ದವು. ಹೋಟಲಿನವರು ತಿಂದಿಯನ್ನೇನೊ ಅಚ್ಚುಕಟ್ಟಾಗಿ ರುಚಿಯಾಗಿ ಮಾಡುತ್ತಿದ್ದರು. ಆದರೆ ಸ್ವಚ್ಛತೆಯೇ ಪ್ರಶ್ನೆಯೇ ಅಲ್ಲಿರಲಿಲ್ಲ. ಚಹ ಒಂದಕ್ಕೆ ಆರು ಕಾಸು ಮಾತ್ರ. ಆದ್ದರಿಂದ ಅಲ್ಲಿಗೆ ಬರುವವರೆಲ್ಲಾ ಬಂಡಿ ಬಾಡಿಗೆ ಹೊಡೆಯುವರು, ಬಡವರು, ಭಿಕ್ಷುಕರು ಗತಿಯಿಲ್ಲದವರು! ತಿಂಡಿಯ ಆಸೆಗೆಂದು ಬಂದು, ತಿಂಡಿ ತಿನ್ನುವಾಗ ಆ ಕೊಳಕನ್ನು ನೋಡಿ ಅನೇಕರು ಹೇಸಿಕೊಳ್ಳುತ್ತಿದ್ದರು. ಆದರೆ ನಿರ್ವಾಹವಿಲ್ಲ, ತಿಂಡಿ ತಿನ್ನಲು ಹೋಗಲೇಬೇಕಾಗಿತ್ತು. ತಿಂಡಿ ಕೊಡುತ್ತಿದ್ದ ಮಾಣಿಗಳು ಸಹ ವರ್ಷಕ್ಕೆ ಒಂದು ಬಾರಿಯಾದರೂ ಬಟ್ಟೆ ಸ್ವಚ್ಛಮಾಡಿಕೊಳ್ಳುತ್ತಿದ್ದಿಲ್ಲ.

ನಾಗರಿಕರಿಗೆ ಅಗೋಚರವಾಗಿದ್ದ ಇಂತಹ ಹೋಟಲೊಂದರಲ್ಲಿ ವಿಶ್ವನಾಥರಾವ್ ಓಡಿ ಬಂದು ಸೇರಿಕೊಂಡಿದ್ದ. ಅವನಿಗೆ ಪರೀಕ್ಷೆಯಲ್ಲಿ ಅನುತ್ತೀರ್ಣನಾಗಿದ್ದರಿಂದ ಅಸಮಾಧಾನವಿರಲಿಲ್ಲ, ಅದಕ್ಕಾಗಿ ತಂದೆತಾಯಿಗಳು ಬೈಯುವರೆಂದು ಹೆದರಿ ಓಡಿಬಂದಿದ್ದಿಲ್ಲ ವಿವಾಹದ ವಯಸ್ಸಾದ್ದರಿಂದ ಹೆಂಡತಿಯನ್ನು ಗಂಟುಹಾಕುತ್ತೇವೆಂದು ಒತ್ತಾಯದಿಂದ ಹೇಳಿದ್ದು, ಅವನಿಗೆ ಗಾಬರಿಯನ್ನುಂಟುಮಾಡಿತ್ತು ಒಂದೆರಡು ವರ್ಷ ತಡೆದು ಮದುವೆಯೂ ಆಗುವನೆಂದು ಅವನು ಹೇಳಿದ್ದರೂ ಅವರು ತೆಪ್ಪಗಾಗುತ್ತಿದ್ದರು. ಆದರೆ ಅವನು ಆಜೀವ ಪರ್ಯಂತ ಲಗ್ನವಾಗುವ ಸ್ಥಿತಿಯಲ್ಲಿದ್ದಿಲ್ಲ. ಅದು ಅವನ ಹೊರತು ಯಾರಿಗೂ ಗೊತ್ತಿರಲಿಲ್ಲ. ಆ ಒಂದು ಕಾರಣದಿಂದ ಅಭ್ಯಾಸಕ್ಕೂ ಸರಿಯಾಗಿ ಲಕ್ಷ್ಯ ಕೊಡುವ ಹಾಗಿದ್ದಿಲ್ಲ

ಸದಾ ಅವನಿಗೆ ಅದೇ ಯೋಚನೆ. "ಹೇಗೆ ಇದರಿಂದ ಬಿಡುಗಡೆಯಾಗುವದು? ತಾನು ಮನುಷ್ಯನಾಗಿ ಬಾಳಲು ಸಾಧ್ಯವೇ' ತಾನೋರ್ವ ಮೂರ್ತಿಮಂತ ಮಾನವನಾಗಬಲ್ಲನೆ? ಇಲ್ಲ—ಇಲ್ಲ" ಎಂದು ಅವನ ಒಳ ಮನಸ್ಸು ಉತ್ತರಿಸುತ್ತಿತ್ತು.

ಇವನ ಈ ಕೊರಗನ್ನು ಕಂಡು, ಅದರ ಕಾರಣವನ್ನು ಪ್ರೇಮಚಂದ್ರರು ಪತ್ತೆಮಾಡಲು ಯತ್ನಿಸಿದ್ದರು; ಆದರೆ ಅದಿನ್ನೂ ಸಾಧ್ಯವಾಗಿದ್ದಿಲ್ಲ. ಅವನೊಡನೆ ಯಾರಾದರೂ ಸಂಪರ್ಕ ಬೆಳೆಸಲು ಯತ್ನಿಸಿದರೆ, ಅವನಿಗೆ ಅಷ್ಟಾಗಿ ಸೇರುತ್ತಿದ್ದಿಲ್ಲ. ಅವನು ಯಾವದನ್ನೂ ಹೆಚ್ಚಿಗೆ

ಮಾತನಾಡುತ್ತಿದ್ದಿಲ್ಲ. ಪ್ರಶ್ನೆಗೆ ಉತ್ತರ ಮಾತ್ರ ಕೊಟ್ಟು ತನ್ನ ಹಾದಿ ಹಿಡಿಯುತ್ತಿದ್ದ. ಇದನ್ನು ನಿವಾರಣೆಮಾಡಲು ಯಾರಿಂದಲೂ ಸಾಧ್ಯವಿಲ್ಲ ವೆಂದು ಮನನಮಾಡಿಕೊಂಡಿದ್ದ.

ಆದಿನ ರಾತ್ರಿ ಗದ್ದಲವಿದ್ದುದರಿಂದ ಅವನೇ ಒಳ ಹೊರಗೆ ಕುಳಿತು ಕೊಂಡಿದ್ದ ಗಿರಾಕಿಗಳಿಗೆ ತಿಂದಿಕೊಡುತ್ತಿದ್ದ. ಒಳಗಿನಿಂದ, “ಬೇಗ ಒಂದು ಕಾಫಿ ಕೊಡಿ” ಎಂದು ಯಾರೋ ಕೂಗುತ್ತಲೇ ಇದ್ದರು. ವಿಶ್ವನಾಥ ಆ ವ್ಯಕ್ತಿಗೆ ಕಾಫಿ ಕೊಟ್ಟು, ಮುಖವನ್ನು ನಿಟ್ಟಿಸಿನೋಡ ಲಾರದೆ ಹೋದ. ಆ ವ್ಯಕ್ತಿ ಮಾತ್ರ ಇವನನ್ನು ವಿಲಕ್ಷಣ ರೀತಿಯಿಂದ ನೋಡಿ, “ವಿಶ್ವನಾಥ ನೀನು .ಇ . ಲ್ಲಿ” ಎಂದ.

“ಓ ಮಾಧು! ಮಾಧವರಾವ್!! ಯಾವಾಗ ಬಂದಿದ್ದೆ” ಎಂದು ತನಗೆ ಸರಿಸೆಯಿಲ್ಲದಂತೆ ಕೂಗಿ “ಊರ ಕಡೆ ಎಲ್ಲರೂ ಚೆನ್ನಾಗಿದ್ದಾ ರೆಯೆ? ಅಮ್ಮ ಹ್ಯಾಗಿದಾಳೆ?” ಎಂದ.

“ಅವರ ಕಥೆ ಏನು ಹೇಳಲಿ ..ನಿಮ್ಮ ಅಮ್ಮ ಕೊರಗಿ ಸಾಯುತ್ತಲಿ ದ್ದಾಳೆ. ನೀನಿಲ್ಲಿ ಮಾತ್ರ ಹೀಗೆ ಬದುಕುತ್ತ ಇದೀಯೆ ನಿನಗೇನು ಬಿಡಿಸಲಾರದ ಕಷ್ಟ ಬಂದಿತ್ತು? ನಿಮಗೇನು ಮನೆ ಇಲ್ಲವೆ? ಲಂಗಡಿ ಇಲ್ಲವೆ? ಪರದೇಶಿಯ ಹಾಗೆ ಇಲ್ಲಿಗೆ ಬಂದು ಈ ಕೆಲಸ .”

ಅವನ ಬಟ್ಟೆ, ಅವನ ಸ್ಥಿತಿಯನ್ನು ನೋಡಿ ಕರುಳು ಕೊಯ್ದು ಹೋಯಿತು ಮಾಧುವಿಗೆ. ತನ್ನ ಮಿತ್ರನ ಸ್ಥಿತಿ ಈ ರೀತಿಯಾಯಿತೆ? ಎಂದುಕೊಂಡ. ವಿಶ್ವನಾಥ ಏನೂ ಮಾತನಾಡದೆ ಮೌನವಾಗಿಯೇ ನಿಂತಿದ್ದ ಇವನ ಮಾತಿನ ಕಡೆಗೂ ಲಕ್ಷ್ಯವಿರಲಿಲ್ಲ. ಆಗ ಯಾಂತ್ರಿಕ ವಾಗಿ ವರ್ತಮಾನ ಪತ್ರಿಕೆಯಲ್ಲಿದ್ದ ಒಂದು ಪ್ರಕಟಣೆಯ ಕಡೆಗೆ ಕಣ್ಣಾಡಿ ಸುತ್ತಿದ್ದ.

“ಮೂರೇ ದಿನಗಳಲ್ಲಿ ನವ ಚೈತನ್ಯ, ನವ ಸ್ಫೂರ್ತಿಯನ್ನು ಕೊಟ್ಟು ಹೊಸ ಮನುಷ್ಯರನ್ನಾಗಿ ಮಾಡುವ ಒಂದೇ ಒಂದು ದಿವ್ಯೌಷಧವೆಂದರೆ ‘ತೇಜಸ್’ ” ಎಂದಿತ್ತು ಅದನ್ನು ಓದಿದಾಗ ವಿಶ್ವನಾಥನಿಗೆ ಸಂತೋಷ ವಾದರೂ ಇಂತಹ ಔಷಧಗಳಿಂದ ತನಗಷ್ಟು ಉಪಯೋಗವಿಲ್ಲವೆಂದು ಅವನಿಗೆ ಪರಿವೆಯಾಗಿತ್ತು. ಈ ಒಂದೆ “ವಾಟರ್ ಬರೀಸ್ ಕಾಂಪೊಂಡ್” “ಕೂಷ್ಮಾಂಡಲೇಹ” ಇತ್ಯಾದಿಗಳನ್ನು ತೆಗೆದುಕೊಂಡಿ

ದ್ದರೂ ಅವನ ದೇಹವನ್ನು ಸುಧಾರಿಸಿದ್ದಿಲ್ಲ.

ಔಷಧಗಳೇನೋ ಉತ್ಕೃಷ್ಟವಾದುವು. ಆದರೆ ಅವನು ಅದರಿಂದ ಮುಕ್ತನಾದರೆ ಮಾತ್ರ ಕೆಲಸ ಮಾಡಬಲ್ಲುವುಗಳಾಗಿದ್ದುವು. ಸೋರುತ್ತಿರುವ ಹಂಡೆಗೆ ಎಷ್ಟು ನೀರು ಸುರಿದರೇನು ಫಲ? ದೇಹದೊಳಗೆ ರೋಗವನ್ನಿಟ್ಟುಕೊಂಡು, ಶಕ್ತಿದಾಯಕ ಔಷಧಗಳನ್ನು ತೆಗೆದುಕೊಂಡರೇನು ಲಾಭ?—ಎಂಬ ವಿಚಾರಗಳು ಆಗಲೇ ಅವನ ಮನಸ್ಸಿನಲ್ಲಿ ತಲೆದೋರಿ ಹೋದುವು.

ವಿಶ್ವನಾಥ ರೋಗದಿಂದ ಬಿಡುಗಡೆಯಾಗಬಲ್ಲವನಾಗಿದ್ದ. ಅವನಿಗೆ ಗಂಟುಬಿದ್ದಿದ್ದು ವಾಸಿಮಾಡಲಾಗದ ರೋಗವಾಗಿದ್ದಿಲ್ಲ. ಅವನ ದೃಷ್ಟಿಯಲ್ಲಿ ಯಾರಿಗೂ ಇಂತಹ ಕಾಹಿಲೆಯು ಮಾಹಿತಿ ತಿಳಿಸಬಾರದಂಥದು. ಅವನು ಇದನ್ನು ಡಾಕ್ಟರ ಬಳಿ ಹೇಳುವುದಕ್ಕೆ ತುಂಬಾ ಹೆದರುತ್ತಿದ್ದ; ಅಲ್ಲದೆ ನಾಚಿಕೆಯೂ ಸಹ ಅವನನ್ನು ಆವರಿಸುತ್ತಿತ್ತು. ಮತ್ತೆ ಈಗ ಈ ಎಲ್ಲ ವಿಚಾರಗಳು ರೈಲು ಡಬ್ಬಿಗಳಂತೆ ಒಂದರ ಹಿಂದೊಂದು ಹಾದು ಹೋದುವು.

"ಊರಿಗೆ ಬರಬೇಕಂತ ಮಾಡಿರುವೆಯೋ ಇಲ್ಲವೋ ?"

"ಈಗ ನನ್ಗಕ್ಕಿಲ್ಲ ಮಾಧು. ಜೀವನ ಬಹಳ ಬೇಸರವಾಗಿದೆ." ಎಂದು ಚಿಕ್ಕ ಧ್ವನಿಯಲ್ಲಿ ಹೇಳಿದ.

"ಹಾಗೆಲ್ಲಾ ಮಾಡಿದರೆ ಹೇಗೆ ವಿಶ್ವ, ಸ್ವಲ್ಪ ಯೋಚಿಸಬೇಕು. ಅವರೆಷ್ಟು ನಿನ್ನಿಂದಾಗಿ ಕೊರಗುತ್ತಿದ್ದಾರೆಂತ ಕೊಂಚ ರೂಪಿಸಿಕೊಂಡರೆ ತಿಳಿಯುತ್ತದೆ."

"ಅವರವರ ಕರ್ಮ ಮಾಧು. ನಾನೇನು ಮಾಡಲಿ ಹೇಳು. ನನ್ನ ಜೀವನ ಎಂತಹ ದುರಂತಕ್ಕೆ ಸಿಕ್ಕಿಟ್ಟುಕೊಂಡಿದೆ ಎಂಬುದನ್ನು ಯೋಚಿಸಿದರೆ, ನಾನು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮ ಎಂತ ಹೇಳಬೇಕು.

"ಓಹೋ, ನಿನಗೇನು ಅಂತಹದು ಮುತ್ತಿ ಬಂದಿಸುತ್ತಿದೆ? ಪರೀಕ್ಷೆಯಲ್ಲಿ ಫೇಲಾಗಿರೋದೇನೆ ದುರಂತವೆ?"

"ಏನೋ ಗ್ರಹಚಾರ ಹಿಡಿದಿದೆ . . . ಆ ವಿಚಾರ ಹೋಗಲಿ ಬಿಡು."

"ನೀನು ಊರಿಗೆಂದು ಹಿಂತಿರುಗಬೇಕೆಂದು ಮಾಡಿರುವೆ?"

ವಿಶ್ವನಾಥ ಕಣ್ಣಾಲಿಗಳನ್ನು ಮೇಲೆ ಮಾಡಿ ಮೆಲು ದನಿಯಲ್ಲಿ ಹೇಳಿದ· "ನಾನು ಹೇಗೆ ಬರಲಿ ಮಾಧು? ನನಗೂ ಮಾನ ಮರ್ಯಾದೆ ಇಲ್ಲವೇನು? ಸ್ವಲ್ಪ ತಡೆ, ನೋಡೋಣಂತೆ. ಈ ಹೋಟೆಲ್ ಜೀವನ ಸಾಕಾಗಿ ಹೋಗಿದೆ. ಒಂದಲ್ಲ, ಒಂದು ದಿನ ಬರುತ್ತೇನೆ"

ಮಾಧವರಾವ್ ಎದ್ದು ನಿಂತುಕೊಂಡು "ನಾನಿನ್ನು ಹೋಗುತ್ತೇನೆ. ಇನ್ನು . . ." ಎಂಬ ಭಾವದಲ್ಲಿ ಅವನ ಮುಖವನ್ನು ನೋಡಿದ.

"ಹ್ಞಾ ಹೋಗುವೆಯಾ, ಆಗಾಗ ಬರುತ್ತಾ ಇರು" ಎಂದ ವಿಶ್ವನಾಥ

ಅವನು ಕಾಸುತೆತ್ತು ಸ್ವಲ್ಪ ದೂರ ಹೋಗಿರಬಹುದು. ವಿಶ್ವನಾಥ ಹೋಟೆಲ್‌ನಿಂದ ಹೊರಗೆ ಬಂದು ಅವನನ್ನು ಕೂಗಿ "ನಾನಿಲ್ಲಿರುವುದನ್ನು ದಯವಿಟ್ಟು ಯಾರ ಮುಂದೆಯೂ ಹೇಳಿದಿರು, ದಯವಿಟ್ಟು . ." ಎಂದ.

"ಛೆ! ಎಲ್ಲಿಯಾದರೂ ಉಂಟೆ ನಾನು ಯಾಕೆ ಹೇಳಲಿ" ಎನ್ನುತ್ತ ಮಾಧು ಹೊರಟ·

ಅಂದಿನ ರಾತ್ರಿ ಮಾಧವರಾಯನಿಗೆ ಬೇಗ ನಿದ್ದೆ ಬರಲಿಲ್ಲ; ಕಾರಣ ಅವನು ವಿಶ್ವನಾಥನನ್ನು ಹುಡುಕಿಬಿಟ್ಟಿದ್ದ. ಅವನು ಅದೇ ಊರಿನಲ್ಲಿ— ಅದೇ ಗಣೇಶ ವಿಲಾಸದಲ್ಲಿರಬಹುದೆಂದು ಮಾಧೂ ಎಂದೂ ನಂಬಿರಲಿಲ್ಲ. ಬಹುಶಃ ಉತ್ತರ ಹಿಂದೂಸ್ಥಾನದ ಕಡೆಗೆ ಹೋಗಿರಬಹುದೆಂದು ಮಾಧು ವಿನ ಊಹಾಪೋಹ. ಇದನ್ನು ಉಪಾಯದಿಂದ ಬಸವಂತರಾಯರಿಗೆ ತಿಳಿಸಿ ಅವನನ್ನು ಕರೆದುಕೊಂಡು ಹೋಗಬೇಕಾಗಿತ್ತು. ನಿದ್ದೆಯೂ ಶೀಘ್ರ ಬರಲೊಲ್ಲದು. ಎಂಥೆಂಥಹ ಹುಳುಗಳೋ ಅವನನ್ನು ಕಡಿಯುತ್ತಿದ್ದುವು.

ಅವನು ಮಲಗಿದ್ದ ಕೊರಡಿ ಒಂದು ದಲ್ಲಾಳಿ ಅಂಗಡಿಯ ಅಟ್ಟ. ಅವರಜ್ಜಿ ರಾಧಮ್ಮ ಈ ಅಟ್ಟವನ್ನು ಗೊತ್ತು ಮಾಡಿ ಕೊಟ್ಟಿದ್ದಳು. ಆ ಕೊರಡಿ ಅಂಗಡಿಗೆ ಬರುವ ಗಿರಾಕಿಗಳಿಗಾಗಿ ಮೀಸಲಿರಿಸಿದ್ದು. ಆ ಕೋಣೆ ಧೂಳು, ಹುಳು, ನೇಂಗಾಯಿ ಚೀಲ ಇತ್ಯಾದಿಗಳಿಂದ ತುಂಬಿ ಹೋಗಿತ್ತು. ಅಲ್ಲಿಯೇ ಕಾಲೇಜ್ ಆದನಂತರ ಮಾಧು ಓದಿಕೊಂಡು ಪವಡಿಸುತ್ತಿದ್ದ. ಪ್ರಾತಃಕಾಲ ಇಂತಹ ಒಂದು ಯಾವುದಾದರೂ ಹೋಟಲಿನಲ್ಲಿ ಆರು ಕಾಸುತೆತ್ತು ಕಾಫಿ ಕುಡಿದು ಹೋಗುತ್ತಿದ್ದ.

....ಹಾಗೆಯೇ ಕಣ್ಣು ಹತ್ತಿದ್ದರೂ ಮಾಧೂಗೆ ಫಕ್ಕನೆ ಎಚ್ಚರವಾಯಿತು. ಮತ್ತೆ ವಿಶ್ವನಾಥನ ಜ್ಞಾಪಕ ಬಂತು, ಅವನಿರುವ ಸ್ಥಿತಿಯನ್ನು ನೆನಸಿಕೊಂಡು ಬಿಕ್ಕಿ ಬಿಕ್ಕಿ ಅತ್ತ. ಈರ್ವ ಗೆಳೆಯರಿದ್ದರೂ ಒಬ್ಬೊಬ್ಬರು ಒಂದೊಂದು ತರಹ. ಏನೇನೋ ವಿಷಯಗಳು ಅವನ ನೆನಪಿಗೆ ಬರುತ್ತಿದ್ದವು. ವಿಶ್ವನಾಥರಾಯನ ಪರಿಸ್ಥಿತಿ ಹೀಗಾದರೆ, ತಾನು ಮತ್ತು ರೇಣುಕಪ್ರಸಾದ, ಬಡತನದ ಮೂಸೆಯಲ್ಲಿ ಕಾಯುತ್ತಿದ್ದಾರೆ. ಅವನು ಹೀಗೆ ತಿಳಿದುಕೊಂಡಿದ್ದ. ಬಡತನದ ಮೂಸೆಯಲ್ಲಿ ಕಾದರೆ ಜೀವನದ ವಿವಿಧ ಅನುಭವಗಳಾಗುತ್ತವೆ. ಅಕ್ಕಸಾಲಿಗರ ಮೂಸೆಯ ಚಿನ್ನ ಕಾದಂತೆ ಹೇಗೆ ಶುದ್ಧವಾಗುತ್ತ ಹೋಗುತ್ತದೆಯೋ, ಅಂತೆಯೇ ಮನುಷ್ಯನೂ ಸಹ ಈ ಬಾಳ ಮೂಸೆಯಲ್ಲಿ ಕಾಯಬೇಕು.—ಆದರೆ ಎಲ್ಲಿಯವರೆವಿಗೆ? ಪುಟಕ್ಕೆ ಬರುವವರೆವಿಗೂ ಕಾಯಲಿ. ಆದರೆ ಅನು ಕಾದು ಮೂಸೆಯಲ್ಲಿಯೇ ಸುಟ್ಟುಹೋಗಬಾರದು.

ರೇಣುಕಪ್ರಸಾದ ಈಗಾಗಲೆ ಪುಟಕ್ಕೆ ಕೊಟ್ಟ ಚಿನ್ನದಂತಾಗಿದ್ದಾನೆ; ದುರಾದೃಷ್ಟವಶಾತ್ ಕರಗಿಹೋದರೆ? ..ಸಾಧ್ಯವಿಲ್ಲ, ಹಾಗಾಗಲು ಸಾಧ್ಯವಿಲ್ಲ! ಅವನಂಗಡಿಯ ಒಡೆಯರು ಇಷ್ಟರಲ್ಲಿಯೇ ಸಂಬಳ ಗೊತ್ತು ಮಾಡುತ್ತಾರೆ. ಆಗ ಅವನ ಬಾಳು ಸುಗಮವಾಗಿಯೇ ಆಗುವುದು.

ಪುನಃ ನಿದ್ದೆ ಬರುವ ಮಾತೇ ಇರಲಿಲ್ಲ. ದೀಪ ಹಚ್ಚಿಕೊಂಡು ಕುಳಿತನು. ಓದು ಸಾಗಲಿಲ್ಲ. ಕಾಲೇಜ್ ಬಳಿ ಮನಸ್ಸು ಹರಿದು, ಹಿಂದಿನ ಸಾಯಂಕಾಲದ ಪ್ರಕರಣ ಒಂದು ನೆನಪಿಗೆ ಬಂತು.

ಆ ಹಿಂದಿನ ದಿನ ಸಾಯಂಕಾಲ ಕಾಲೇಜು ಕರ್ನಾಟಕ ಸಂಘದ ಆಶ್ರಯದಲ್ಲಿ ಭಾಷಣ ಸ್ಪರ್ಧೆಯೊಂದಿತ್ತು. ಕೆಲವು ಹುಡುಗರು ಭಾಷಣಗಳನ್ನು ಮಾಡಿದ್ದರು. ಇನ್ನೂ ಕೆಲವರು ಭಾಷಣಮಾಡದೆ ಉಳಿದಿದ್ದರು. ಅವರೂ ಸಹ ತಮ್ಮ ವಾಗ್ಝರಿಯನ್ನು ಹರಿಸುತ್ತಿದ್ದಾಗ ವಿದ್ಯುತ್ ದೀಪಗಳು ಇದ್ದಕ್ಕಿದ್ದಂತೆಯೇ ಆರಿಹೋಗಿ ಗಲಾಟೆಯೆದ್ದಿತ್ತಲ್ಲದೆ, ಕಾಲೇಜಿಗೆ ಬರುವ ಹೆಣ್ಣು ಮಕ್ಕಳ ಮೇಲೆ ಹುಡುಗರು ಹಲ್ಲೆ ಮಾಡಿದರು. ಆಗವರು ತಮ್ಮ ಚಾರಿತ್ರ್ಯ ರಕ್ಷಣೆಗಾಗಿ ಕಾಲಿಗೆ ಬುದ್ಧಿ ಹೇಳಬೇಕಾಯಿತು. ಆ ಕತ್ತಲೆಯಲ್ಲಿ ಯಾರೂ ಏನನ್ನೂ ಮಾಡುವಂತಿದ್ದಿಲ್ಲ. ಈ ಘಟನೆ ನಡೆದಾಗ ಮಾಧವರಾಯನೂ ಸಭೆಯಲ್ಲಿ

ಉಪಸ್ಥಿತನಿದ್ದ. ಇವನ್ನು ನೋಡಿ ಆ ಹೆಂಗಳೆಯರು ಯಾವ ಪುರುಷಾರ್ಥಕ್ಕಾಗಿ ಬರುವರೋ ಎಂದುಕೊಂಡ. ಅವನು ಮೊದಲಿನಿಂದ ಸಹ ವಿದ್ಯಾಭ್ಯಾಸಕ್ಕೆ ವಿರೋಧಿ. ಇಂದಿನ ಚರ್ಚೆಯಲ್ಲಿಯೂ ಸಹ ಸಹವಿದ್ಯಾಭ್ಯಾಸ ಬೇಡವೆಂದು ಅನೇಕ ದೃಷ್ಟಾಂತರಗಳನ್ನಿತ್ತು ತನ್ನ ಭಾಷಣವನ್ನು ಪುಷ್ಟೀಕರಿಸಿದ್ದ.

ಹೆಣ್ಣು ಮಕ್ಕಳು ತಮ್ಮ ಭಾಷಣದಲ್ಲಿ "ಪುರುಷರಂತೆ ಹೆಂಗಸರಿಗೂ ವಿದ್ಯೆ ಬೇಕೇಬೇಕು. ಮಕ್ಕಳನ್ನು ಮುಂದಿನ ಪೌರರನ್ನಾಗಿ ಮಾಡುವುದು ಮಹಿಳೆಯರ ಕೈಯಲ್ಲಿದೆ. 'ತಾಯಿಯಂತೆ ಮಗು, ನೂಲಿನಂತೆ ಬಟ್ಟೆ' ಎಂಬ ನಾಣ್ನುಡಿಯಂತೆ ತಾಯಿ ಸುಶಿಕ್ಷಿತಳಾಗಿದ್ದರೆ ಮಕ್ಕಳನ್ನೂ ಸುಶಿಕ್ಷಿತರನ್ನಾಗಿ ಮಾಡಬಲ್ಲಳು" ಎಂದು ಹೇಳಿದ್ದರು.

ಆದರೆ ಆ ದಿನ ಸಹವಿದ್ಯಾಭ್ಯಾಸ ಬೇಡವೆಂಬುದಕ್ಕೆ ಈ ಉದಾಹರಣೆಗಿಂತ ಮಿಗಿಲಾದುದು ಯಾರಿಗೂ ತೋರಲಿಲ್ಲ. ಈ ಒಂದು ಘಟನೆಯಿಂದ ಸಮಾರೋಪಭಾಷಣ ಯಾರಿಗೂ ಬೇಡವಾಗಿತ್ತು. ಮಾಧವರಾಯ ತನ್ನ ಭಾಷಣದಲ್ಲಿ ಹೀಗೂ ಹೇಳಿದ್ದ: ಪ್ರಥಮತಃ ಹೆಂಗಸರಿಗೆ ವಿದ್ಯೆ ಬೇಕು. ಅವರಿಗೆ ಅವಶ್ಯವಾದ ವಿದ್ಯೆಯನ್ನು ಕೊಡೋಣ. ಅಲ್ಲದೆ ಡಾಕ್ಟರಣಿಯರಾಗಬೇಕೆಂಬುವವರು [illegible] ಪ್ರತ್ಯೇಕವಾಗಿ ಮೀಸಲಾಗಿರುವ ವಿಶ್ವವಿದ್ಯಾನಿಲಯಗಳಲ್ಲಿ ಅಭ್ಯಾಸ ಮಾಡಬಹುದು. ಪ್ರತ್ಯೇಕ ವಿದ್ಯಾಲಯಗಳಿರುವ ಸ್ಥಳಗಳಲ್ಲಿ ಹೋಗಿ ವ್ಯಾಸಂಗಮಾಡಲು ಅನಾನುಕೂಲತೆಯಿದ್ದರೆ, ಸಾಕಷ್ಟು ವಿದ್ಯೆ ಕಲಿತು, ಅವರ ಮಟ್ಟಕ್ಕೆ ಅರ್ಹವಾದ—ಕಸೂತಿ, ಸಂಗೀತ, ಚಿತ್ರಕಲೆ, ಗೃಹನಿರ್ವಹಣಕಾರ್ಯ, ಹಿಂದಿ ಇತ್ಯಾದಿಗಳಲ್ಲಿ ಪಾರಂಗತರಾಗಲಿ. ಇವನ್ನೇ ತನ್ನ ಭಾಷಣದಲ್ಲಿ ಹೇಳಿದವನಲ್ಲವೆ, ಸಹವಿದ್ಯಾಭ್ಯಾಸದಲ್ಲಿ ಪ್ರಣಯ ಪ್ರಸಂಗಗಳೂ ನಡೆಯಬಹುದೆಂದೂ ಸ್ಥೂಲವಾಗಿ ಹೇಳಿದ್ದ. ಅದಕ್ಕೆ ಹೊಂದುವಂತೆ, ಆ ಭಾಷಣಕ್ಕೆ ಇನ್ನೂ ಪುಷ್ಟಿಯಾಗುವಂತೆ ಈಗ ಘಟನೆಯೊಂದು ನಡೆದುಹೋಯಿತು. ಅದರಿಂದ ಹುಡುಗರಿಗೆ ಅವಮಾನವೆಂದು ತಿಳಿದು, "ನಾಚಿಕೆ, ನಾಚಿಕೆ" ಎಂದು ಆಗಲೇ ಕೂಗಿ ಬಂದಿದ್ದ. ಇವೆಲ್ಲವೂ ತಿರುಗಿ ಸ್ಮೃತಿಗೆ ಬಂದು, ಅವನನ್ನು ಅದರಲ್ಲಿಯೇ ತಲ್ಲೀನನನ್ನಾಗಿ ಮಾಡಿ ಬೆಳಕು ಹರಿಸಿದವು.

ಪೂರ್ವದಿಗಂತದಲ್ಲಿ ಸೂರ್ಯನು ಕೆಂಪು ಬಣ್ಣದ ತೆಳು ಉಡುಪನ್ನು

ಧರಿಸಿಕೊಂಡು ಮೆಲ್ಲನೆ ಇಣಿಕಿಹಾಕುತ್ತಿದ್ದ. ಅಟ್ಟದ ಮೇಲೆ ಮಲಗಿದ್ದ ಮಾಧವರಾಯನಿಗೆ ಮೊದಲ ಕಿರಣಗಳನ್ನು ಬೀರಿದನೆಂದು ಕಾಣುತ್ತದೆ. ಆಗವನಿಗೆ ಸಮಯದ ಅರಿವಾಯಿತು. ಶೌಚಕ್ಕೆ ಹೋಗಿ ಬಂದು ಮುಖ ತೊಳೆಯಲು ಬೀದಿ ನಲ್ಲಿಗೆ ಹೋದ. ಅಲ್ಲಿಯೇ ಅವನಿಗೆ ನೀರು ಸಿಕ್ಕು ತ್ತಿತ್ತು. ನಲ್ಲಿಯ ಬಳಿ ಬಂದು ಸುತ್ತಲೂ ನೋಡಿದ ಒಂದು ಕಡೆ ರಸ್ತೆ, ಇನ್ನೊಂದು ಕಡೆ ಸಾಲೆ ಡಿಪ್ಪೊ. ಈಗ ಸಾಲೆ ಅಡ್ಡೆ ಇರುವ ಸ್ಥಳ ದಲ್ಲಿ ಮೊದಲು ಬಸ್ ನಿಲ್ದಾಣವಿತ್ತು. ಸಾಲೆ ಅಡ್ಡೆಯ ಹಿಂಭಾಗದಲ್ಲಿ ಕೊಚ್ಚೆ ನೀರು ಹರಿಯುವ ಚರಂಡಿ ಅದರ ಪಕ್ಕದಲ್ಲಿ ಒಂದು ವಿಶಾಲ ವಾದ ಆಲದ ಮರವಿದೆ. ಆ ಆಲದಮರದಡಿಯಲ್ಲಿ ಅನೇಕ ಭಿಕ್ಷುಕರ ಸಂಸಾರಗಳಿವೆ. ಅವರಿಗೆ ಸಂಸಾರದ ಯಾವ ತೊಂದರೆಗಳೂ ಇಲ್ಲ. ಎಲ್ಲರೂ ಸುಖವಾಗಿದ್ದಾರೆ. ಒಂದೊಂದು ಸಂಸಾರಕ್ಕೆ ವ್ಯತ್ಯಾಸ ನಾಲ್ಕೈದು ಗಜಗಳ ದೂರ ಮಾತ್ರ. ಅವರ ಗೃಹದ ಛಾವಣಿ ಆಲದ ಮರದ ಕೊಂಬೆಗಳು. ಎಲ್ಲರೂ ಒಂದೇ ಮನೆಯವರಂತಿದ್ದಾರೆ. ಅವರಿಗೂ ನಮ್ಮಂತೆ ಮಕ್ಕಳು, ಸಂಸಾರ, ಹೋಟೆಲುಗಳಿವೆ. ಅಲ್ಲಿ ಚಹ ಒಂದಕ್ಕೆ ಮೂರು ಕಾಸು ಮಾತ್ರ ತಾನು ಹೋಗುತ್ತಿದ್ದ ಹೋಟಲಿಗಿಂತಲೂ ಅಲ್ಲಿ ದರ ಬಹುಕಡಮೆ ಚಹ-ಕಾಫಿ ಮಾರುವವರು ಊರಿನವರು. ಎಲ್ಲರೂ ತಾನು ನಿಂತಿದ್ದ ನಲ್ಲಿಯ ಬಳಿ ಮುಖ ತೊಳೆದುಕೊಂಡು ಚಹ ಕುಡಿಯು ತ್ತಿದ್ದಾರೆ, ತಿಂಡಿಯನ್ನೂ ಕೆಲವರು ತಿನ್ನುತ್ತಿದ್ದಾರೆ ಇನ್ನೊಂದೆಡೆಗೆ ಗೊಗ್ಗರು ಧ್ವನಿಯಲ್ಲಿ ಯಾರೋ ಹಾಡು ಹೇಳುತ್ತಿದ್ದಾರೆ. ಅದೊಂದು ಪುಟ್ಟ ಪ್ರಪಂಚ-ಎಂದುಕೊಂಡ. ಇನ್ನೂ ಸೂಕ್ಷ್ಮವಾಗಿ ಎಲ್ಲ ವ್ಯವ ಹಾರಗಳನ್ನು ನೋಡುತ್ತಲೇ ಇದ್ದಾನೆ. ಒಂದೆಡೆಯಲ್ಲಿ ಹೆಂಗಸೊಬ್ಬಳು ಅಡಿಗೆ ಮಾಡುತ್ತ ಚಿತ್ರಗೀತೆಗಳನ್ನು ಹೇಳುತ್ತಿದ್ದಾಳೆ. ಒಬ್ಬಳು ತನ್ನ ತಾಯಿಯ ತಲೆಯಲ್ಲಿರುವ ಹೇನುಗಳನ್ನು ಹುಡುಕುತ್ತ ಸಿಕ್ಕಿದುವನ್ನು ಕುಕ್ಕುತ್ತ ಕುಳಿತಿದ್ದಾಳೆ. ಆ ಕೊಚ್ಚೆ ಬಳಿಯಿರುವ ಕಲ್ಲಿನಮೇಲೆ ಚಿಕ್ಕಮಕ್ಕಳು ಬಟ್ಟೆ ಒಗೆಯುತ್ತಿದ್ದಾರೆ. ಆಲದಮರದ ಕೊಂಬೆಗಳಿಂದ ಹರಿದು ಬಂದಿದ್ದ ಬೇರುಗಳು, ಬಾಲಕರ ಉಯ್ಯಾಲೆಗಳು. ಒಂದು ಪುಟ್ಟ ಸಂಸಾರದವರು ಕೊಂಬೆಯಿಂದ ಹಗ್ಗ ಇಳಿಬಿಟ್ಟು, ಅದಕ್ಕೆ ಬಟ್ಟೆ ಯನ್ನು ತೊಟ್ಟಿಲೋಪಾದಿ ಕಟ್ಟಿ, ಮಗುವನ್ನು ಮಲಗಿಸಲು ಅನುಕೂಲ

ಮಾಡಿಕೊಂಡಿದ್ದಾರೆ. ಅಲ್ಲಿಗೂ ಏಕೋ ಎನಿತೋ ಪೋಲೀಸ್‌ನವನು ಬಂದಿದ್ದಾನೆ ಆ ಪ್ರಪಂಚಕ್ಕೂ ಅವನು ಬಿಡುವಂತಿಲ್ಲ!

ಇಟ್ಟಿಗೆ ಪುಡಿಯಿಂದ ಹಲ್ಲುಜ್ಜುತ್ತಾ ಮಾಧವರಾಯ ಈ ದೃಶ್ಯವನ್ನು ನೋಡಿದ. ತಮಗಿಂತ ಬಡವರು ಹೇಗೆ ಅನುಕೂಲತೆಗಳನ್ನು ಮಾಡಿಕೊಂಡು ಒಂದೆಡೆಯಲ್ಲಿ ಸಹಕಾರಭಾವನೆಯಿಂದ ತಮ್ಮ ಜೀವಿತವನ್ನು ಕಳೆಯುತ್ತಿದ್ದಾರೆಂದು ತಿಳಿದುಕೊಂಡ. ಇವರ ಉದ್ಧಾರವೆಂದು? ಎಂದೂ ಇಲ್ಲ ..ಹಾಗೆ ಹತ್ತು ವರುಷ, ಹೀಗೆ ಹತ್ತು ವರುಷ ಕಳೆದು, ಎಲ್ಲರೂ ಹೋಗುವ ಮನೆಗೆ ಇವರೂ ಹೋಗುವರೆಂದುಕೊಂಡ.

ಬೇಗ ಮುಖ ತೊಳೆದುಕೊಂಡು ಮಾಧು ಕಾಫಿ ಕುಡಿದು ಕಾಲೇಜಿಗೆ ಹೊರಟ. ತರಗತಿಯಲ್ಲಿ ಪಾಠದತ್ತ ಗಮನ ಕೇಂದ್ರೀಕೃತವಾಗಲೊಲ್ಲದು. ವಿಚಾರ ಸುಳಿಯಲ್ಲಿ ಸಿಕ್ಕಿ ತೊಳಲಾಡುತ್ತಿದ್ದ. ಕಾಲೇಜು ಬಿಟ್ಟಮೇಲೆ ಹಾದಿಯಲ್ಲಿ ಬರುತ್ತಿದ್ದಾಗ ಬಸವಂತರಾವ್ ಭೆಟ್ಟಿಯಾದರು.

"ಯಾವಾಗ ಬಂದಿದ್ದು?"

"ಬೆಳಗಿನ ಬಂಡಿಗೆ"

"ಒಂದು ಸಂತೋಷದ ವಿಚಾರ ಹೇಳಲಿ ?"

"ಏನದು ? ಯಾತರದು ?"

"ಉಪಹಾರ ಕೊಡಿಸಬೇಕು."

"ಸದ್ಯ ಸಂತೋಷದ ಅಂಶವಾಗಿದ್ದರೆ ಅಗತ್ಯವಾಗಿ...." ಬಸವಂತರಾಯರ ತಿಳಿಯುವ ತವಕ ಹೆಚ್ಚಾಯಿತು.

"ನಿಮ್ಮ ವಿಶ್ವನಾಥ.... ನೋಡಿ ಕಿವಿ ಹೇಗೆ ನೆಟ್ಟಗಾದವು"

"ಏನು ವಿಶ್ವನಾಥನೆ! ಎಲ್ಲಿದ್ದಾನೆ ಖಂಡಿತ ಕಂಡಿದ್ದನೇ ?"

"ಹುಂ, ಗಣೇಶ ವಿಲಾಸದಲ್ಲಿ ಕೆಲಸಕ್ಕೆ ಹೊಂದಿಕೊಂಡಿದಾನೆ" ಎಂದು ಅವನೊಡನೆ ನಡೆದೆಲ್ಲ ಸಂಭಾಷಣೆಗಳನ್ನು ಮಾಧು ಕೂಲಂಕಷವಾಗಿ ಹೇಳಿದ. ಕಮಲದ ಹೂವು ಅರಳುವಂತೆ ಅವರ ಮುಖವರಳಿತು. ತಕ್ಷಣವೇ ಇಬ್ಬರೂ ಹೋಟೇಲೊಂದರಲ್ಲಿ ತಿಂಡಿ ತಿಂದು ಗಣೇಶವಿಲಾಸಕ್ಕೆ ಬಂದು,

"ವಿಶ್ವನಾಥ ಎಂಬ ಹುಡುಗನಿದಾನೆಯೆ?" ಎಂದು ಅವರು ಚನ್ನಮಲ್ಲಿಕಾರ್ಜುನರೊಡನೆ ಕೇಳಿದರು.

"ಹ್ಞೂ, ಇದಾನೆ. ಯಾಕೆ?"

"ಅವನು ನಮ್ಮ ಹುಡುಗ, ಹರಿಹರದವನು, ಓಡಿ ಬಂದಿದ್ದಾನೆ"

"ನಿಮ್ಮ ಹುಡುಗ! ಹರಿಹರದವನು!"

ಬಸವಂತರಾಯರು "ಹೌದು. ಪರೀಕ್ಷೆಯಲ್ಲಿ ನಪಾಸಾಗಿದ್ದಕ್ಕೆ ಓಡಿ ಬಂದಿದಾನೆ."

"ಆಂ! . ಎಂಥ ಹುಡುಗ! ನನ್ನೆದುರಿಗೆ ಪರದೇಶಿ ಎಂತ ಹೇಳಿದ" ಎಂದು ಅವನು ಆಶ್ಚರ್ಯವನ್ನು ವ್ಯಕ್ತಪಡಿಸಿದ.

"ಏ, ವಿಶ್ವನಾಥ ಬಾರೋ ಇಲ್ಲಿ ರಾಜಾ! ಆಂ...." ಎಂದು ಕರೆದರು. ಅವನು ಬಸವಂತರಾಯರನ್ನು ನೋಡಿ ದಿಙ್ಮೂಢನಾಗಿ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದ. ಆಗವರು,

"ಏನು ಆಗಿತ್ತು ಮಗು ಹೀಗೆ ಬರಲಿಕ್ಕೆ. ನೋಡಿ, ಯಾವದರಲ್ಲೂ ಇವನಿಗೆ ಕಡಮೆಯಿಲ್ಲ. ಊರಿನಲ್ಲಿ ಜವಳಿ ಅಂಗಡಿ ಇದೆ. ಇವನಿಗೆ ಹಣ, ಬಟ್ಟೆ, ಯಾವದಕ್ಕೂ ಕೊರತೆಯಿಲ್ಲ."

"ಏನೋ ಆಗಿ ಹೋ—ಹೋತ—ಪ್ಪ" ಎಂದು ಬಿಕ್ಕಿಸಿದ.

ಚೆನ್ನಮಲ್ಲಿಕಾರ್ಜುನರು ಸಾಂತ್ವನಪಡಿಸಿ "ಹಾಗೆಲ್ಲಾ ಮಾಡಬಾರದಾಗಿತ್ತು. ಮನೆಯಲ್ಲಿ ಎಷ್ಟು ನೊಂದುಕೊಳ್ಳುತ್ತಿದಾರೊ!"

"ಏನು ಹೇಳಲಿ, ಎಲ್ಲಾ ನಮ್ಮ ಗತಜನ್ಮದ ಕರ್ಮಫಲ"

"ಅಷ್ಟೇ ಸ್ವಾಮಿ. ಹೋಗೋಗು, ಕಾಫಿ ಕೊಂಡು ಬಾ" ಎಂದರು.

"ಏನು ಬೇಡಿ. ನಾವು ಈಗ ತಾನೆ ಕುಡಿದು ಬಂದೆವು. ನೋಡಿ, ಈ ಮಾಧು ಇವನೂ ಒಂದೇ ತರಗತಿಯಲ್ಲಿ ಓದಿದವರು ಬೆಳಿಗ್ಗೆ ಚಹ ಕುಡಿಯಲಿಕ್ಕೆ ಬಂದಾಗ ಭೆಟ್ಟಿಯಾದನಂತೆ. ಅವನೇ ಹೇಳಿ ಉಪಕಾರ ಮಾಡಿದ ಪುಣ್ಯಾತ್ಮ. ನಿಮ್ಮ ಹೆಸರು?"

"ಚನ್ನಮಲ್ಲಿಕಾರ್ಜುನ"

ಆ ವೇಳೆಗೆ ಸರಿಯಾಗಿ ವಿಶ್ವನಾಥ ಕಾಫಿ ತಂದಿಟ್ಟ.

"ಬಟ್ಟೆ ಹಾಕಿಕೊಂಡು ಹೊರಡು ವಿಶ್ವನಾಥ. ಊರಿಗೆ ಹೋಗುವೆಯಂತೆ. ನಿನ್ನ ಹತ್ತು ರೂಪಾಯಿ ತೆಗೆದುಕೋ ಹಿಡಿ. ಕೊನೆಗೆ ದೇವರು ತಂದೆ ಮಕ್ಕಳನ್ನು ಕೂಡಿಸಿದನಲ್ಲ." ಎಂದು ಯಜಮಾನ ಆಕಳಿಸುತ್ತ ಮನೆಗೆ ಹೋಗಿ ಹತ್ತು ರೂಪಾಯಿಗಳನ್ನು ತಂದಿತ್ತರು. ಈಗ ಮೂರು

ತಿಂಗಳಿಂದ ಶಾಂತಲಿಂಗ, ಸಿದ್ಧ, ಲಿಂಗರಿಗೆ ವಿಶ್ವನಾಥ ಆತ್ಮೀಯ ಬಂಧುವಾಗಿದ್ದ. ಈಗವನು ಹೋಗುವನೆಂದು ತಿಳಿದಕೂಡಲೆ ಅವರಿಗೆ ಸಿಡಿಲು ಬಡಿದಂತಾಯಿತು. ಹರಿಹರ ದೂರದೂರಲ್ಲ. ಆಗಾಗ ಕೂಡಿದಾಗ ಬರುವೆನೆಂದು ತಿಳಿಸಿ ಚನ್ನಮಲ್ಲಿಕಾರ್ಜುನರಿಗೆ ನಮಸ್ಕರಿಸಿ ವಿಶ್ವನಾಥ ಹೊರಟು ಬಂದ.

ತಮ್ಮ ಮಗ ಹೋಟೆಲ್ ಮಾಣಿಯಾದನಲ್ಲಾ ಎಂದು ಬಸವಂತ ರಾವ್ ಸ್ಟೇಶನ್ ಬರುವವರೆಗೂ ಯೋಚಿಸುತ್ತಿದ್ದರು. ತಮ್ಮ ಮನೆತನದ ಹಿರಿಯರ ಸ್ಥಾನಮಾನಗಳಿಗೂ, ಅಲ್ಲದೆ ಈಗ ತಾವಿರುವ ಸ್ಥಾನಕ್ಕೂ, ತಮ್ಮ ಮಗನು ಆತ್ಮಗೌರವವಿಲ್ಲದೆ ಮಾಣಿಯಾಗಿದ್ದುದು ಎಷ್ಟೂ ಸರಿ ಬಿದ್ದಿಲ್ಲ. ತಮ್ಮ ತಂದೆ ಅಣ್ಣಾಸಾಹೇಬರು ತಮಗೆ ಗೊತ್ತಿದ್ದ ಹಾಗೆ ಹಳ್ಳಿಯ ಮುಖಂಡರಾಗಿದ್ದರು. ವೀರಶೈವ ಮುಖಂಡರಲ್ಲಿ ಸೊಲ್ಲಾಪುರ ತಾಲ್ಲೂಕಿನಲ್ಲಿ ಅಗ್ರಗಣ್ಯರೆಂದು ಖ್ಯಾತಿವೆತ್ತಿದ್ದರು. ಇವರ ಮನೆತನ ಸುಪ್ರಸಿದ್ಧ ದೇಸಾಯಿ ಮನೆತನ ಎಂದು ಹೇಳುತ್ತಿದ್ದರು.

ಇವರದು ಸೊಲ್ಲಾಪುರದ ಬಳಿಯಿರುವ ಒಂದು ಹಳ್ಳಿ. ಆಗೊಂದು ಕಾಲದಲ್ಲಿ ಇವರು ಬರಗಾಲದ ಪೆಡಂಭೂತಕ್ಕೆ ಸಿಕ್ಕಿ ಆಹಾರದ ಅಭಾವದ ಕೂಡ ಕುಡಿಯುವ ನೀರಿನ ಅಭಾವದಿಂದಾಗಿ ಹರಿಹರಕ್ಕೆ ಹೊರಟು ಬಂದಿದ್ದರು ಆಗ ಹರಿಹರಕ್ಕೆ ಬಂದು ಆಸ್ತಿಗಳನ್ನು ಕೊಂಡು, ಒಂದು ಜವಳಿ ಅಂಗಡಿ ಇಟ್ಟಿದ್ದರು ಈಗ ಆ ಅಂಗಡಿಯ ವ್ಯವಸ್ಥೆಯನ್ನು ತಮ್ಮ ಅಳಿಯಂದಿರೊಬ್ಬರು ನೋಡಿಕೊಳ್ಳುತ್ತಿದ್ದರು ತಾವು ಹೊಲಗಳ ಮೇಲ್ವಿಚಾರಕರಾಗಿ ಕೆಲಸ ಮಾಡುತ್ತಿದ್ದರು

ಮರ್ಯಾದೆಯಿಂದ ಬಾಳಿದ್ದ ಬಸವಂತರಾಯರಂತಹವರಿಗೆ ಆದರ್ಶ ಮಗನು ಹುಟ್ಟಿ ತಲೆತಪ್ಪಿಸಿಕೊಂಡು ಹೋಗಿ, ಈ ರೀತಿಯ ವೇಷ ಹಾಕಿಕೊಂಡು ಕಾಲ ಕಳೆದದ್ದು, ಸಹಜವಾಶ್ಚರ್ಯವನ್ನುಂಟು ಮಾಡದಿರಲಿಲ್ಲ. ಆದರೆ ಇವೆಲ್ಲ ಪೂರ್ವಕರ್ಮದ ಪ್ರಭಾವ ಎಂದು ಯೋಚಿಸಿದಾಗ ದುಃಖ ಶಮನವಾಯಿತು. ದಾರಿಯಲ್ಲಿ ವಿಶ್ವನಾಥನ ಜೊತೆಗೆ ಹೆಚ್ಚು ಮಾತು ಬೆಳೆಸಲು ಪ್ರಯತ್ನಿಸಲಿಲ್ಲ. ಆಗ ಅವನೊಡನೆ ಮಾತು ಬೆಳೆಸಲು ಪ್ರಯತ್ನಿಸಿದರೂ ಅವನು ಮಾತನಾಡುವ ಹಾಗಿದ್ದಿಲ್ಲ ಗಾಡಿಯೊಂದು ಪುಟ್ಟಸಂಸಾರವೆಂದು ಮಾಧುವಿಗೆ ಮತ್ತೆನಿಸದಿರಲಿಲ್ಲ. ಅಲ್ಲಿ

ಸಂಸಾರದಲ್ಲಿ ಮಾತನಾಡುವ ಹಾಗೆ ಒಬ್ಬರೊಬ್ಬರು ಆತ್ಮೀಯತೆಯಿಂದ ಮಾತನಾಡುತ್ತಿದ್ದರು ಅಲ್ಲಿಯೂ ಸಹ ವ್ಯಾಪಾರ ಹರಾಜುಗಳು ನಡೆಯುತ್ತಿದ್ದವು. ಒಂದೊಂದು ವೇಳೆ ಕಳ್ಳತನಗಳೂ ಕೂಡ. ಭಿಕ್ಷುಕ ಒಬ್ಬ ಬಂದು, ಗಾಡಿ ಹೊರಟಮೇಲೆ ಹಾಡುತ್ತಿದ್ದ.

"ಕಲಿಯುಗವಲಿ ಹರಿನಾಮವ ನೆನೆದರೆ, ಕುಲಕೋಟಿಗಳು ಉದ್ಧರಿಸುವವೋ ರಂಗಾ॥." ಎಂದು.

ವಿಶ್ವನಾಥನ ಲಕ್ಷ್ಯ ಅವನ ಹಾಡಿನಕಡೆಗಿದ್ದಿಲ್ಲ, ಅವನ ಕಡೆಗಿತ್ತು. ಅವನು ಕುರುಡನಾಗಿ ಹೊಟ್ಟೆಗಿಲ್ಲದಿದ್ದರೂ ಹೃಷ್ಟ ಪುಷ್ಟವಾಗಿದ್ದಾನೆ, ಅವನಿಗೂ ವಿಶಾಲವಾದ ಎದೆಯೊಂದಿದೆ.

—ಆದರೆ ತನಗೆ ಸಂಪತ್ತು, ಬುದ್ಧಿ ಲಭ್ಯನಾಗಿದ್ದರೂ ತಾನು ಮಾತ್ರ ಹಾಗಿಲ್ಲ.

ಇದಕ್ಕೆ ಕಾರಣನಾಗಿದ್ದ ಓರ್ವ ವ್ಯಕ್ತಿಯನ್ನು ಮನಸಾ ಅವನು ನಿಂದಿಸಿದ. ಅವನ ವಂಶ ಮತ್ತು ಅವನು, ಕ್ರಿಮಿಕೀಟವಾಗಿ ಹುಟ್ಟಲೆಂದು ಮನಸಾರೆ ಶಪಿಸಿದ. ಇಂತಹವರು ಹುಟ್ಟ ಲೋಕಕಲ್ಯಾಣಕ್ಕೆ ಎಡೆಗೊಡದೆ ನಾಶಕ್ಕೆ ಗುರಿಯಾಗುತ್ತಾರೆ. ಕಾರಣ ಈ ರೀತಿಯ ಜನಗಳನ್ನು ಜೀವಂತ ಕೊಂದರೂ ಸರಿಯೆ ಎಂದು ಕಿಡಿಕಿಡಿಯಾದ ಇದೇ ರೀತಿಯ ಕೃತ್ಯಕ್ಕೆ ಯಾರ್‍ಯಾರು ಯಾವರೀತಿಯಿಂದಾಗಿ ಸಿಕ್ಕಿದ್ದಾರೆಯೋ ದೇವರೊಬ್ಬ ಬಲ್ಲ! ಇನ್ನೊಬ್ಬರ ಸಂಗ ಬಲದಿಂದ ತಾನು ಸಿಕ್ಕಿಹಾಳಾಗಿದ್ದರೆ, ಸ್ವಯಂ, ಪರಪ್ರೇರಣೆಯಿಲ್ಲದೆ ಸಿಕ್ಕಿರಬಹುದು. ಇಂತಹ ದುರಂತ ಜೀವಿಗಳು ಅದೆಷ್ಟು ಜನಗಳಿದ್ದಾರೊ? ಅವರೂ ನನ್ನಂತೆ ಉಸಿರ್ಗರೆಯುತ್ತಿರಬಹುದು. ತನ್ನಂತೆ ವಿವಾಹಕ್ಕೆ ಒಪ್ಪದೇ ಇರಬಹುದು.

'ವಿವಾಹ'' ಆ ಮೂರು ಅಕ್ಷರದ ಶಬ್ದ ತ್ರಿಶೂಲದೋಪಾದಿಯಾಗಿ ಅವನಿಗೆ ಭಾಸವಾಗುತ್ತಿತ್ತು. ಆ ಶಬ್ದವನ್ನು ಕೇಳಿದಕೂಡಲೆ ಎದೆಯೊಡೆದು ನೀರಾಗುತ್ತಿತ್ತು! ಈ ಯೋಚನೆಯಲ್ಲಿ ಹರಿಹರದ ಸ್ಟೇಷನ್ ಬಂದಿದ್ದು ಅವನಿಗೆ ಗೊತ್ತಾಗಲೇ ಇಲ್ಲ.

## ೬

ಒಂದು ಶುಭ ದಿನದಲ್ಲಿ ಶಿವಣ್ಣಯ್ಯನವರು ಮಾಲಿನಿಯನ್ನು ಗಂಡನ ಮನೆಗೆ ಕಳುಹಿಸಿಕೊಟ್ಟರು.

ಮಾಲಿನಿಯಿಲ್ಲದ ಮನೆ ಗಂಗಮ್ಮನಿಗೆ ಹಾಳು ಹೊಡೆಯುತ್ತಿತ್ತು. ಆಕೆಗೆ ಮನೆಯಲ್ಲಿ ಏನನ್ನೋ ಕಳೆದುಕೊಂಡಂತಾಗಿತ್ತು

ರೇಣುಕ ಪ್ರಸಾದನೂ ಮನೆಯಲ್ಲಿರುತ್ತಿದ್ದಿಲ್ಲ. ಸದಾ ಅಂಗಡಿಯಲ್ಲಿಯೇ ಹೊತ್ತು ಕಳೆಯುತ್ತಿದ್ದ. ಹೀಗಿರಲು ಒಮ್ಮೆ ದೀವಾವಳಿ ಬರಲು ಅಂಗಡಿ ಪೂಜೆ ಮಾಡಬೇಕಾಗಿತ್ತು ಅದರ ಸಿದ್ಧತೆಯಲ್ಲಿ ತೊಡಗಿದ್ದ ಅವನು ಉದಯಕ್ಕೆ ಸ್ನಾನಮಾಡಿ ಲಿಂಗಾರ್ಚನೆಯನಂತರ ಅಂಗಡಿಗೆ ಹೊರಟು ಹೋದ.

ಅವನು ಅಂಗಡಿಗೆ ಬರುತ್ತಲೇ "ಯಾಕಿಷ್ಟು ಹೊತ್ತು? ಅಂಗಡಿ ಪೂಜೆ ಅಂತ ಗೊತ್ತಿಲ್ಲವೆ?" ಎಂದರು ಸಾಹುಕಾರ ದೊಡ್ಡಪ್ಪ.

"ಸ್ನಾನಕ್ಕೆ ನದಿಗೆ ಹೋಗಿದ್ದೆ. ಸ್ವಲ್ಪ ಹೊತ್ತಾಯಿತು.'

"ಸ್ವಲ್ಪ ಬೇಗ ಏಳಲಿಕ್ಕೆ ಆಗಲಿಲ್ಲವೆ? ಹೂಂ ಈ ಹುಡುಗನನ್ನು ಮನೆಯಲ್ಲಿ ಬಿಟ್ಟು ಬಂದು, ಬೆಳ್ಳೂಡಿಗೆ ಹೋಗಿ, ಬಾಳೆ ಕಂಬ, ಮಾವಿನೆಲೆ ಎಲ್ಲ ಹೇರಿಸಿಕೊಂಡು ಬನ್ನಿ" ಎಂದರು.

ಧಣಿಯ ಮಾತನ್ನು ಕೇಳಿ ರೇಣುಕ ಸಂಬಳ ಕೊಡುವವರೂ ಈ ರೀತಿ ಕೆಲಸ ಹೇಳಲಿಕ್ಕೆ ಸಾಧ್ಯವಿಲ್ಲವೆಂದುಕೊಂಡ. ಇಂದಿಗೆ ಅಂಗಡಿ ಗುಮಾಸ್ತನೆಂದು ಸೇರಿ ಏಳು ತಿಂಗಳಾಗಿ ಹೋಗಿತ್ತು. ಅವನ ಪಗಾರದ ಮಾತೇ ಇರಲಿಲ್ಲ.

ರೇಣುಕ ಬೆಳ್ಳೂಡಿಗೆ ಹೋಗಿ ಎಲ್ಲಾ ವಸ್ತುಗಳನ್ನು ಹೇರಿಸಿಕೊಂಡು ಬಂದು, ಅಂಗಡಿಯ ಅಲಂಕಾರದಲ್ಲಿ ತಾನೂ ತೊಡಗಿದ. ವಿದ್ಯುದ್ದೀಪಗಳನ್ನು ಶೃಂಗಾರಕ್ಕೆಂದು ಲಕ್ಷ್ಮಿಯ ಭಾವಚಿತ್ರದ ಸುತ್ತಲೂ ಹಾಕಿ ಅಲಂಕಾರ ಮಾಡಿದ. ಪ್ರೇಮಚಂದ್ರ, ಮಾಧು, ವಿಶ್ವನಾಥರಿಗೆ ತನ್ನ ಪರವಾಗಿ ಪೂಜೆಗೆ ಬರಲಿಕ್ಕೆ ಅವನು ಆಹ್ವಾನಿಸಿದ್ದ.

ಪೂಜೆಯ ವೇಳೆಯಲ್ಲಿ ರೇಣುಕಪ್ರಸಾದ ಆಹ್ವಾನಿತ ಜನಗಳಿಗೆ

ತಾನೆ ನಿಂತು ತಾಂಬೂಲ ವಿತರಣವನ್ನು ಸಾಂಗವಾಗಿ ನೆರವೇರಿಸಿದ. ಇದೆಲ್ಲ ಮುಗಿದಮೇಲೆ ಅಂಗಡಿಯವರು ತಾಂಬೂಲ ಬಾಳೆಹಣ್ಣುಗಳ ಜೊತೆಗೆ ಒಂದು ರೂಪಾಯಿ ದಕ್ಷಿಣೆ ಇಟ್ಟು, ರೇಣುಕಪ್ರಸಾದನಿಗಿತ್ತು ನಮಸ್ಕಾರ ಮಾಡಿದರು. ವೀಳೆಯದೆಲೆಯನ್ನು ಅಗಲಮಾಡಿ ನೋಡಿದ! ಹೌದು. ಒಂದು ರೂಪಾಯಿ ಇತ್ತು! ತನ್ನ ಜನ್ಮದಲ್ಲಿ ಮೊದಲಬಾರಿಗೆ ಸಂಪಾದಿಸಿದ ಒಂದು ರೂಪಾಯಿ.

"ನಾವಿನ್ನು ಬರುತ್ತೇವೆ, ರೇಣುಕ" ಎಂದು ಪ್ರೇಮಚಂದ್ರರು ಮಾತು, ವಿಶ್ವನಾಥರೊಂದಿಗೆ ಹೊರಟು ಹೋದರು ವಿಶ್ವನಾಥ ಈ ಮೊದಲಿಗಿಂತಲೂ ಮುದುರಿಕೊಂಡು ಮಾತಾಪುತ್ತಿದ್ದ. ತಾನು ದಾವಣಗೆರೆಗೆ ಹೇಳದೆ ಕೇಳದೆ ಓಡಿಹೋದ ವ್ಯಕ್ತಿ. ತಾನು ಇಂಥವರೊಡನೆ ಜೊತೆಯಾಗಿರುವುದು ಒಳಿತಲ್ಲ ಅದರಲ್ಲಿಯೂ ಪುಸ್ತಕಗಳೆಂದರೆ ಮೂಗು ಮುರಿಯುತ್ತಿದ್ದ. ರೇಣುಕಪ್ರಸಾದ ಕಥೆ, ಕಾದಂಬರಿಗಳನ್ನು ಯಾವಾಗಲೂ ಓದುವುದನ್ನು ನೋಡಿ, ಇದರಿಂದ ಏನು ಲಾಭನೋ? ಏಕೆ ಇಷ್ಟು ಪ್ರೀತಿಯಿಂದ ಓದುವರೋ?—ಎಂದುಕೊಳ್ಳುತ್ತಿದ್ದ. ಒಮ್ಮೆ ಅವನು ರೇಣುಕನನ್ನು ಕೇಳಿಯೇ ಬಿಟ್ಟ. ಆಗ ಅವನೆಂದಿದ್ದ:

"ಲೇಖಕ ಜನಜೀವನ ಜೀವಾಳವನ್ನು ಸಾಹಿತ್ಯದಲ್ಲಿ ರಚಿಸುತ್ತಾನೆ. ಅಂತಹ ಕೃತಿಗಳನ್ನು ಓದುವುದರಿಂದ ಜನಜೀವನ ಸುಧಾರಿಸುತ್ತದೆ. ನೋಡು, ಉದಾಹರಣೆಗಾಗಿ ಶ್ರೀ ಬಿ. ಎಂ. ಶ್ರೀಕಂಠಯ್ಯನವರ 'ದುಃಖ ಸೇತು' ಎಂಬ ಕವನವನ್ನು ಓದಿದ ಕೊಡಗಿನ ತರುಣನೋರ್ವ ಬಿಟ್ಟಿದ್ದ ಹೆಂಡತಿಯನ್ನು ಕಟ್ಟಿಕೊಂಡನಂತೆ" ಎಂದಿದ್ದ!

ಇದೊಂದೂ ವಿಶ್ವನಾಥನಿಗೆ ಅರ್ಥವಾಗುತ್ತಿದ್ದಿಲ್ಲ 'ಏನೋ, ಇದ್ದರೂ ಇರಬಹುದು' ಎನ್ನುತ್ತಿದ್ದ. ಪುನಃ ಪ್ರೇಮಚಂದ್ರರು ಮಾತಿಗಾರಂಭಿಸಿದರು.

"ಏನೋ ವಿಶ್ವನಾಥ, ಪರೀಕ್ಷೆ ಪುನಃ ಕಟ್ಟೋದಿಲ್ವೆ?"

"ಇಲ್ಲ ಸಾರ್"

"ಯಾಕೆ, ಇನ್ನೊಂದು ಬಾರಿ ಕಟ್ಟಿ ನೋಡಿದ್ದರೆ ಚೆನ್ನಾಗಿತ್ತು."

"ಸಾಕು. ಓದಲಿಕ್ಕೆ ಬರೆಯಲಿಕ್ಕೆ ಬರುತ್ತೆ. ಅಂಗಡಿಯ ಮೇಲ್ವಿಚಾರಕನಾಗಿರುತ್ತೇನೆ."

'ಹಾಗೆಯೇ ಮಾಡು. ನಿಮ್ಮ ತಂದೆ ಅಭಿಪ್ರಾಯ ಏನು ?"

"ಅವರು ಬೇಕಾದರೆ ಓದು, ಇಲ್ಲದಿದ್ದರೆ ಬಿಡು ಅಂತ ಅಂದರು."

"ವಿಶ್ವನಾಥರಾವ್, ಬೇಕಾದರೆ ಟೈಪ್‌ರೈಟಿಂಗ್ ಕಲಿಯಬಹುದಲ್ಲ" ಎಂದು ಮಾಧು ಎನ್ನುತ್ತಿದ್ದಾಗ ಹಿಂದಿನಿಂದ ರೇಣುಕಪ್ರಸಾದ ಬಂದು ಕಣ್ಣು ಮುಚ್ಚಿದ.

ಮಾಧು "ಮುರುಳಿಮೋಹನ" ಎಂದ.

"ಊಹೂ, ಅಲ್ಲ" ಎಂದ ರೇಣುಕ.

"ಹಾಗಾದರೆ ರೇಣುಕ" ಎಂದ

ಪ್ರೇಮಚಂದ್ರರು ಮುಗುಳ್ನಗುತ್ತ "ನೀನು ಮಾತನಾಡಬಾರದಾಗಿತ್ತು. ದನಿಯಿಂದ ಗೊತ್ತುಮಾಡಿದ" ಎಂದರು.

"ಓಹೋ, ಮರೆತಿದ್ದೆ ಕಣಯ್ಯ" ಎಂದು ರೇಣುಕ ಹೇಳಿದ ನಗುತ್ತ.

"ಮನೆಗೆ ಹೊರಟೆಯೋ ಅಥವಾ ಅಂಗಡಿ ಕೆಲಸ ಇದೆಯೋ" ಎಂದ ಮಾಧು.

"ಎಲ್ಲಿ ಅಂಗಡಿ ಕೆಲಸ ಮಹಾರಾಯ. ಬೆಳಗಿನಿಂದ ಓಡಾಡಿ ಓಡಾಡಿ ಸಾಕಾಗಿ ಹೋಯಿತು. ಪುಣ್ಯಾತ್ಮ ಇಷ್ಟು ದಿವಸ ಕೆಲಸ ಮಾಡಿಸಿಕೊಂಡಿದ್ದಕ್ಕೆ ಒಂದು ರೂಪಾಯಿಯಾದರೂ ಕೊಟ್ಟನಲ್ಲ!"

"ದಕ್ಷಿಣೆಯೇ?" ಎಂದ ವಿಶ್ವನಾಥ.

"ಹೂಂ .."

ಒಂದು ರೂಪಾಯಿ ತನ್ನ ಜೀವನದಲ್ಲಿ ಸಂಪಾದಿಸಿದೆನಲ್ಲ ಎಂದು ರೇಣುಕನಿಗೆ ಹಿಡಿಸಲಾರದ ಸಂತೋಷ. ಸಾಹುಕಾರರನ್ನು ತೆಗಳುವ ನೆವದಲ್ಲಿ ಆ ಸಂತೋಷವನ್ನು ಅವನು ಪ್ರಕಟಿಸಿದ. ಕಂಡ ಕಂಡ ಮಿತ್ರರೊಡನೆಯೂ ಈ ವಿಚಾರವನ್ನು ಹೇಳುತ್ತಿದ್ದ ಮನೆಗೆ ಓಡಿ ಹೋದವನೇ ಗಂಗಮ್ಮನ ಬಳಿ "ಅಕ್ಕಾ, ರೂಪಾಯಿ ದೊಡ್ಡಪ್ಪ ಕೊಟ್ಟರು" ಎಂದು ಕೂಗಿದ.

ದಕ್ಷಿಣೆ ಕೊಟ್ಟಿದ್ದರೂ ಕೊಟ್ಟಿರಬಹುದೆಂದು ಶಿವಣ್ಣಯ್ಯನವರಿಗೆ ಅಂತಹ ಆಶ್ಚರ್ಯವೇನೂ ಆಗಲಿಲ್ಲ. ಗಂಗಮ್ಮನಿಗೆ ತಮ್ಮ ಸಾಕು ಮಗನು ಒಂದು ರೂಪಾಯಿ ದುಡಿದು ತಂದಿರುವನಲ್ಲ—ಎಂದು ಸಂತೋಷ ಕಾರಂಜಿಯಂತೆ ಉಕ್ಕಿ ಬಂತು. ಆವೊತ್ತು ಆಕೆ ರೇಣುಕನಿಗೆ ನಾಲ್ಕು

ಮಿಳ್ಳೆ ತುಪ್ಪ, ಹೆಚ್ಚು ಹಾಕಿದರು. ಶಿವಣ್ಣಯ್ಯನವರಿಗೆ ಅದನ್ನು ಕೊಡಲು ಹೋದಾಗ, ಮಗನ ಅತುಲನೀಯವಾದ ಪ್ರೀತಿಯನ್ನು ನೋಡಿ. "ನೀನು ಗೆಯ್ತ ಮಾಡಿಕೊಡುವುದು ಬೇಡ. ಮುಂದೆ ಸಂಸಾರ ಸಾಗಿಸುವಾಗ ಕೊಡುವಿಯಂತೆ ." ಎಂದು ನಕ್ಕು ನುಡಿದರು.

ದೊಡ್ಡಪ್ಪನವರು ಒಂದು ರೂಪಾಯಿ ಕೊಟ್ಟಿದ್ದು, ಅಂದು ಬೆಳಿಗ್ಗೆ ನಡೆದ ಪ್ರಕರಣವನ್ನು ರೇಣುಕ ಪ್ರಸಾದನ ಮಾನಸಿಕ ರಂಗದಿಂದ ಮಾಯುವಮಾಡಿ ಬಿಟ್ಟಿತ್ತು ಅಂಗಡಿಯ ಕೆಲಸದ ಬಗೆಗೆ ಸ್ವಲ್ಪ ಉತ್ಸಾಹ ಬಂದಿತ್ತು.

* * * *

ನಿತ್ಯ ಸಾಯಂಕಾಲ ಆರರಿಂದ ಏಳರ ವರೆಗೆ ಮಾಧು, ವಿಶ್ವನಾಥ ರೊಡನೆ ರೇಣುಕ ಸಾಯಂಕಾಲ ವಿಹಾರ ಹೊರಡುತ್ತಿದ್ದ. ಒಂದೊಂದು ದಿನ ಇವನೊಡನೆ ಪ್ರೇಮಚಂದ್ರರೂ ಬರುತ್ತಿದ್ದರು. ಮಾಧುವಿಗೆ ನಿತ್ಯ ಬರಲು ಸಾಧ್ಯವಾಗುತ್ತಿದ್ದಿಲ್ಲ ಪ್ರೇಮಚಂದ್ರರೇನಾದರೂ ಬಂದರೆ ವಿಶ್ವನಾಥನೊಡನೆ ಹೆಚ್ಚು ಮಾತು ಬೆಳೆಸಲು ಯತ್ನಿಸುತ್ತಿದ್ದರು. ಇತ್ತೀಚೆಗೆ ಅವನ ಚಲನವಲನದ ಕಡೆಗೂ ಅವನ ನಡತೆಯ ಕಡೆಗೂ ಅವರು ತುಂಬ ಗಮನಹಾಕಿದ್ದರು ಆಗಾಗ ಬಸವಂತರಾಯರ ಮನೆಗೆ ಯಾವುದಾದರೂ ಕುಂಟು ನೆವ ಮಾಡಿಕೊಂಡು ಬಂದು, ಮಾತ ನಾಡಿಸಲು ಯತ್ನಿಸುತ್ತಿದ್ದರು ಮಂಗಳವಾರ ಸಂತೆಯಾದ್ದರಿಂದ ಬೆಳಗಿನ ತರಗತಿಗಳು ನಡೆಯುತ್ತಿದ್ದವು ಊಟವಾದ ಕ್ಷಣ ಅಲ್ಲಿಗೆ ಒಂದು ಗಳಿಗೆ ಹೋಗಿ, ಬಸವಂತರಾಯರೊಡನೆ ಮಾತುಕತೆಯಾಡಿ ಹೋಗುತ್ತಿದ್ದರು ಆದರೆ ಪ್ರತಿ ಮಂಗಳವಾರ ಬಂದಾಗಲೆಲ್ಲಾ, ಮಧ್ಯಾಹ್ನ ವಿಶ್ವನಾಥ ಎಲ್ಲಿಗೋ ಹೊರಟು ಹೋಗುತ್ತಿದ್ದ. ಅಷ್ಟೇ ಆದಿತ್ಯವಾರವೇನಾದರೂ ಬಂದರೆ ಕೈಗೆ ಸಿಕ್ಕುತ್ತಲಿದ್ದ ಈ ವಿಚಾರವನ್ನು ಸೂಕ್ಷ್ಮವಾಗಿ ರೇಣುಕ ಪ್ರಸಾದನೆದುರಿಗೂ ಹೇಳಿದ್ದರು. ಅವನು 'ಒಂದು ದಿನ ಹಿಂಬಾಲಿಸೋಣ' ಎಂದಿದ್ದ

ಆ ಮಂಗಳವಾರ ವಿಶ್ವನಾಥ ಊಟಮಾಡಿಕೊಂಡು ತಾಂಬೂಲ ಜಗಿಯುತ್ತ ಹೊರಬಿದ್ದ. ಬೆಣ್ಣೆಪೇಟೆಯಲ್ಲಿ ಬಂದು, ಬೆಣ್ಣೆ ತೆಗೆದು

ಕೊಳ್ಳುವವನಂತೆ ಸುತ್ತಾಡಿದ. ಆದರೆ ಅವನಿಗೆ ಬೆಣ್ಣೆ ಬೇಕಾಗಿರಲಿಲ್ಲ. ಬೆಣ್ಣೆಕೊಳ್ಳಲು ಬಂದಿದ್ದ ರೂಪವತಿ ಸದ್ಗೃಹಿಣಿಯರ ಮುಖಾವಲೋಕನ ವನ್ನು ಮಾಡುತ್ತಿದ್ದ. ಅವರ ಬಾಹ್ಯರೂಪವನ್ನು ಒಂದು ಚಿಕ್ಕ ವಸ್ತು ವನ್ನಾಗಿ ಮಾಡಿಕೊಂಡು ದೇಹದಲ್ಲಿರಿಸುವೆ—ಎಂಬಂತೆ ಕಣ್ಣಿಟ್ಟು ನೋಡು ತ್ತಿದ್ದ. ಇವರಿಬ್ಬರೂ ಅವನನ್ನು ಹಿಂಬಾಲಿಸಿದರು. ಇದರಲ್ಲಿ ಯಾವುದೋ ಸ್ವಾರಸ್ಯವಿದೆಯೆಂದುಕೊಂಡರು. ಅವರ ಆವಿಷ್ಕಾರಕ್ಕೆ ಈ ಒಂದು ಘಟನೆ ಪುಷ್ಟಿಕೊಟ್ಟಂತಾಯಿತು. ಪುನಃ ಅವರು ಅವನನ್ನೇ ಹಿಂಬಾಲಿ ಸಿದರು. ಆ ವ್ಯಕ್ತಿ ಈಗ ಡೊಂಬರಾಟ ನೋಡಿಕೊಂಡು ಸಂತೆಗೆ ಬಂದಿದ್ದ. ಸಂತೆಯಲ್ಲಿಯೂ ಅದೇ ಕೆಲಸ. ಹೆಂಗಸರೆಲ್ಲಿರುವರೆಂದು ಅವನು ಪಿಟಿಪುರುಷನಂತೆ ಹುಡುಕುತ್ತಿದ್ದ. ಅವನ ಕಣ್ಣಿಗೆ ಬೀಳುವವ ರೆಲ್ಲ ನವನಾಗರಿಕತೆಯ ಥಳುಕಿನ ಉಡುಪನ್ನು ಧರಿಸಿದವರು. ಹಳ್ಳಿಯ ಮತ್ತು ಮುಪ್ಪಿನ ಕಡೆಯ ಹೆಂಗಸರು ಪಕ್ಕದಲ್ಲಿ ಹಾಯ್ದು ಹೋದರೂ ಅವನಿಗೆ ದೃಗ್ಗೋಚರವಾಗುತ್ತಿದ್ದಿಲ್ಲ. ಹೀಗೆ ಅವನು ನೂರಾರು ಐದಾರು ಬಾರಿ ಸುತ್ತಿ ಮೆಲ್ಲನೆ ಸ್ಟೇಷನ್ ಕಡೆ ಕಾಲುಕಿತ್ತ.

ಪ್ರೇಮಚಂದ್ರರು ಸ್ಟೇಷನ್ ಕಡೆಗೆ ಅವನು ಹೋಗುತ್ತಿರುವುದನ್ನು ನೋಡಿ "ಪ್ರಸಾದ, ನಾವಿನ್ನು ಹೋಗೋಣ. ನಮ್ಮಗೇಕೆ ಅಷ್ಟು ದೂರ ಯಾಕೆ ಹಿಂಬಾಲಿಸಬೇಕು''

ಅವರು ಮುಂದೆ ಯೋಚಿಸದಾದರು. ಈ ದಿನ ಹಿಂಬಾಲಿಸಿದುದ ರಿಂದ ಅವನ ಬಗ್ಗೆ ಕೆಲ ವಿಚಾರಗಳು ತಿಳಿದಿದ್ದವು. ಹಾಗೆಯೇ ಅಲ್ಲಿಯೇ ಕುಳಿತುಕೊಂಡರೆ ಪ್ರಯೋಜನವಿಲ್ಲವೆಂದರಿತು, ಅವರು ಮನೆಗೆ ಹಿಂದಿ ರುಗಬೇಕಾಯಿತು. ರೇಣುಕ ಪ್ರಸಾದನೂ ಸಹ ಅಂಗಡಿಗೆ ಹಿಂದಿರುಗಿದ.

ಕೊಂಚ ಹೊತ್ತಾದನಂತರ ವಿಶ್ವನಾಥ ಪೇಟೆಯಲ್ಲಿ ಹಾಯ್ದು ಮನೆಗೆ ಬರುತ್ತಿದ್ದಾಗ ದಾರಿಯಲ್ಲಿ ಪ್ರೇಮಚಂದ್ರರು ಕಂಡರು.

"ಎಲ್ಲಿಗೆ ಹೋಗಿದ್ದೆ ವಿಶ್ವನಾಥ !"

"ಇಲ್ಲಿಯೇ ದಾವಣಗೆರೆಗೆ ಹೋಗಿದ್ದೆ. ಅಂಗಡಿಗೆ ಮಾಲು ಹಾಕಿಸ ಬೇಕಾಗಿತ್ತು...." ಎಂದು ಸುಳ್ಳು ಹೊಡೆದ. ಅದಿಷ್ಟು ಸುಳ್ಳು ಹೇಳಿದ್ದ ಕ್ಕೇನೇ ಅವನು ಬೆವತು ಹೋಗಿದ್ದ. ಅವರಿನ್ನೂ ಏನೋ ಹೇಳಬೇಕೆಂದಿ ದ್ದರು. ಆದರೆ ಅಷ್ಟರಲ್ಲೇ ಆಗಲೇ ಅವನು ಎಲ್ಲಿಗೋ ಕಾಲು ಕಿತ್ತಿದ್ದ.

ಪ್ರೇಮಚಂದ್ರರು ಅಂದು ಹಿಂಬಾಲಿಸಿ ಅವನು ಊರಿನಲ್ಲಿದ್ದುದನ್ನು ಕಣ್ಣಾರೆ ಕಂಡಿದ್ದರು. ಬೆಣ್ಣೆ ಪೇಟೆಯಲ್ಲಿಯೂ ಮತ್ತು ಸಂತೆಯಲ್ಲಿಯೂ ಹಾಗೆ ಪತಂಗದಂತೆ ಅವನು ಸುತ್ತಿದ್ದು ಅವರಿಗೆ ಅರ್ಥವಾಗದಿರಲಿಲ್ಲ. ಇಂಥ ವರು ಬೇಗ ಲಗ್ನಮಾಡಿಕೊಂಡು ಇಂದ್ರಿಯ ತೃಪ್ತಿಗೊಳಗಾಗಬಹುದು. ಹೀಗೆ ಪೇಟೆ ಪೇಟೆ, ಸಂತೆಸಂತೆಗಳನ್ನು ಏಕೆ ಸುತ್ತುತ್ತಾನೆಯೋ? ಈ ರೀತಿ ಹೆಂಗಸರ—ಅದರಲ್ಲೂ ಹುಡುಗಿಯರ—ಮುಖಾವಲೋಕನದಲ್ಲಿ ಯಾವ ತೃಪ್ತಿ ಇವನಿಗೆ ಸಿಕ್ಕುತ್ತದೆಯೊ? ..ಅಲ್ಲದೆ ಅವರನ್ನು ಈ ರೀತಿ ನೋಡುವಿಕೆಗೂ ಇಷ್ಟು ಕೃಶನಾಗಿರುವುದಕ್ಕೂ ಯಾವ ಸಂಬಂಧವಿಲ್ಲವೆಂದುಕೊಂಡರು.

ವಿಶ್ವನಾಥ ಮನೆ ಸೇರುತ್ತಲೇ ಅವರಜ್ಜಿ ಬಸವಣ್ಣಬಾಯಿ ಕಾಫಿ ಕೊಟ್ಟರು. ಬಸವಂತರಾಯರು ಎಂದೂ ನಾಲ್ಕು ಘಂಟೆಗೆ ಮನೆಗೆ ಬರದೇ ಇದ್ದವರು ಇಂದು ಬಂದಿದ್ದರು. ಅವನು ಕಾಫಿ ಕುಡಿದಾದ ಮೇಲೆ ಅವರಜ್ಜಿ ಪಕ್ಕದಲ್ಲಿ ಮೊಮ್ಮಗನನ್ನು ಕೂರಿಸಿಕೊಂಡು ಬೆನ್ನನ್ನು ಸೇವರಿಸುತ್ತಾ "ನಮ್ಮ ವಿಶ್ವನಾಥನಿಗೆ ಪ್ರತಿ ದಿನ ಒಂದು ಪಾವು ಹಾಲು ಕೊಡು, ಪಾರ್ವತಿ" ಎಂದರು.

"ಆಗಲಿ ಅತ್ತೆ, ಯಾರು ಬೇಡಾಂದರು "

"ವಿಶ್ವಾ, ಆ ಹಾಲಿನ ಜೊತೆಗೆ ನಿತ್ಯ 'ಓವಲ್ಟಿನ್' ಹಾಕಿಕೊಂಡು ಕುಡಿ. ಹ್ಯಾಗೆ ದಿನಕ್ಕೂ ಏರುತ್ತೀಯೆಂತಾದರೂ ನೋಡು."

"ಇನ್ನೂ ಹ್ಯಾಗೆ ಇರಬೇಕವ್ವ. ನನಗೆ ಬೊಜ್ಜು ಬೇಡ" ಎಂದ ವಿಶ್ವನಾಥ ಪರಿದ ಧ್ವನಿಯಲ್ಲಿ.

"ಬೊಜ್ಜಲ್ಲ ಕೊಂಚ ಕನ್ನಡಿ ಹಿಡಿದುಕೊಂಡು ಎಂದಾದರೂ ನಿನ್ನ ಮುಖ ನೋಡಿಕೊಂಡಿದೀಯಾ? ನಿನ್ನ ನೋಡಿದರೆ ಮನಸ್ಸಿಗೆ ಬಹಳ ನೋವಾಗುತ್ತದೆ" ಎಂದರು ಪಾರ್ವತಿಬಾಯಿ.

"ಮನಸ್ಸಿಗೆ ನೋವು ಮಾಡಬೇಕೆಂತಲೆ ಹೀಗೆ ನೀವೆಲ್ಲರೂ ಮಾತಾಡುತ್ತಾ ಇರುವುದು. ಅಷ್ಟು ನನಗೆ ಪರಿವೆಯಿಲ್ಲೆಂತ ತಿಳಿದಿದ್ದೀರಿ. ನಾನು ಅನ್ನ ಇಲ್ಲಿ ಇಡುವುದಿಲ್ಲ" ಎಂದು ಕಿವಿಯ ಕಡೆಗೆ ಕೈಮಾಡುತ್ತ ನುಡಿದ.

ಈಗ ಕೆಲವು ದಿನಗಳಿಂದ ವಿಶ್ವನಾಥ ಮಾತುಮಾತಿಗೆ ಮುನಿಸು ಮಾಡಿಕೊಳ್ಳುತ್ತಿದ್ದ. ಮುನಿಸಿಳಿದ ಮೇಲೆ ತನ್ನ ತಪ್ಪು ತಾನಾಗಿಯೇ

ತಿಳಿದು, ತಾನು ಹಾಗೆ ಶೀಘ್ರಕೋಪಿಯಾಗಬಾರದಾಗಿತ್ತೆಂದು ಒದ್ದಾಡುತ್ತಿದ್ದ. ಆದರೆ ಯಥಾಪ್ರಕಾರ ಅವನು ಇನ್ನೊಮ್ಮೆ ಹಾಗೆಯೇ ವರ್ತಿಸುವುದನ್ನು ಬಿಡುತ್ತಿದ್ದಿಲ್ಲ.

"ಇರಲಿ ಬಿಡೆ ಪಾರು, ಇವತ್ತೇ ಎಲ್ಲಾ ಆದಿ ಬಿಡಬೇಡಿ. ನಾವು ಯಾತಕ್ಕೆ ಕೂತುಕೊಂಡಿರೋದು. ಏನೋ ಪ್ರಸ್ತಾಪ ಮಾಡಬೇಕಾಗಿತ್ತು" ಎಂದರು ಬಸವ್ವಬಾಯಿ.

"ಯಾಕಾಗಿ ಕರೆದಿದ್ರಿ, ಅಜ್ಜಿ"

"ನಿನಗೀಗ ಎಷ್ಟು ವರ್ಷಪ್ಪ, ಮಗು?"

"ಏಕೆ? ಇಪ್ಪತ್ಮೂರು ದಾಟಿ ಇಪ್ಪತ್ನಾಲ್ಕಾಯಿತು" ಎಂದ.

"ನೋಡು, ನಿನಗೀಗ ಸರಿಯಾದ ಲಗ್ನದ ವಯಸ್ಸು"

ಲಗ್ನದ ವಯಸ್ಸು! 'ಲಗ್ನ' ಎಂದ ಕೂಡಲೆ ಅವನು ಆಕಾಶದಿಂದ ಕಳಚಿ ಬಿದ್ದ ಹಾಗಾಯಿತು.

"ಅಜ್ಜಿ, ನನಗೆ ಲಗ್ನ ಬೇಡ ಅಜ್ಜಿ. ನನಗೀಗ ಅಂಥ ಯಾವ ವಯಸ್ಸು!"

"ನಿನಗೆ ಕಡಿಮೆ ವಯಸ್ಸೆಂತ ಆಗಿದೆಯಪ್ಪ" ಎಂದರು ಪಾರ್ವತಿ ಬಾಯಿ.

"ಹೌದು. ನಾವ್ಯಾಗಲೂ ಹಾಗೆಯೇ....ಹೌದು. ಲಗ್ನ ಬೇಡಾಂದರೆ ಯಾಕೆ ಅನೆಲ್ಲ"

"ಅಂತಾದರೆ ಯಾವಾಗ ಮಾಡಿಕೊಳ್ಳಬೇಕಂತ ಮಾಡಿದ್ದೀಯೆ. ನನಗೋ ವಯಸ್ಸಾಯಿತು. ಆಗೋ ಈಗೋ ಎನ್ನುವಂತಿದ್ದೇನೆ, ಕಣ್ಮುಂದೆ ಮೊಮ್ಮಗನ ಕಲ್ಯಾಣ ನೋಡಿ ಸುಡುಗಾಡಿಗೆ ಹೋಗುತ್ತೇನೆ, ಮಹಾರಾಯ"

"ಈಗಂತೂ ಬೇಡಜ್ಜಿ, ಅಜ್ಜಿ"

"ಹಾಗಾದರೆ ಯಾವಾಗ ಮಾಡಿಕೊಳ್ಳಬೇಕೂಂತ ನಿರ್ಧರಿಸಿರುವೆ"

"ನನಗೆ ಎಂದೂ ಬೇಡನೇ ಬೇಡ. ನನಗೆ ಸುಮ್ಮನೆ ಯಾಕೆ ಹುಚ್ಚು ಹಿಡಿಸುತ್ತೀರಿ." ಎನ್ನುತ್ತ ಅಲ್ಲಿಂದ ವಿಶ್ವನಾಥ ಹೊರಟುಹೋದ. ಇನ್ನು ತನಿಸಿರದು ವರ್ಷದ ನಂತರ ಆಗುವೆನೆಂದಿದ್ದರೂ ಎಲ್ಲರಿಗೂ ಹಿಡಿಸಲಾರದ ಸಮಾಧಾನವಾಗುತ್ತಿತ್ತು. ಆದರೆ ಲಗ್ನದ ಮಾತನ್ನೇ

ಸೊಪ್ಪೆರವದಿಯಂತೆ ಅವನು ಹಾರಿಸಿ ಬಿಟ್ಟಿದ್ದ.

ಬಸವಂತರಾಯರು ಮತ್ತೆ ಏನು ಮಾತನಾಡುವುದಕ್ಕೂ ಸಮರ್ಥರಾಗಲಿಲ್ಲ. ಮಗ ಮಾತಿಗೆ ಮಾತು ಕೊಡುತ್ತಿದ್ದ. ಒಂದು ಚಿಕ್ಕ ಕಾರಣಕ್ಕಾಗಿಯಾದರೂ ಸರಿಯೆ, ಮನೆಯಲ್ಲಿ ಜಗಳ ಕಾಯುತ್ತಿದ್ದ. ಇದ್ದೊಬ್ಬ ಮಗನಿಗೆ ತುಂಬ ಅನುಕೂಲತೆಗಳಿದ್ದರೂ ವಿಜೃಂಭಣೆಯಿಂದ ಲಗ್ನ ಮಾಡಿಸುವ ಯೋಗ ಬರಲಿಲ್ಲವಲ್ಲ ಎಂದು ಮುದುಕರ ಮನಸ್ಸಿನಲ್ಲಿ ಕೊರಗು ಪ್ರಾರಂಭವಾಯಿತು.

ಆ ದಿನ ಪ್ರೇಮಚಂದ್ರನೊಡಗೂಡಿ ನದಿಯತ್ತ ಗಾಳಿ ಸೇವನೆಗೆ ನಾಲ್ವರೂ ಹೊರಟಿದ್ದಾಗ ವಿಶ್ವನಾಥನ ಲಗ್ನದ ಬಗ್ಗೆ ಗೆಳೆಯರು ಪ್ರಸ್ತಾಪ ಮಾಡಿದರು. ಮತ್ತೂ ಅವನು ತನ್ನ ವಿಚಾರ ಸರಣಿಯನ್ನೇ ಹೇಳಿದ. ಅವರಿಗದೊಂದೂ ಅರ್ಥವಾಗಲಿಲ್ಲ. ಪೇಟೆಯಲ್ಲಿ ಹೆಂಗಸರನ್ನು ತಿನ್ನುವ ಹಾಗೆ ನೋಡಲಿಕ್ಕೆ ಬರುತ್ತಾನೆ. ಲಗ್ನ ಮಾಡಿಕೋ ಎಂದರೆ ಹೀಗೇಕೆ ಮಾಡುವನೋ ದೇವರೊಬ್ಬ ಬಲ್ಲ. ರೇಣುಕಪ್ರಸಾದನು ಕೊಂಚ ಒತ್ತಾಯದಿಂದಲೇ ಲಗ್ನಕ್ಕೆ ಒಪ್ಪುವಂತೆ ಹೇಳಿದ. ಯಾವುದಕ್ಕೂ ಅವನು 'ಹೂ' ಎನ್ನಲಿಲ್ಲ. ಆ ಹೊತ್ತಿಗಾಗಲೇ ಅವರು ನದಿಬಳಿಗೆ ಬಂದು ಕುಳಿತರು.

"ಇವತ್ತು ಯಾವುದೋ ಒಂದು ಕಡಿಮೆ ಇದೆ ಈ ಸ್ಥಳದಲ್ಲಿ. ಏನು ಹೇಳು ಮಾಧು?" ಎಂದ ರೇಣುಕ.

"ನಮ್ಮ ನಾಬಿ ಇಲ್ಲವಲ್ಲ ಹೌದೆ?"

"ಹೂ"

"ಯಾವ ನಾಬಿ, ಫಸೀನಾ?" ಎಂದರು ಪ್ರೇಮಚಂದ್ರ.

"ಯಾಕೋ ಇವೊತ್ತು ಬಂದಿಲ್ಲವಲ್ಲ."

"ಇವತ್ತು ಬರೋದಿಲ್ಲ...ನಾಳೇನೂ ಬರೋದಿಲ್ಲ. ಅವನಿಗೆ ಸ್ವರ್ಗಕ್ಕೆ ವರ್ಗವಾಗಿದೆ" ಎಂದ ರೇಣುಕ.

"ಯಾಕೆ ಮಾಧು, ಹೇಳಯ್ಯ ನಮ್ಮ ನಾಬಿಗೆ ಏನಾಯಿತು?"

"ಪಾಪ! ನಿನ್ನೆ ಸತ್ತು ಬಿಟ್ಟನಲ್ಲ ಸಾರ್"

"ಚು—ಚು—ಚೂ ಏನಾಗಿತ್ತು? ಮೊನ್ನೆ ಇಲ್ಲಿಯೇ ಮೀನು ಹಿಡಿಯುತ್ತಿದ್ದ."

"ಹೊನ್ನೆ ದಿವಸ ಬಂದು ಕೂತು ಗಾಣ ಹಾಕುತ್ತಲೇ ಒಂದು ಮೀನು ಸಿಕ್ಕಿತಂತೆ. ಅದನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ಕೂತಿದ್ದ. ಆಗಲೆ ಇನ್ನೊಂದು ಮೀನು ಬಿತ್ತಂತೆ. ಆಗ ಕೈಯಲ್ಲಿನ ಮೀನು ತೆಗೆದು ಬಾಯಲ್ಲಿ ಕಚ್ಚಿಕೊಂಡು, ಬಿದ್ದ ಮೀನು ತೆಗೆಯುತ್ತಿದ್ದಾಗ ಬಾಯಲ್ಲಿನ ಮೀನು ಒಳಗೆ ಹೋಗಿಬಿಡಬೇಕೇ? ಸ್ವಲ್ಪ ಕೇಳಿ. ಆ ಮೇಲೆ ಹೊಟ್ಟೆ ನೋವು ಕೆರಳಿ ಅನತಿ ಸಮಯದಲ್ಲೇ ಸತ್ತನಂತೆ"

"ಪಾಪ! ಬಹಳ ಬಡವರು. ಪ್ರೈಮರಿ ಸ್ಕೂಲಿನಲ್ಲಿ ಮೇಷ್ಟರಾಗಿದ್ದ."

"ಸಂಬಳ ಸಾಕಾಗೋಲಿಲ್ಲಾಂತ ಮೀನು ಹಿಡಿಯುತ್ತಿದ್ದನಂತೆ. ಹೌದೇ, ರೇಣುಕ?" ಎಂದ ವಿಶ್ವನಾಥ ಏನೋ ತಡವರಿಸುವವನಂತೆ.

"ಹೌದಂತೆ"

ಅಷ್ಟುಹೊತ್ತಿಗೆ ದೀಪ ಹತ್ತಿದ್ದನ್ನು ನೋಡಿ ರೇಣುಕಪ್ರಸಾದ ಹೇಳಿದ:

"ದೀಪ ಹತ್ತಿತು ಹೊರಡೋಣವೆ ಇನ್ನು?"

ಅವನು ಮನೆಯನ್ನು ಸೇರಿದಾಗ ರಾತ್ರಿ ಏಳು ಘಂಟೆಯಾಗಿತ್ತು. ಮನೆಯವರೆಲ್ಲರೂ ಒಂದಿಗೇ ಜಗುಲಿಮೇಲೆ ಕುಳಿತುಕೊಂಡಿದ್ದರು. ಗುರುಮೂರ್ತಿ ಯಾವದೋ ಪತ್ರವನ್ನು ಓದುತ್ತಿದ್ದ.

"ಅಣ್ಣಾ, ಪತ್ರ ಯಾವುದು?"

"ಯಾರದ್ದರಾಗಲಿ, ನಿನಗೇಕೆ? ಓದಿಕೋ ಹೋಗು" ಎಂದ ಗುರುಮೂರ್ತಿ.

"ಕೊಡು ಕೊಡು ಅವನೂ ನೋಡಲಿ. ಎಷ್ಟು ದಿನವೆಂತ ಮುಚ್ಚಿಡಲಿಕ್ಕೆ ಸಾಧ್ಯ," ಎಂದರು ಶಿವಣ್ಣಯ್ಯ.

ಗುರುಮೂರ್ತಿ ಪತ್ರಕೊಟ್ಟ. ಅದಕ್ಕೆ ಮಾಲಿನಿಯ ಊರಿನ ಮುದ್ರೆಯಿತ್ತು. ಒಳಗಡೆ ತೆಗೆದು ನೋಡಿದ. ಅವಳ ಪತ್ರವಾಗಿತ್ತು. ಅಕ್ಷರವೂ ಅವಳದೇ!

ಹೊಸಳ್ಳಿ

ತಾ... ........ .. .

ಶ್ರೀ. ತಂದೆಯವರ ಪಾದಪದ್ಮಂಗಳಿಗೆ ನಿಮ್ಮ ಸುಪುತ್ರಿ ಚಿ. ಮಾಲಿ

ನಿಯ ತ್ರಿಕಾಲ ಅನಂತ ಶಿರಸಾಷ್ಟಾಂಗ ನಮಸ್ಕಾರಗಳು. ನಿಮ್ಮ ಪತ್ರ ತಲುಪಿ ನಿಮ್ಮೆಲ್ಲರ ಕ್ಷೇಮ ಸಮಾಚಾರ ತಿಳಿಯಿತು. ಇಲ್ಲಿ ಎಲ್ಲರೂ ಕ್ಷೇಮವಾಗಿದ್ದಾರೆ.

—ನಾನು ಪಂಚಮಿಯ ಹಬ್ಬಕ್ಕೆ ಬರುವುದಕ್ಕೆ ಆಗುವುದಿಲ್ಲ, ನೀವು ಕರೆಯಲಿಕ್ಕೆ ಬರಬಾರದು. ಇನ್ನು ನಾನು ಕೇಳಿದ ವಿಷಯಕ್ಕೆ ನೀವು ಕೊಡುವಿರಾದರೆ, ಪಂಚಮಿಯ ಹಬ್ಬಕ್ಕೆ ಕರೆಯಲಿಕ್ಕೆ ಬನ್ನಿ. ನಾನು ಗಂಡು ಆಗಿದ್ದರೆ ನೀವು ದುಡಿದಂಥ ಆಸ್ತಿಯಲ್ಲಿ ಭಾಗ ಆಗುತ್ತಿರ ಲಿಲ್ಲವೆ? ಆದರೆ ನೀವು ಇದನ್ನು ತಿಳಿದುಕೊಳ್ಳಲಿಲ್ಲ.... ನನ್ನ ದೈವಕ್ಕೆ ಯಾರೇನು ಮಾಡುವುದಿದೆ? ನನ್ನ ಪೂರ್ವಜನ್ಮದ ಕರ್ಮದ ಅನುಸಾರ ವಾಗಿ ಮಾಡುತ್ತೀರಿ. ನಮ್ಮ ಸಂಬಂಧ ಸಾಗಬೇಕಾದರೆ ನಾನು ಕೇಳಿದ ಮೂರು ವಿಷಯವನ್ನು ಕೊಟ್ಟರೆ ಆಗುತ್ತದೆ. ಇಲ್ಲದಿದ್ದರೆ ತಿಲಮಾತ್ರವೂ ಸಾಧ್ಯವಾಗುವುದಿಲ್ಲ. ಆದುದರಿಂದ ನನ್ನನ್ನು ಪಂಚಮಿಯ ಹಬ್ಬಕ್ಕೆ ಕರೆಯಲಿಕ್ಕೆ ಬಂದರೆ, ನಾನು ಕೇಳಿದ ವಿಷಯ ನಿಮ್ಮ ಕೈಯಿಂದಾದರೆ ಬರಬೇಕು ಇಲ್ಲವಾದರೆ, ನೀವು ಬಂದರೂ ಬರುವುದಕ್ಕೆ ಆಗುವುದಿಲ್ಲ.

ಚಿ ಜಗನ್ನಾಥನಿಗೆ ಕಾಯಿಲೆಯಾಗಿದೆಯೆಂದು ತಿಳಿಯಿತು. ಈಗ ಚೆನ್ನಾಗಿದ್ದಾನೆಯೇ ತಿಳಿಸಿ.

ಗಂಡನ ಆಜ್ಞೆಯಂತೆ ಇರುವುದು ನನ್ನ ಧರ್ಮವಾಗಿರುತ್ತದೆ. ಅಕ ಸ್ಮಾತ್ ನಿಮ್ಮ ಸುದ್ದಿಯನ್ನು ತೆಗೆದರೆ ಬಹಳ ಕೋಪಗೊಳ್ಳುತ್ತಾರೆ. ತಿಳಿ ದವರಿಗೆ ಹೆಚ್ಚಿಗೆ ಬರೆಯಲು ಶಕ್ತಳಲ್ಲ.

"ಅಕಸ್ಮಾತ್ ನಿಮ್ಮ ಸುದ್ದಿಯನ್ನು ತೆಗೆದರೆ ಬಹಳ ಕೋಪಗೊಳ್ಳು ತ್ತಾರೆ" ಎಂಬ ವಾಕ್ಯ ರೇಣುಕಪ್ರಸಾದನ ತಲೆಯಲ್ಲಿ ಗರ್ರನೆ ತಿರುಗಿತು.

...... ಇನ್ನು ಮೂಲಿನಿ ಬರುವ ಹಾಗಿಲ್ಲ. ಅವೆರಡು ಮುರುಕು ಮನೆಗಳಲ್ಲಿ ಜೀವಾಂತ್ಯದವರೆವಿಗೂ ಇದ್ದು ಸಾಯಬೇಕು. ಆ ಮನೆ ಯಲ್ಲಿರುವುದೂ ಒಂದೇ, ಜೋಳದ ಹಗೆಯಲ್ಲಿರುವುದು ಒಂದೇ.

ಅವನು ಲಗ್ನವಾದನಂತರ ತಂಗಿಯನ್ನು ಕಳುಹಿಸುವ ನೆಪಮಾಡಿ ಕೊಂಡು—ಅದೂ ಪ್ರಥಮಬಾರಿ ಭಾವನ ಊರಿಗೆ ಹೋಗಿದ್ದ. ಆ ಊರು ಸೇರಲು ಒಂದರ ಪ್ರಯಾಣವಾಗಲಿಲ್ಲ: ರೈಲು, ಬಸ್ಸು, ಕಾಲು ನಡಿಗೆಯಿಂದ ಹೋಗಿ ಸೇರಬೇಕಾಯಿತು. ಆದರಲ್ಲೂ ಕಾಲುನಡಿಗೆ

ಹೋಗಬೇಕಾದರೆ ನದಿಯೊಂದನ್ನು ಬೇರೆ ದಾಟಬೇಕಾಗಿತ್ತು. ಇಂತಹ ದೂರದ ಊರಿಗೆ ಕಣ್ಣು ಮುಚ್ಚಿಕೊಂಡು ಯಾಕಾದರೂ ತಂಗಿಯನ್ನು ಕೊಟ್ಟರೋ ಎನಿಸಿತ್ತು ಅವನಿಗೆ. ಅಂತೂ ಹೊರಟ ದಿನವೇ ಅವನು ಹೊನಳ್ಳಿಯನ್ನು ಸೇರಿ ಅದಕ್ಕಾಗಿ ಸಂತೋಷಪಡಬೇಕಾಯಿತು. ಪ್ರಥಮಬಾರಿ ಹೋಗಿದ್ದರಿಂದ ಒಂದು ವಾರವಾದರೂ ಅಲ್ಲಿ ಇರಬೇಕೆಂದು ಎಣಿಸಿದ್ದ. ಹೋದ ದಿನವೇ ಉಮಾಪತಿಯು ತಮ್ಮ ಹೇಮಗಿರಿ ಹೇಳಿದ

"ನಾನು ನಾಳೆ ದಿವಸ ಅಕ್ಕನನ್ನು ಕರೆದುಕೊಂಡು ಮುಧೇನೂರಿಗೆ ಹೋಗುತ್ತೇನೆ"

ತಾನು ಬಂದ ದಿವಸವೇ ಮುಧೇನೂರಿಗೆ ಹೋಗಬೇಕೇ? ತಾನು ಏಕಾದರೂ ಇಲ್ಲಿಗೆ ಇಷ್ಟು ಕಷ್ಟಪಟ್ಟುಕೊಂಡು ಬಂದೆನೋ ಎನಿಸಿತು. ಮಾರನೆಯ ದಿನ ಉಮಾಪತಿಯೂ ಹೇಳಿದ "ನಾನು ನಾಳೆ ದಿನ ಹಳ್ಳಿಗೆ ಒಂದು ಕೆಲಸದ ಮೇಲೆ ಹೋಗಬೇಕಾಗಿದೆ. ನೀನು ಇನ್ನೊಂದೆರಡು ದಿನಗಳಿದ್ದು ಹೋಗು."

ಇವರಿಬ್ಬರಿಲ್ಲದ ಮೇಲೆ ತಾನಾದರೂ ಹೇಗೆ ಇದ್ದಾನು? ತನಗೂ ತುರುತು ಕೆಲಸವಿದೆಯೆಂದು ಹೇಳಿ ಅವನು ಹೊರಟುಬಿಟ್ಟಿದ್ದ. ಬರುವಾಗ ತಂಗಿಗೆ ಹೇಳಿದ್ದ: "ತಾಯಿ, ಪಂಚಮಿಯ ಹಬ್ಬಕ್ಕೆ ಅಣ್ಣನನ್ನು ಕರೆಯಲಿಕ್ಕೆ ಕಳಿಸುವೆ ನಾನಿನ್ನು ಹೊ....ಹೊರಡುತ್ತೇನೆ ತಂಗಿ"
"ಹೂಂ, ಆಗಲಿ" ಎಂದಿದ್ದಳು ಆಕೆ.

ತಂಗಿಯನ್ನು ಬಿಟ್ಟು ಬರಲಾರದೆ ಬಹಳ ವೇದನೆಯನ್ನು ಅವನು ಅನುಭವಿಸಿದ್ದ. ಏಕೋ ಏನೋ ಕಣ್ಣಾಲಿಗಳು ಕಳುವಳಯಿಂದ ಆಗ ಮುಚ್ಚಿಕೊಂಡಿದ್ದವು. ಇನ್ನೂ ಕಣ್ಣೀರು ಕಟ್ಟೆಯೊಡೆದು ಹೊರಗೆ ಬಂದಿರಲಿಲ್ಲ, ಕರವಸ್ತ್ರದಿಂದ ಪ್ರಯತ್ನಪೂರ್ವಕವಾಗಿ ಅದನ್ನು ಒರೆಸಿಕೊಂಡು ಹೊರಟ. ಜೊತೆಗೆ ಹೇಮಗಿರಿಯೂ ಕೂಡ ತನ್ನ ಅಕ್ಕನ ಜೊತೆಗೆ ಹೊರಟಿದ್ದ ಉಮಾಪತಿಯ ತಾಯಿ ಸಿದ್ಧಮ್ಮ ಅಗಸಬಾಗಿಲಿನವರೆಗೂ ಬಂದು,

"ಏನು ರೇಣುಕ, ನಿಮ್ಮಂದೆ ಲಗ್ನದಲ್ಲಿ ನಮ್ಮವರನ್ನು ಯಾರೋ ಕಂಡ ಹಾಗೆ ಕಂಡು, ಜಗಳ ಮಾಡಿದರಂತೆ. ನಮ್ಮೂರಿನಲ್ಲಿ ಕುರುಬರವನಿಗೆ

ಎಷ್ಟು ಮುಯ್ಯಿ ಮಾಡಿದಾರೆಂತ ಗೊತ್ತಿದ್ದರೆ ಹೌಹಾರಿ ಹೋಗುತ್ತಿದ್ದಿರಿ. ನಮ್ಮ ಯಜಮಾನರು ಇದ್ದಿದ್ದರೆ ಹೀಗೆಲ್ಲಾ ಯಾಕೆ ಆಗುತ್ತಿತ್ತು?"

"ಅತ್ತೆ, ಉಡುಗೊರೆ—ಮುಯ್ಯಿಯಲ್ಲಿಲ್ಲ ಪ್ರೇಮ ಎಂಬುವುದು. ನಿಜವಾದ ಪ್ರೇಮದಲ್ಲಿ ಬೀಗತನ ಇದೆ! ಲಗ್ನದಲ್ಲಿ ಹರಳಿನ ಉಂಗುರ ಕೊಡಲಿಕ್ಕೆ ಬಂದರೆ ತೆಗೆದುಕೊಳ್ಳಲಿಲ್ಲ. ನಾವಾದರೂ ಏನು ಮಾಡುವುದು?" ಎಂದು ತಲೆ ಬಗ್ಗಿಸಿಕೊಂಡು ಬಂದಿದ್ದ ದಾರಿಯಲ್ಲಿ ದಾಟಬೇಕಾಗಿದ್ದ ನದಿಯಲ್ಲಿ ಬೆಳಗ್ಗೆ ಅವರ ಮನೆಯಲ್ಲಿ ಊಟಮಾಡಿದ್ದ ಹೋಳಿಗೆ ಸೀಕರಣೆ ಓಕರಿಸಿ ಬಿಡಲೋ ಎನ್ನಿಸಿಬಿಟ್ಟಿತ್ತು ಅನಸಿಗೆ.

ವರ್ಷವೆಲ್ಲ ಕಷ್ಟಪಟ್ಟು ಓದಿ, ತಲೆ ಕೆಡಿಸಿಕೊಂಡು, ನಾಲ್ಕು ದಿನಗಳು ಎಂದೂ ಹೋಗದೆ ಇದ್ದ ನೆಂಟರ ಮನೆಗೆ ಹೋಗಿಬರೋಣವೆಂದರೆ—ಮನೆಯಲ್ಲಿಯೂ ಹೋಗಲು ಹೇಳಿದ್ದರು—ಅಲ್ಲಿಗೆ ಹೋದಾಗ ಮನಸ್ಸು ತುಷ್ಟಿಯಾಗದೆ ಕದಡಿದ ನೀರಿನಂತಾಗಿತ್ತು. ಆ ಚಿಕ್ಕ ಹಳ್ಳಿಯಲ್ಲಿ ಅಂತಹ ಮನೆಯಲ್ಲಿ, ತನ್ನ ತಂಗಿ ಆಮರಣಾಂತವಿರಬೇಕು. ಅದೊಂದು ಜೈಲು ಇದ್ದ ಹಾಗೆ. ಆ ಜೈಲಿನಿಂದ ಬಿಡುಗಡೆ ಮಾಡಿಸಿಕೊಂಡು ಬರಲು ಮೂರು ವಸ್ತುಗಳನ್ನು ಲಂಚ ಕೊಡಬೇಕು. ಕರೆದು ವಿವಾಹಮಾಡಿದ್ದಕ್ಕೆ ಉಮಾಪತಿ ಈ ರೀತಿಯಲ್ಲಿ ಕೃತಜ್ಞತೆ ತೋರಿಸಿದ. ಈ ರೀತಿ ಅವನು ಮಾಡುವನೆಂದು ಮೊದಲು ಗೊತ್ತಿತ್ತು. ಅದು ಅವನ ಮುಖಲಕ್ಷಣದಿಂದ ತಿಳಿದುಬರುತ್ತಿತ್ತು. ಆದರೆ ...ಆದರೆ, ಮನೆಯವರು ಕೇಳಲಿಲ್ಲ. ಗುರುಸಿದ್ಧಪ್ಪಯ್ಯ ಮಾವಂದಿರು ಏಕೆ ಬಿಟ್ಟರೆಂದು ಯೋಚಿಸಿದ್ದರೆ ತನ್ನಷ್ಟಕ್ಕೆ ತಾನೆ ಉತ್ತರ ತಿಳಿಯುತ್ತಿತ್ತು.

ಗುರುಸಿದ್ದಪ್ಪಯ್ಯನವರು ದಡ್ಡರಿದ್ದಿಲ್ಲ. ಅವರು ತುಂಬ ಸುಸಂಸ್ಕೃತರು. ಆಯುರ್ವೇದದಲ್ಲಿ ಸಾಕ್ಷಾತ್ ಧನ್ವಂತರಿಗಳೂ ಆಗಿದ್ದರು. ಅವರ ಮನೆಯಲ್ಲಿ ಎಲ್ಲರೂ ವಿದ್ಯಾವಂತರೇ. ಗುರುಸಿದ್ಧಪ್ಪಯ್ಯ ಬರಿಯ ಪಂಡಿತರಾಗಿದ್ದಿಲ್ಲ. ಆಯುರ್ವೇದ ಸುಲಭ ಚಿಕಿತ್ಸೆಗಳ ಒಂದು ಚಿಕ್ಕ ಕೈಗನ್ನಡಿಯನ್ನೂ ಬರೆದಿದ್ದರು, ಅದು ಎಲ್ಲ ಪಂಡಿತರಿಂದ ಮಾನ್ಯವಾಗಿದ್ದು, ಅದರಲ್ಲಿ ಸುಲಭ ಚಿಕಿತ್ಸೆಗಳನ್ನು ಬಹು ಮಾರ್ಮಿಕವಾಗಿ ತಿಳಿಸಿದ್ದರು. ಆ ಕೈಗನ್ನಡಿಗೆ ರಜತಪದಕವೂ ಸಹ ಲಭ್ಯವಾಗಿತ್ತು. ಅವರು ತ್ರಿಕಾಲ ಪೂಜೆ, ಪಾರಾಯಣವಿಲ್ಲದೆ ಊಟಮಾಡುತ್ತಿದ್ದಿಲ್ಲ. ಸದಾಚಾರದ ನಿಲಯ

ವೆಂದರೆ ಅವರ ಅಂದವಾದ ಗೃಹ. ಅವರು ಪುರಾಣಪ್ರವಚನ ಕಾರ್ಯಗಳನ್ನು ಮಾಡುತ್ತಿದ್ದರು. ಇತ್ತೀಚೆಗೆ ಜಗದ್ಗುರುಗಳೊಬ್ಬರಿಂದ ಅವರಿಗೆ 'ಆಯುರ್ವೇದ ವಿಶಾರದ ಎಂಬ' ಬಿರುದೂ ಬಂದಿತ್ತು. ಅಂತಹ ವ್ಯಕ್ತಿಗಳು ಉಮಾಪತಿಯನ್ನು ಅದೇಕೆ ಬಿಟ್ಟರು? ನಿಶ್ಚಯ ಕಾರ್ಯವಾದ ಮೇಲೆ ಏನಾದರೂ ಅವರ ಬಗ್ಗೆ ಅವಿಚಾರ ತಿಳಿದರೆ ಬಿಡಬಹುದೆಂಬ ನಿಯಮವನ್ನು ತಿಳಿದುಕೊಂಡು ಬಿಟ್ಟಿದ್ದಾರೆ. ಹಾಗೆ ಬಿಟ್ಟಿದ್ದು ನಮ್ಮ ಮನೆಯವರಿಗೆ ಅಸಮಾಧಾನವಾಯಿತು. ಅವರು ಇವನ ದೃಷ್ಟಿಯಲ್ಲಿ ಮಾತ್ರ ತಿಳಿಗೇಡಿಗಳು. ಕಾಮಾಲೆ ರೋಗದವರಿಗೆ ಪ್ರಪಂಚವೇ ಹಳದಿಯಂತೆ! ಈ ರೀತಿ ಅವರೊಡನೆ ಸಂಬಂಧ ಕಡಿದುಕೊಂಡಿದ್ದು ಹಿತವೇ? ಯೋಚಿಸುತ್ತಾ ಯೋಚಿಸುತ್ತಾ ಮೂಕವೇದನೆಯಿಂದ ತೊಳಲಿದ.

ಇವೆಲ್ಲವೂ ಕೇವಲ ಐದು ನಿಮಿಷಗಳಲ್ಲಿ ತೆರೆಯ ಮೇಲಿನ ಚಿತ್ರದಂತೆ ಮೂಡಿ ವಿಭಕ್ತವಾದುವು. ಅಣ್ಣನಿಗೆ ಪತ್ರವನ್ನೀಯುತ್ತಾ ಗದ್ಗದಿತ ಕಂಠದಲ್ಲಿ ಹೇಳಿದ: "ಇದೀಗ ಮಾಲಿನಿಗೆ ಅಕ್ಷರ ಕಲಿಸಿದ್ದು ಸಾರ್ಥಕವಾಯಿತು .. ."

"ಹಾಗೆಂದರೇನೊ. ಒಕ್ಕಣಿಕೆ ನೋಡಿದರೆ ಗೊತ್ತಾಗುವುದಿಲ್ಲವೆ?" ಎಂದ ಗುರುಮೂರ್ತಿ.

"ಗೊತ್ತಾಯಿತು "

"ಈಗ ಅವನೇ ಮಾಲಿನಿ ಬರೆದಹಾಗೆ ಒತ್ತಾಯದಿಂದ ಬರೆಸಿದಾನೆ...."

"ಆಕೆಯಾದರೂ ಏನು ಮಾಡಿಯಾಳು ?"

"ಏನೂ ಮಾಡೋ ಹಾಗಿಲ್ಲ ..ಬಿಡೋ ಹಾಗಿಲ್ಲ"

"ಆಕಳನ್ನು ಸಾಕಿ ಕಟುಕನ ಕೈಯಲ್ಲಿ ಕೊಟ್ಟ ಹಾಗಾಯಿತು."

"ಒಂದು ವಿಧ ಕಟುಕನಾದರೂ ಬೇಕು. ಇದು ದ್ವಿಪಾದ ಪಶು" ಎಂದು ಅವಡುಗಚ್ಚುತ್ತ ರೇಣುಕಪ್ರಸಾದ ಹೇಳಿದ.

"ಅಷ್ಟೆ ಸರಿಯಪ್ಪ, ಗುರುಹಿರಿಯರು ಎಂತ ಮರ್ಯಾದೆ ಬೇಡವೆ ? ಮತ್ತೆ ಇದಕ್ಕೆ ಉಪಾಧ್ಯಾಯರು ಬೇರೆ ಆಗಿದಾರೆ" ಎಂದು ಗುರುಮೂರ್ತಿಯ ಹೆಂಡತಿ ಸರಳಮ್ಮ ಹೇಳಿದಳು. ಎಂದೂ ಯಾವಾಗಲೂ ಮಧ್ಯ ಭಾಗ ವಹಿಸಿ ಮಾತನಾಡದವಳು ಆ ಪತ್ರವನ್ನು ನೋಡಿ ಕೆರಳಿ ಹೇಳಿದ್ದಳು.

ಗಂಗಮ್ಮ ತನ್ನಷ್ಟಕ್ಕೆ ತಾನು ಬೈದುಕೊಳ್ಳುತ್ತಿದ್ದಳು. 'ತಾನು ಈ ಸಂಬಂಧಕ್ಕೆ ಕಾರಣವಾಗದಿದ್ದರೆ ಈ ರಾದ್ಧಾಂತ, ಈ ರಂಪಾಟ ನಡೆಯುತ್ತಿದ್ದಿಲ್ಲ. ಇನ್ನು ಏನನ್ನು ಕಾಣಬೇಕಾಗಿದೆಯೋ ಏನೊ' ಎಂದುಕೊಳ್ಳುತ್ತಿದ್ದಳು.

ಶಿವಣ್ಣಯ್ಯನವರ ತಲೆಗೆ ಪಿತ್ತವೇರಿತ್ತು. ಮೊದಲೇ ಲಗ್ನದಲ್ಲಿ ನಡೆದ ಪ್ರಸಂಗಕ್ಕೆ ಅವರ ತಲೆ ಬಿಸಿಯಾಗಿ ಕೆರಳಿ ಕಿಡಿ ಎದ್ದಿತ್ತು. ಈ ಪತ್ರ ಆ ಕಿಡಿಯ ಮೇಲೆ ಗಾಳಿ ಬೀಸಿದಂತಾಯಿತು. ಅವರು ಯಾವುದನ್ನೂ ಮಾತನಾಡುತ್ತಿದ್ದಿಲ್ಲ. ಆ ದಿನ ಯಾರಿಗೂ ಊಟ ಬೇಕಾಗಿರಲಿಲ್ಲ. ಪಂಜರಬದ್ಧ ಸಿಂಹದಂತೆ ಸುಮ್ಮನೆ ಅವರು ಶತಪಥ ಹಾಕುತ್ತಿದ್ದರು.

"ಗುರುಸಿದ್ಧಪ್ಪಯ್ಯ, ನೀನೇ ಬಿಡಿಸಿಕೊಂಡು ಧನ್ಯನಾದೆ! ನನಗೆ ಉಮಾಪತಿ ಸರಿಯಾಗಿ ಕೈಕೊಟ್ಟ. ನಾನು ಮಾಡಿದ ಸಂಬಂಧಕ್ಕೆ ಈ ವಿಚಾರ ತಿಳಿದವರೆಲ್ಲರಂತೂ ಏನೆಂದುಕೊಳ್ಳುವರೆಯೊ! ನೋಡಿ ನೋಡಿಯೂ ಮಾವಂದಿರು ಜಾರಿದರೆಂದು ತುಂಬ ವೇದನೆಯಿಂದ ಅಂದುಕೊಳ್ಳುವೆ...." ಎಂದು ಮನಸ್ಸಿನಲ್ಲಿಯೇ ಪಿಸುಗುಟ್ಟಿದರು. ಅವರು ಪಿಸುಗುಟ್ಟಿದ್ದು ಅವರ ಕಿವಿಗೂ ಕೂಡ ಕೇಳಲಿಲ್ಲ. ಯಾಂತ್ರಿಕವಾಗಿ ಲೇಖನಿ, ಕಾಗದವನ್ನು ಅವರ ಕೈ ತೆಗೆದುಕೊಂಡಿತು. ಉಮಾಪತಿ ಸಭ್ಯನ ವೇಷ ಕಳೆದುಕೊಂಡು ಬಂದು, ಕಾಡಿ ಬೇಡಿ ಮಾಲಿನಿಯನ್ನು ಲಗ್ನಮಾಡಿಕೊಂಡಿದ್ದು—ಅದಕ್ಕಿಂತ ಮೊದಲು ಗುರುಸಿದ್ಧಪ್ಪಯ್ಯನವರೊಡನೆ ವ್ಯವಹಾರ ಮಾಡಿದ್ದು—ಲಗ್ನದಲ್ಲಿ ಉಮಾಪತಿಗೈದ ಅನುಚಿತ ವರ್ತನೆ ಇತ್ಯಾದಿಗಳನ್ನು ವಿಶದವಾಗಿ ಹತ್ತು ಹನ್ನೆರಡು ಪುಟಗಳಲ್ಲಿ ಬರೆದಿದ್ದರು. ಓಲೆಯ ಪ್ರಾರಂಭ ಮತ್ತು ಕೊನೆಯ ಭಾವನೆಯ ಹಕ್ಕಿನೋಟವಿಷ್ಟಿತ್ತು:

ಹರಿಹರ

ತಾ. ... ..

ಪ್ರಿಯಪುತ್ರಿ ಚಿ. ಕಂ. ಸೌ ಮಾಲಿನಿಗೆ, ನಿನ್ನ ಹೆತ್ತಿರುವ ಈ ಪಾಪಿ ತಂದೆಯ ಆಶೀರ್ವಾದ ನಿನಗೆ ಬೇಡ. ಆ ಜಗನ್ನಿಯಾಮಕನ ಆಶೀರ್ವಾದ ನಿನಗೆ ಅನುಗಾಲವಿರಲಿ. ಮಗಳೆ! ನಿನ್ನ ಅಕ್ಷರದ ಶಬ್ದ ರಚನೆಯ ಕಾಲದಲ್ಲಿ ನಿನ್ನ ಪತಿದೇವನು ಆ ಲೇಖನಿಯ ಹಿನ್ನಲೆಯನ್ನು

ಹಿಡಿದು ಬರೆಸಿದ. ಓಲೆ ಬಂದು ನಮ್ಮನ್ನೆಲ್ಲ ದುಃಖಸಾಗರದಲ್ಲಿ ಮುಳು ಗಿಸಿತು ...

ಅಮ್ಮ, ನಿನ್ನ ಪತಿಯು ಊರ್ಧ್ವ ಉಸಿರಿನಂತೆ ಬರೆದ ನನ್ನನ್ನು ನೀನು ಯಾಚಿಸಿರುವ ಮೂರು ಬೇಡಿಕೆಗಳನ್ನು ನಾನು ನಿನಗೆ ಕೊಡು ವುದಾದರೆ ಮಾತ್ರ ನೀನು ಮುಂದಿನ ಹಬ್ಬಕ್ಕೆ ಬರಬೇಕು, ಇಲ್ಲವಾದರೆ ಬರಬಾರದು. ನಾನು ಬಂದರೂ ಸಹ ಬರುವುದಕ್ಕಾಗುವುದಿಲ್ಲವೆಂದು ಬರೆ ದಿರುತ್ತೀಯೆ. ಅಮ್ಮಾ! ನಿನ್ನ ಮೂರು ಬೇಡಿಕೆಗಳು ನೆರವೇರಿದರೆ ಮಾತ್ರ ನಿನ್ನ ತೌರೂರುಂಟು ...ಇಲ್ಲದವರ ಇಲ್ಲವೇನಮ್ಮ ದೇವರೇ, ತಾಯಿ ಯಿಲ್ಲದ ತಬ್ಬಲಿಯ ಮೇಲೂ ನಿನ್ನ ಕ್ರೂರ ದೃಷ್ಟಿಯೇ .ಮಾಡುವು ದೇನು? ನೀನು ಬರೆದಿರುವಂತೆ ಇದು ನಿನ್ನ ಪೂರ್ವಜನ್ಮದ ಕರ್ಮಫಲ. ಊಟಮಾಡಿ ಮುಗಿಸು.

ನನ್ನ ಹೆಸರು ತೆಗೆದುಕೊಂಡರೆ ನಿನ್ನ ಗಂಡನಿಗೆ ಬಹಳ ಸಿಟ್ಟುಬರು ತ್ತದೆಂದು ಬರೆದಿರುತ್ತೀಯೆ. ಆತನಿಂದ ಇಷ್ಟೆಲ್ಲ ಅಪಮಾನ, ಅಸತ್ಯಗಳು ಉಂಟಾಗಿ ತೇಜೋವಧೆಯಾದ ನನಗೆ ಇನ್ನೆಷ್ಟು ಕೋಪ ಬರಬೇಡ, ಮಗಳೆ! ನೀನು ಕೇಳಿರುವ ಮೂರೇಕೆ—ಆರು—ಆರೇಕೆ—ಹನ್ನೆರಡು ಬೇಡಿಕೆಗಳಾಗಬಹುದಿತ್ತು ಹೇಗಿದ್ದರೆ? ಪ್ರೇಮದಲ್ಲಿದ್ದರೆ ಅಲ್ಲವೆ? ಅಪ್ರೇಮದಲ್ಲಿ ಕೇಳಿಗುವ ಒಂದೂ—ಮಾತ್ರವೂ ಸಾಧ್ಯವಿಲ್ಲಮ್ಮ

ಈ ಶಬ್ದ ರಚನೆಯನ್ನು ಮಾಡುವಾಗ ನನ್ನ ಪ್ರೇಮದ ಕರುಳನ್ನು ಬಿಸುಟು, ಹೃದಯದ ರಕ್ತದ ಮಸಿಯಿಂದ ಬರೆದಿರುವೆ. ಇದರಲ್ಲಿ ನಿನ್ನ ಗಂಡನ ನಿಂದನೆಯು ಒಂದಕ್ಕರವೂ ಇಲ್ಲ, ಯೋಚಿಸಬೇಡ. ಪತಿವ್ರತಾ ಸ್ತ್ರೀ ಪತಿ ನಿಂದೆಯನ್ನು ಕೇಳಬಾರದೆಂದು ನೀನು ಓದಿದ್ದೀಯೆ.

ನಿನಗೆ ನೀತಿ : ನೀನು ಪತಿಯಾಜ್ಞೆಯಂತೆ ತಪ್ಪದೆ ನಡೆದು ಅನು ಸೂಯೆ, ಸಾವಿತ್ರಿ, ಅರುಂಧತಿಯರಂತೆ ಪ್ರಸಿದ್ಧಳಾಗಿ ಬದುಕುವುದಲ್ಲದೆ ಅವರೇ ನಿನಗೆ ತಾಯಿಯೆಂದು ನಂಬಿದುಕೋ. ಅವರಿಗೂ ನಿನ್ನಂತಹ ಒಬ್ಬ ಮಗಳಿಲ್ಲವೇ?

ನಿನ್ನ ಕಾಗದವನ್ನು ಪಕ್ಕದಲ್ಲಿಟ್ಟುಕೊಂಡು ಕೊನೆಯುಸಿರನ್ನು ಬಿಡುತ್ತೇನಲ್ಲದೆ, ನನ್ನಂತೆ ಏಕಪುತ್ರಿಯನ್ನು ಪಡೆದ ತಂದೆತಾಯಿಗಳನ್ನು ಎಚ್ಚರಿಸಲು ಎಲ್ಲಾ ಕಡೆಯೂ ಇದರ ಪ್ರಚಾರಕ್ಕಾಗಿ ಇನ್ನೊಂದು ವಾರ

ದೊಳಗೆ ಹೊರಡುತ್ತೇನೆ.

ನಿನ್ನ ಗಂಡನ ಆಜ್ಞೆಯಾದರೆ ಮಾತ್ರ ನಿನ್ನ ಅಪೇಕ್ಷೆಯ ಲೋಕ ರೂಢಿಯಾದ ವಸ್ತ್ರಾಭರಣಗಳನ್ನು ನಿನ್ನಣ್ಣಂದಿರಿಗೆ ಬರೆದು ತರಿಸಿಕೊ. ಹಸುಳೆಯಾದ ಮುತ್ತೈದೆಯ ಕಣ್ಣೀರು ಭೂಮಿಗೆ ಬಿದ್ದರೆ ಆ ಮನೆಗೆ ಒಳಿತಲ್ಲ: ಕಾರಣ ಕಣ್ಣೀರಿಡದಿರು.

ಈ ಪತ್ರವನ್ನು ಟಪಾಲಗೆ ಹಾಕಲು ಹೋಗುವಾಗ ಮನೆಯವ ರೆಲ್ಲ ನನ್ನ ಅಂತ್ಯಾವಸ್ಥೆಯಲ್ಲಿ ಅತ್ತಂತೆ ಅತ್ತರು. ನೀನು ಮಾತ್ರ ಅಳ ಬೇಡ, ಮಗಳೆ. ಇದು ಮುಟ್ಟಿದ ದಿನ ನನ್ನ ಒಂಭತ್ತನೆಯ ದಿನವೆಂದು ಭಾವಿಸು ಈ ಪತ್ರವನ್ನು ಎಂಟು ಹತ್ತು ಸಾರಿ ಓದಿ ನಿನಗೊಪ್ಪುವ ಸದ್ಗುಣಗಳನ್ನು ಇದರಿಂದ ಆಯ್ದುಕೊಂಡು ಬಾಳು.

ನಡುಗುತ್ತಿರುವ ಕೈಯಿಂದ ಲೇಖನಿಯನ್ನು ಬಿಗಿಹಿಡಿದುಕೊಂಡು ಈ ಓಲೆ ಪೂರೈಸುವ ಅಂತ್ಯದ ಪಾಳೆ ನನ್ನದಾಗಿದೆ. . . . ಇದು ನನ್ನ ಕೊನೆಯುಸಿರು ತಬ್ಬಲಿಯಾದ ಮಗಳೇ, ನಿನ್ನನ್ನು ಆ ಜಗನ್ನಿಯಾಮಕನು ರಕ್ಷಿಸಲಿ !

೭

ಇಂದು ನಾಗರಪಂಚಮಿ. ಎಲ್ಲ ಗೃಹಗಳಲ್ಲಿಯೂ ತಂದೆತಾಯಿಗಳು ತಮ್ಮ ಹೆಣ್ಣುಮಕ್ಕಳನ್ನು ಮನೆಗೆ ಕರೆಸಿಕೊಂಡಿದ್ದಾರೆ. ಎಲ್ಲರ ಮನೆಗಳೂ ಎಂದೂ ಇಲ್ಲದ ಶೋಭೆಯಿಂದ ಕಂಗೊಳಿಸುತ್ತಿವೆ. ಆದರೆ ಶಿವಣ್ಣಯ್ಯನವರ ಮನೆ ಎಂದೂ ಇಲ್ಲದ ಶೂನ್ಯತೆಯನ್ನು ಪಡೆದಿದೆ. ಇಂದು ಯಾರಿಗೂ ಉತ್ಸಾಹವಿಲ್ಲ. ಯಾರ ಮುಖದ ಮೇಲೂ ಕಳೆಯಿಲ್ಲ ಸಂಪ್ರದಾಯದ ಪ್ರಕಾರ ಶಿವಣ್ಣಯ್ಯ ಗುರುವಿನ ಕೋರುಧ್ಯಾನದ ಭಿಕ್ಷಕ್ಕೆ ಹೊರಟು ಹೋದರು

ರೇಣುಪ್ರಸಾದ ನಿತ್ಯಕರ್ಮಗಳನ್ನು ತೀರಿಸಿಕೊಂಡು ಮಾಧವರಾಯನ ಮನೆಗೆ ಹೋದ ಬಹಳ ದಿನಗಳಿಂದ ಅವನಿಗೆ ಬಿಡುವೇ ಸಿಕ್ಕಿರಲಿಲ್ಲ. ಈ ದಿನ ಮಾಧುವನ್ನು ಕಂಡು ನಾಕಾಗುವವರಿನಿಗೂ ಮಾತಾಡಬೇಕಾಗಿತ್ತು. ಅವನು ಹೋದಾಗ ಮಾಧುವಿನ 'ಸುಮಗ್ನ ವಿಜಯ' ಪಾರಾಯಣ ಇನ್ನೂ ಮುಗಿದಿರಲಿಲ್ಲ. ಹೊರ ಕೊಠಡಿಯಲ್ಲಿ ಕುಳಿತುಕೊಂಡು ಕವಿ ರವೀಂದ್ರರ 'ವರದಕ್ಷಿಣೆ ಮತ್ತು ಇತರ ಕಥೆಗಳು' ಎಂಬುದರ ಮೇಲೆ ಕಣ್ಣಾಡಿಸಿದ. ಅದರಲ್ಲಿ ವರದಕ್ಷಿಣೆ ಎಂಬ ಕಥೆ ತುಂಬಾ ಹಿಡಿಸಿತು. ಅದು ತಮ್ಮನ್ನೇ ಕುರಿತಾಗಿ ಬರೆದಿದೆಯೋ ಹೇಗೆ ಎನ್ನಿಸಿತು ಅದರಲ್ಲಿ ಮನೆಗೆ ಬಂದ ಇಸ್ಸೊಬ್ಬರ ಮಗಳನ್ನು ವರದಕ್ಷಿಣೆ ಕೊಡಲಿಲ್ಲವೆಂದು ಗೋಳು ಹುಯ್ಯಿಕೊಳ್ಳುವುದನ್ನು ಮನೋಜ್ಞವಾಗಿ ಚಿತ್ರಿಸಲಾಗಿತ್ತು. ಅದನ್ನು ಓದುತ್ತಾ ಓದುತ್ತಾ ಕಣ್ಣೀರಿನ ಹನಿಗಳು ದಳದಳನೆ ಉದುರಿದುವು. ಆ ವೇಳೆಗೆ ಮಾಧವರಾಯ ಕೊಠಡಿಯನ್ನು ಪ್ರವೇಶಿದ. ಕಿಟಕಿಯ ಕಡೆ ಮುಖಮಾಡಿ ತಲೆ ತೀಡಿಕೊಳ್ಳುವವನಂತೆ ನಟಿಸುತ್ತ ರೇಣುಕ ಕಣ್ಣೀರನ್ನು ಒರೆಸಿಕೊಂಡ.

"ಹಲೋ, ರೇಣುಕಪ್ರಸಾದ್ ಏನು ವಿಶೇಷ? ಇಂದು ಅಪೂರ್ವ ಮಿಲನ."

"ಏನೂ ಇಲ್ಲವಪ್ಪ, ನೀನೇ ಹೇಳಬೇಕು."

"ಮೇಷ್ಟ್ರು ಕಂಡಿದ್ದರೇನು?"

"ಇಲ್ಲವಲ್ಲ. ಕಂಡಿದ್ದಿಲ್ಲ ಮಾಧು."

"ಏನಯ್ಯ, ಇವತ್ತು ಹಬ್ಬಾಂತ ಗೊತ್ತಿದ್ದಿಲ್ವೆ?...." ಎಂದು ಮಾಧು ಚೇಷ್ಟೆಯ ಸ್ವರದಲ್ಲಿ ಪ್ರಶ್ನಿಸಿದ.

"ಯಾಕಾಗಿ? ..ಗೊತ್ತಿತ್ತು"

"ಅಲ್ಲೋ, ಹಜಾಮತಿ ಮಾಡಿಸಬೇಡವೇ?"

"ಹೊ, ಮರೆತುಬಿಟ್ಟೆ" ಎಂದು ಬುರುಡೆ ಹೊಡೆದ ರೇಣುಕ.

"ನಮ್ಮ ಬಡತನ ಕಷ್ಟಗಳು ಶಾಶ್ವತವಾಗಿರಲಿ ಒಂದುದಿನ ಹಬ್ಬದಲ್ಲಾದರೂ ಸಂತೋಷದಿಂದ ಇರೋದು ಬೇಡವೆ?"

ರೇಣುಕಪ್ರಸಾದ ಏನೂ ಉತ್ತರಿಸಲಿಲ್ಲ.

"ಮಾಲಿನಿದೇವಿ ಕಡೆಗೂ ಬರಲಿಲ್ಲವೆ? ಏನೋ ಕಾಗದಗೀಗದ ಜೋರು ನಡೆದಿದೆಯೆಂತ ಕೇಳಿದ್ದೆ "

"ಇನ್ನೆಂದಿಗೂ ಅವಳ ಮುಖ ನೋಡಲಿಕ್ಕಾಗುವುದಿಲ್ಲ, ಮಾಧು. ಇಂಥ ಪ್ರಕರಣಗಳು ನಡೆಸುವುದಕ್ಕೆ ಸಂಬಂಧ ಏಕೆ ಮಾಡಬೇಕೋ ಏನೊ! ನೆಂಟಸ್ತಿಕೆ ನಡೆದ ಮೇಲೆ ನಾಲ್ಕು ಕಾಲ ಪ್ರೇಮದಿಂದ ಇರಬೇಕು. ಒಬ್ಬರ ಕಷ್ಟ ಒಬ್ಬರು ಕೇಳಿ ಅದನ್ನು ಪರಿಹಾರ ಮಾಡಲಿಕ್ಕೆ ಪ್ರಯತ್ನಿಸಬೇಕು. ಆದರೆ ನಮ್ಮ ನೆಂಟರು ಹಾಗಲ್ಲ. ನಮಗೆಷ್ಟು ದುಃಖ ಕೊಡಲಿಕ್ಕೆ ಸಾಧ್ಯವೋ ಅಷ್ಟು ಕೊಡಲಿಕ್ಕೆ ಪ್ರಯತ್ನಿಸುತ್ತಾರೆ."

ಪೂರ್ವದಿಕ್ಕಿನ ಕಿಟಿಕಿಯಿಂದ ಸೂರ್ಯನ ಕಿರಣಗಳು ರೇಣುಕ ಪ್ರಸಾದನ ಬಿಳಿಯಂಗಿಯ ಮೇಲೆ ಬಿದ್ದು, ಆ ಕತ್ತಲೆ ಕೋಣೆಯನ್ನು ಕೊಂಚ ಕೊಂಚವಾಗಿ ಬೆಳಗಿಸುತ್ತಿತ್ತು. ಮಾಧು ಪಡಸಾಲೆಯಿಂದ ಚಾಪೆಯೊಂದನ್ನು ತಂದು ಹಾಸಿ, ಅದರ ಮೇಲೆ ಕುಳಿತುಕೊಳ್ಳುವುದಕ್ಕೆ ಹೇಳಿದ

"ನೋಡು, ರೇಣುಕ ನೀನು ಏನೇ ತಿಳಿದುಕೋ ಇಂತಹ ಜನಗಳು ಮನುಷ್ಯರಲ್ಲ, ಪಶುಗಳಲ್ಲ, ಕಾಡಿನಲ್ಲಿ ವಾಸಿಸುವ ಮೃಗಗಳು. ಅವರಿಗೆ ಯಾವಾಗ ಸಂತೋಷವಾಗುತ್ತೆ ಗೊತ್ತೆ?....ಹೇಳು ನೋಡೋಣ."

"ಏನೋಪ್ಪ ನನಗೆ ಅಷ್ಟಾಗಿ ತಿಳಿಯದು"

"ಇನ್ನೊಬ್ಬರಿಗೆ ಎಷ್ಟೆಷ್ಟು ಜಾಸ್ತಿಯಾಗಿ ತೊಂದರೆ ಕೊಡುತ್ತಾ ಹೋಗುತ್ತಾರೊ, ಅಷ್ಟಷ್ಟು ಅವರ ಸಂತೋಷ ಇಮ್ಮಡಿ ಮುಮ್ಮಡಿ

ಹೆಚ್ಚುತ್ತಾ ಹೋಗುತ್ತದೆ. ಅಲ್ಲವೆ ?"

"ನೀನು ಹೇಳುವುದು ಪೂರ್ಣ ಸತ್ಯ. ಯಾರೋ ಬಾಗಿಲು ನೂಕುತ್ತಿದ್ದಾರೆ.

"ಸಾಧು ಸಾಧು" ಎಂದು ರಾಧಮ್ಮ ಕೂಗಿದಳು.

"ಏನಜ್ಜಿ, ಇಲ್ಲಿದ್ದೇನೆ ಬಾ. ಅಗಳಿ ಹಾಕಿಲ್ಲ, ಒಳಗೆ ಬಾ"

"ಒಳಗೆ ಯಾರಿದಾರೆ?"

"ನಾನು ರೇಣುಕು"

"ರೇಣುಕನೇನು! ಎಲ್ಲೋ ಕೆಲಸ ಸಿಕ್ಕಿತೊಂತ ಕೇಳಿದ್ದೆನಲ್ಲೋ."

"ಹೌದು. ದೊಡ್ಡಪ್ಪನವರ ವಲ್ಲಾಲಿ ಅಂಗಡಿಯಲ್ಲಿದ್ದೇನೆ" ಎಂದು ಸಂಕುಚಿತ ಮನೋಭಾವನೆಯಿಂದ ಉತ್ತರಿಸಿದ. ಎಲ್ಲಿಯಾದರೂ ಸಂಬಳವೆಷ್ಟೆಂದು ಕೇಳಿದರೆ ಏನೆಂದು ಉತ್ತರಿಸಲೆಂದು ಅವನ ಹೃದಯ ಬಾಧಿಸಿತು. ಆದರೆ ಆ ಮುದುಕಿ ಅದನ್ನು ಕೇಳಲಿಲ್ಲ. ಅಷ್ಟಕ್ಕೆ ಆ ವಿಷಯ ಬಿಟ್ಟು—

"ಆ ಸುಟ್ಟ ರಾಜೀವಲೋಚನ ಇದಾನಲ್ಲ, ಕಂಪೆನಿ ಬಿಟ್ಟು ಅಂಗಡಿ ಇಡುತ್ತೇನೆಂದು ಕೂತಿದ್ದಾನೆ. ಏನು ಹೇಳುವುದು? ಒಂದು ಹತ್ತಿರ ಎಲ್ಲಿಯಾದರೂ ಹೊಂದಿಕೊಂಡು ಕೆಲಸಮಾಡುತ್ತ ಹೋಗಬೇಕು "

"ಯಾವ ರಾಜೀವಲೋಚನ ಸಾಧು?"

"ಆ ನರಬುರುಡಿ ರಾಜಿ"

"ಓಹೋ, ಅವನೇ! ಕಂಪನಿ ಬಿಟ್ಟನೇ"

"ಓ, ಬಿಟ್ಟು ದಿನಗಳೆಂಟು ಕಳೆದವು. ತಮ್ಮ ನಿನಗೆ ಸಂಬಳವೆಷ್ಟು ಕೊಡುತ್ತಿದ್ದಾರೆ." ರೇಣುಕಪ್ರಸಾದನಿಗೆ ಪುನಃ ಸಂದಿಗ್ಧ ಸನ್ನಿವೇಶ ಬಂದಿತು. ತಲೆ ತಗ್ಗಿಸಿಕೊಂಡು ಹೇಳಿದ:

"ಇನ್ನೂ ಕೊಡುತ್ತಿಲ್ಲ. ಯಾವಾಗ ಕೊಡುತ್ತಾರೆಯೊ ಏನು ಕಥೆಯೊ."

"ನನಗೆ ನೀನು ಬೇರೆ ಅಲ್ಲ. ನಮ್ಮ ಸಾಧು ಬೇರೆ ಅಲ್ಲ. ನಿನ್ನನ್ನು ನೋಡಿದರೆ ನನಗೆ ತುಂಬಾ ಸಂತೋಷವಾಗುತ್ತದೆ ನನ್ನ ಮಾತು ತುಸು ಕೇಳು. ಆ ದಳ್ಳಾಳಿ ಅಂಗಡಿ ಬಿಟ್ಟು ಎಲ್ಲಾದರೂ ಸರ್ಕಾರಿ ನೌಕರಿಯೊಳಗೆ ಸೇರಿಕೋಬಾರದೆ?"

"ಬೇರಾವುದೂ ಈಗ ಸದ್ಯಕ್ಕಿಲ್ಲ. ಮುಂದೆ ನೋಡುವ"

"ತಂಗಿ ಕರೆದುಕೊಂಡು ಬಂದಿರೇನು, ಮಾಲಿನಿಯನ್ನ"

"ಇಲ್ಲಜ್ಜಿ. ಅದೊಂದು ರಾಮಾಯಣವೇ ಆಗಿದೆ"

"ನಾನು ಈ ಹಿಂದೆ ಕೇಳಿದ್ದೆ. ಲಗ್ನದಲ್ಲಿ ಗುದ್ದಾಡಿದ್ದು—ಅದನ್ನೆಲ್ಲ ಗುರುಮೂರ್ತಿ ಒಂದು ದಿವಸ ಹೇಳಿದ್ದ. ನಿಮ್ಮ ಗಂಗಮ್ಮನೂ ಆವೊತ್ತು ಹೊಳೆಯಲ್ಲಿ ಕಣ್ಣೀರು ಹಾಕುತ್ತ ಹೇಳಿದ್ದಳು"

"ಅದಾದಮೇಲೆ ನಮ್ಮ ಮಾಲಿನಿಯಿಂದ ಕಾಗದ ಬೇರೆ ಹಾಕಿಸಿದಾನೆ. ನಾನು ನೀವು ಕರೆಯಲಿಕ್ಕೆ ಬಂದರೂ ಬರುವುದಿಲ್ಲ. ನನ್ನ ಮೂರು ಬೇಡಿಕೆಗಳನ್ನು ಕೊಟ್ಟರೆ ಮಾತ್ರ ಸಾಧ್ಯ—"

"ಕೊರಮ ಕೊರಮ ಇದ್ದ ಹಾಗಿದಾನೆ ಮುಖ ನೋಡಿದರೆ ಗೊತ್ತಾಗುತ್ತದೆ. ರಾಹು ಬಡಿದವರ ಮುಖ ಇದ್ದಂತೆ" ಎಂದ ಮಾಧು.

ರೇಣುಕ ಪ್ರಸಾದನ ಗೃಹ ಸಮಸ್ಯೆ ತನ್ನ ಗೃಹದ ಸಮಸ್ಯೆಯೋ ಎಂಬಂತೆ ಮಾಧು ಭಾಗವಹಿಸಿ ಮಾತನಾಡಿದ. ವಾಸ್ತವವಾಗಿ ಆ ಎರಡು ಜೀವಗಳು ಹಾಗೆಯೇ ಇದ್ದವು.

"ಎಷ್ಟು ದಿನ ಇಟ್ಟುಕೊಳ್ಳುತ್ತಾರೊ ಇಟ್ಟುಕೊಳ್ಳಲಿ. ಒಬ್ಬರ ಮಗಳನ್ನು ಉರಿಸಿದರೆ, ಅವರ ಮಗಳನ್ನು ಉರಿಸಲಿಕ್ಕೆ ಇನ್ನೊಬ್ಬರು ಹುಟ್ಟೇ ಹುಟ್ಟುತ್ತಾರೆ" ಎಂದ ರೇಣುಕ.

"ಪಾಪ ಪುಣ್ಯಕ್ಕೆ ಹೆದರಬೇಕು ಮನುಷ್ಯನೆಂತ ಅನ್ನಿಸಿಕೊಳ್ಳುವವನು. ಅಲ್ಲವೆ ಅಜ್ಜಿ?"

"ರಾಮ, ರಾಮ ಆ ಗುರುರಾಯರು ಇಂತಹದಕ್ಕೆ ಒಪ್ಪುವರೇ? ಏನೋ ಶನಿಕಾಟ ಇರುತ್ತೆ. ಅದೊಂದು ತೀರುವ ತನಕ ಇಂತೆಯೇ. ಅವನು ಉಜ್ಜಯನಿಯ ವಿಕ್ರಮಾದಿತ್ಯನಿಗೇ ಬಿಡದವನು."

"ಏಳನೇ ಶನಿಕಾಟವಜ್ಜಿ"

"ಮಾಧು, ನಾನು ಕುಸುಮಳ ಮನೆಗೆ ಹೋಗಿ ಇಂಗು ತೆಗೆದು ಕೊಂಡು ಬರುತ್ತೇನೆ, ಎಲ್ಲಿಗೂ ಹೋಗಬೇಡ."

"ಕ್ಹೊ, ಹೋಗಿ ಬಾ ಯಾರು ಬೇಡವೆಂದರು"

ಆ ಮುದುಕಿ ಇನ್ನೂ ಅಪೇತಾನೆ ಹೋಗಿರಬಹುದು. ವಿಶ್ವನಾಥ ರಾವ್ ಬಂದ.

"ಯಾಕೋ ಹೊತ್ತಾಯಿತಲ್ಲ. ಬೇಗ ಬಂದು ಬಿಡುವೆ ಎಂತ ಹೇಳಿದ್ದೆ" ಎಂದ ಮಾಧು.

'ನಮ್ಮ ಬಾಬುರಾಯ ಬಂದಿದಾನೆ. ಅವನ ಕೂಡ ಮಾತಾಡುತ್ತ ಕೂತಿದ್ದೆ."

"ಓಹೋ, ಎಷ್ಟೇ ಆಗಲಿ ಮುಂದೆ ಹೆಣ್ಣು ಕೊಡುವ ಮಾವ. ಇಳಿಯಷ್ಟಾದರೂ ಉಪಚರಿಸಬೇಕಲ್ಲ"

"ಅವನು ಒಳ್ಳೆ ತಮಾಷೆ ಮನುಷ್ಯ. ಮನೆಗೆ ಬಂದರೆ ಸಾಕು 'ಅಕ್ಕಾ ಚಹಾ ಮಾಡೆ—ಅಕ್ಕಾ ಚಹಾ ಮಾಡೆ' ಎಂದು ಕುಳಿತು ಬಿಡುತ್ತಾನೆ ಎಷ್ಟು ಟೀ ಕುಡಿದರೂ ಅವನಿಗೆ ತೃಪ್ತಿಯಿಲ್ಲ"

"ನೋಡಿದೆಯಾ ರೇಣುಕ, ಮಾತು ಹೇಗೆ ಹಾರಿಸಿದ!"

ರೇಣುಕನ ಚಿತ್ತ ಇವರ ಮಾತಿನತ್ತ ಪ್ರಸ್ಥಾನ ಮಾಡಿರಲಿಲ್ಲ. ತನಗೂ ಬಾಬುರಾಯರಿಗಿರುವಂತೆ ಅಕ್ಕನಿಲ್ಲದಿದ್ದರೂ ತಂಗಿಯಿದ್ದಾಳೆ. ಆಕೆಯ ಮನೆಗೆ ಹೋಗಿ ಕಾಫಿ ಕೇಳುವುದೊಂದಿರಲಿ, ಆಕೆಯ ಮುಖವನ್ನು ಒಮ್ಮೆಯಾದರೂ ನೋಡುವಂತಿಲ್ಲ—ಎಂದುಕೊಂಡ.

"ಯಾಕಾಗಿ ಬಾಬುರಾವ್ ಬಂದಿದಾನೆ?"

"ಅವನ ಮಗಳು ಒಬ್ಬಳು ಇದಾಳೆ ನನಗೆ ಮೂಲವಾಗಿ.. ."

"ಯಾಕೋ ಅಷ್ಟು ಜುಗುಪ್ಸೆ? ಲಗ್ನದ ವಯಸ್ಸು ಬಂದರೂ ಹೀಗೇಕೆ ಒಲ್ಲೆ ಎಂತ ಹೇಳುತ್ತಿದ್ದೀಯೆ?" ಮಾಧು ಹೇಳಿದ ತನ್ನ ಮಾತು ಮುಂದುವರಿಸುತ್ತ.

"ನನಗೆ ವಿವಾಹಬೇಡಪ್ಪ. ಈ ಸಂಸಾರ ಒಂದು ಮಹಾಸಾಗರವಿದ್ದ ಹಾಗೆ, ಅದನ್ನು ಸರಾಗವಾಗಿ ದಾಟುವುದು ಬಹು ಕಷ್ಟ" ಎಂದು ವೇದಾಂತಿಯಂತೆ ಹೇಳಿದ.

"ವಿಚಿತ್ರ ಹುಡುಗ ವಿಶ್ವನಾಥ. ಗೃಹಸ್ಥನಾಗಿಯೇ ಮುಕ್ತಿಯಿಲ್ಲವೇ? ಈಸಬೇಕು, ಇದ್ದು ಜಯಿಸಬೇಕು" ಎಂದು ಮಾರ್ಮಿಕವಾಗಿ ನುಡಿದ.

ಇನ್ನು ವಿಶ್ವನಾಥ ಉತ್ತರಿಸದಾದ. ಕಾಕತಾಲ ನ್ಯಾಯದಂತೆ ಮುದುಕಿ ಕೆಮ್ಮುತ್ತ ಅಲ್ಲಿಗೆ ಬಂದಳು.

"ನನಗೆ ಈ ಬಿಸಿಲಿನಲ್ಲಿ ತಿರುಗುವುದೇ ಆಗುವುದಿಲ್ಲ, ಮಾಧು. ಎಷ್ಟು ದಿನಾಂತ ದುಡಿಯಲಿ" ಎನ್ನುತ್ತಲೆ ಬಂದು ಕೈಯನ್ನು ತಲೆಯಮೇಲಿಟ್ಟು

ಕುಳಿತಿದ್ದನ್ನು ನೋಡಿದ ಮಾಧು ಹೇಳಿದ: "ಅಜ್ಜಿ, ಒಂದಿಷ್ಟು ಆಸ್ಪತ್ರೆಗೆ ಹೋಗೋಣಾಂತ ಎಷ್ಟು ದಿವಸದಿಂದ ಹೇಳುತ್ತ ಬಂದಿದ್ದೇನೆ."

"ನನಗೆ ಯಾಕೆ ಔಷಧಿ–ಮದ್ದು. ಈಗೋ– ಆಗೋ ಹೋಗೋ ಮುದಿಕಿಗೆ."

ರೇಣುಕನ ಕರುಳು ಕೊಯ್ದಂತಾಯಿತು. ಅವನು ತಡೆಯಲಾರದೆ ಹೇಳಿದ

"ಅಂತೆಂದರೆ ಹ್ಯಾಗೆ? ಇರುವ ತನಕ ಸುಖವಾಗಿದ್ದು ಹೋಗಬೇಕು- ಮಡಿಯುವುದಕ್ಕೆ ಮಾಧು ಇಲ್ಲವೆ? ನೀನು ಹೋಗಿಬಿಟ್ಟರೆ ಅವನು ಬೀದಿ ಪಾಲಾಗುತ್ತಾನೆ."

"ಹುಟ್ಟಿಸಿದ ದೇವರು ಹುಲ್ಲು ನೋಯಿಸುವುದಿಲ್ಲ. ಆ ದೇವರಿಗೆ ಕಣ್ಣಿಲ್ಲವೆ? ಹ್ಯಾಗಾದರೂ ಕಾಪಾಡುತ್ತಾನೆ"

"ಅದು ದೇವರು ಹೇಳಿದ ಮಾತಜ್ಜಿ ಈ ಒಣ ಕೆಮ್ಮು ಹೀಗೆ ಬಿಡಬಾರದೆಂತ ಹೇಳಿದೆ. ಮುಂದೆ ದೀರ್ಘಕ್ಕಿಟ್ಟು ಕೊಂಡರೆ ನಾವೆಲ್ಲಿ ನೋಡೋಣ" ಎಂದ ಮಾಧು

"ನೋಡದಿದ್ದರ ಸಾಯುವೆ ಹೋಗು ನೀನು ಯಾಕೆ ನೋಡುತ್ತೀಯೆ. ಸರಿಯೇ ಸಂಬಂಧವೆ!—' ಎಂದು ಏರಿದ ಧ್ವನಿಯಲ್ಲಿ ರಾಧಮ್ಮ ಹೇಳಿದರು.

ಅವರ ಏರಿದ ಧ್ವನಿಯನ್ನು ಕೇಳಿ ಮಾಧು ಅಲ್ಲಿಗೇ ತನ್ನ ಮಾತನ್ನು ನಿಲ್ಲಿಸಿದ. ಹಬ್ಬದ ದಿನ ಅವೇಕೆ ಆ ಮುದುಕಿಯ ಮನಸ್ಸನ್ನು ನೋಯಿಸಬೇಕೆಂದುಕೊಂಡ ಅನತಿ ಸಮಯ ಮೂವರು ಶಾಂತವಾಗಿ ಕುಳಿತುಕೊಂಡಿದ್ದರು. ಮಾಧು ಅಲ್ಲಿಂದೆದ್ದು ಹೊರಗಡೆ ಹೋದ. ಅವನನ್ನು ಹಿಂಬಾಲಿಸಿ ವಿಶ್ವನಾಥ, ರೇಣುಕ ಪ್ರಸಾದ ಇಬ್ಬರೂ ಹೋದರು. ವಿಶ್ವನಾಥ ಮನೆಕಡೆಗೆ ಧಾವಿಸಿದ. ರೇಣುಕ ಪ್ರಸಾದ ಸಾಯಂಕಾಲ ತಾನೂ ಪ್ರೇಮಚಂದ್ರರೂ ಬರುತ್ತೇನೆಂದು ಹೇಳಿ ಹೊರಟುಹೋದ

ಆ ದಿನ ರೇಣುಕಪ್ರಸಾದನ ಮನೆಯಲ್ಲಿ ಯಾರೂ ಸರಿಯಾಗಿ ಊಟ ಮಾಡಲಿಲ್ಲ ಮನೆಗೆ ಬೆಳಕಿನೋಪಾದಿಯಾಗಿದ್ದ ಮಾಲಿನಿ ಈಗಿದ್ದಿಲ್ಲ. ಅವರಿಗಾದರೂ ಅನ್ನ ನೀರು ಎಂದರೆ ಹೇಗೆ ಸೇರಬೇಕು? ಈ ನಡುವೆ ಶಿವಣ್ಣಯ್ಯನವರ ಅಣ್ಣ "ಇನ್ನೊಬ್ಬರಿಗೆ ಕೇಡು ಬಯಸಿದ್ದಕ್ಕೆ ಅವನ

ಮುಗಳನ್ನು ಅಗಲಿಸಿದ" ಎಂದು ಯಾರ ಎದುರಿಗೋ ಆ ದಿನ ಹೇಳುತ್ತ ಇದ್ದ ಮಾತು ಶಿವಣ್ಣಯ್ಯನವರ ಮನಸ್ಸಿಗೆ ಗಾಯಮಾಡಿತ್ತು.

ಆ ದಿನ ಸಂಜೆಗೆ ರೇಣುಕಪ್ರಸಾದ, ಮಾಧು, ಪ್ರೇಮಚಂದ್ರರು ವಿಶ್ವನಾಥನನ್ನು ಹುಡುಕಿಕೊಂಡು ಹೊರಟರು. ಅವನು ಮನೆಯಲ್ಲೂ ಮತ್ತು ಪೇಟೆಯಲ್ಲೂ ಇರಲಿಲ್ಲ ಪ್ರೌಢಶಾಲೆಯ ಬಳಿಯಲ್ಲಿರುವ ರೇಡಿಯೋವಿನಿಂದ ಸಂಗೀತ ಕೇಳಿ ಬರುತ್ತಿತ್ತು. ಅದನ್ನು ಕೇಳುತ್ತ ಅವರು ಪೇಟೆಯಲ್ಲಿ ಹಾಯ್ದು ದೇವಸ್ಥಾನಕ್ಕೆ ಬರುತ್ತಿದ್ದಾಗ ದಾರಿಯಲ್ಲಿದ್ದ ಆಂಜನೇಯ ದೇವರ ಕಟ್ಟೆಯ ಮೇಲೆ ವಿಶ್ವನಾಥ ನಿಂತುಕೊಂಡು ದಾರಿಯಲ್ಲಿ ಸುಳಿದಾಡುತ್ತಿದ್ದ ಸದ್ಗೃಹಸ್ಥ ಹೆಣ್ಣುಮಕ್ಕಳನ್ನು ನೋಡುತ್ತಿದ್ದ —ಕಡೆಮು ರಿಗೆದ ಗೋಂಬೆಯನ್ನು ನೋಡುವಂತೆ. ಪ್ರೇಮಚಂದ್ರರು ದೂರದಿಂದಲೇ ನೋಡಿ ಹೇಳಿದರು! "ವಿಶ್ವನಾಥರಾಯರ ಸವಾರಿ ಏಕೋ ಇಲ್ಲಿಗೆ ದಯ ಮಾಡಿಸಿದೆಯಲ್ಲ"

"ಹೆಂಗಸರನ್ನು ನೋಡಲಿಕ್ಕೆ .ಇನ್ಯಾತಕ್ಕೆ ನೀವೇ ಹೇಳಿ ಸಾರ್"

"ಲಗ್ನಮಾಡಿಕೊಳ್ಳೋ ವಿಶ್ವ ಎಂದರೆ ಒಲ್ಲೆ ಅಂತನ್ನುತ್ತಾನೆ. ಆದರೆ ಹೆಣ್ಣು ಹುಡುಗಿಯರನ್ನು ನೋಡಿಕೊಳ್ಳುವ ಗೀಳು ಮಾತ್ರ ಹೋಗಲ್ಲ" ಎಂದು ರೇಣುಕನ ಮಾತಿಗೆ ತನ್ನ ಉದ್ಗಾರವನ್ನು ಮಾಧು ಸೇರಿಸಿ ಕಳೆಕೊಟ್ಟ.

ಯಾವುದೋ ಅವ್ಯಕ್ತಲೋಕದಲ್ಲಿದ್ದಹಾಗೆ ವಿಶ್ವನಾಥ ಭಾವಪರವಶನಾಗಿದ್ದ. ಯಾರು ಬಂದು ಮಾತನಾಡಿಸಿದರೂ ಮಾತನಾಡುವ ಹಾಗಿದ್ದಿಲ್ಲ. ಇವನೂ ಓರ್ವ ಯೋಗಿಯೇ ಸರಿ. ಯಾರ ಹಿಡಿತಕ್ಕೂ ಸಿಕ್ಕದ ಭಾವಸಮಾಧಿಯಲ್ಲಿದ್ದಾನೆ. ಇವನೂ ಓರ್ವ ಭಕ್ತ!

ಆ ಮೂವರೂ ವಿಶ್ವನಾಥ ನಿಂತಿದ್ದ ಮೆಟ್ಟಿಲಿನ ಒಳಿಯೇ ಸಾರಿ ಹರಿಹರೇಶ್ವರ ದೇವಸ್ಥಾನಕ್ಕೆ ಹೋಗಿ ಕೈ ಮುಗಿದುಕೊಂಡು ಬಂದರೂ ಹಾಗೆಯೇ ಇದ್ದ ವಿಶ್ವನಾಥ.

ಆಗ ಗೃಹಿಣಿಯೊಬ್ಬಳು ತನ್ನ ಮಗುವಿನೊಡನೆ ತಟ್ಟೆಯನ್ನು ಹಿಡಿದುಕೊಂಡು ಮನೆಗೆ ಹೋಗುತ್ತಿದ್ದಳು. ಸುಂದರವಾದ ಕೇಶಕ್ಕೆ ಸುಗಂಧದ ಎಣ್ಣೆ ಹಚ್ಚಿಕೊಂಡಿದ್ದಳು. ಜಾರ್ಜೆಟ್ ಸೀರೆಗೆ ನಸುನಿಸುನಿ ಬಣ್ಣದ ರವಿಕೆ ತೊಟ್ಟುಕೊಂಡು, ಕೊರಳಲ್ಲಿ ಎರಡೆಳೆಯ ಬಂಗಾರದ

ಸರವೊಂದನ್ನು ಹಾಕಿಕೊಂಡಿದ್ದಳು ಕಿವಿಯಲ್ಲಿ ಲೋಲಕ್ಕು, ಕೈಗಳಿರಡ ಲ್ಲ ಹೆಚ್ಚಿಲ್ಲದಿದ್ದರೂ ಎರಡೆರಡು ಬಳೆಗಳನ್ನು ಹಾಕಿಕೊಂಡಿದ್ದಳು. ಅವಳ ಶರೀರದಾದ್ಯಂತ ಎವೆಯಿಕ್ಕದೆ ನೋಡಿದ ವಿಶ್ವನಾಥ. ಅವಳು ಆಂಜನೇಯ ದೇವರ ಕಡೆಗೆ ತಿರುಗಿ ಕೈ ಮುಗಿದಾಗ ಅವಳನ್ನು ಇನ್ನೂ ಸ್ಪಷ್ಟವಾಗಿ ನೋಡಿದ.

ಹುಡುಗನನ್ನು ಎತ್ತಿಕೊಳ್ಳಲು ಹೋದಾಗ ಆಕೆಯ ಸೀರೆಯ ಸೆರಗು ಸರಿದು ಕೆಳಗೆ ಬೀಳುತ್ತಲೇ ಬೇಗ ಮೊದಲಿನಂತೆ ಹಾಕಿಕೊಂಡು ಹೊರ ಟಳು. ಆಗ ಅವನು ಇನ್ನೂ ಆಕೆಯನ್ನು ಸ್ಪಷ್ಟವಾಗಿ ನೋಡಿದ ಅವಳು ಹೊರಟು ಹೋಗುತ್ತಿದ್ದಾಗಲೂ ನೋಡುತ್ತಲೇ ಇದ್ದ. ಈಗ ಅವಳ ಜಡೆಯ ತುದಿಗೆ ಕಟ್ಟಿದ್ದ 'ಟೇಪು' ಕಾಣಿಸುತ್ತಿತ್ತು ಅಂದವಾದ ಗುಲಾಬಿ ಹೂವು ತನ್ನ ಸುಗಂಧವನ್ನು ಮಂದಮಾರುತನ ಸಹಾಯದಿಂದ ಇವನಿ ಗೀಯುತ್ತಿತ್ತು.

ಅವನಿನ್ನೂ ನೋಡುತ್ತಲೇ ಇದ್ದ. ಆ ಮಂಜುಳ ದೇಹವನ್ನು ನೋಡುತ್ತಲೇ ಇದ್ದ! ಅವನಿಗೆ ತಡೆಯದಾಯಿತು ಇನ್ನೂ ನೋಡಬೇಕೆನ್ನಿ ಸಿತು ...ಮೆಲ್ಲಗೆ ಅವಳನ್ನು ಹಿಂಬಾಲಿಸಿದ ದೇವರ ಕಂಬದ ಬಳಿ ಬಂದಾಗ ಯಾರೋ ತನಗೆ ಪರಿಚಯದವರು ಬರುತ್ತಾ ಇದ್ದ ಹಾಗೆ ಆಕೆಗೆ ಗೋಚರ ವಾಯಿತು. ತಲೆಯನ್ನು ಬಗ್ಗಿಸಿದ. ಆಗ ಅವಳ ಪಾದದ ಕಡೆಗೆ ಅವನ ಲಕ್ಷ್ಯಹೋಯಿತು. ಅವಳ ಪಾದದ ಅಂದವಾದ ನಡಿಗೆಯನ್ನು ಎವೆಯಿಕ್ಕದೆ ನೋಡಿದ. ಅವಳು ಮುಂದೆ ಮುಂದೆ ಸಾಗುತ್ತಿದ್ದಳು. ಅವಳು ಇವನತ್ತ ತಿರುಗಿನೋಡುವ ಅಸಭ್ಯ ಕೆಲಸಕ್ಕೆ ಹೋಗಲಿಲ್ಲ. ಅವಳಮಗು ಮುಂದೆ ಬರ ದಿರಲು ಹಟಮಾಡುತ್ತಿತ್ತು. 'ಬೇಗ ಬಾ ಚಿನ್ನ, ಅಪರು ಮನೆಯಲ್ಲಿ ಬೈತಾರೆ. ಮನೆ ಮುಟ್ಟಿದ ಕ್ಷಣವೆ ನಿಂಗನಿಗೆ ಹೇಳಿ ನಿನಗೆ ಕಸ್ನಡಕ ತರಿಸಿ ಕೊಡುವೆ' ಎಂದಳು. ಆ ಹುಡುಗ ತನ್ನ ಹಟ ಬಿಡಲಿಲ್ಲ. ತನ್ನೆ ಕೊಡನಿ ಎಳೆದುಕೊಂಡು ಹೊರಟಳು. ಆಗ ಅವಳ ತಲೆಯಿಂದ ಗುಲಾಬಿ ಹೂವು ಬಿದ್ದಿತು; ಅವಳಿಗದು ತಿಳಿಯದಂತೆಯೇ ಬಿದ್ದಿತ್ತು. ಯಾವುದೋ ಬಿದ್ದ ವಸ್ತುವನ್ನು ತೆಗೆದುಕೊಳ್ಳುವವನಂತೆ ವಿಶ್ವನಾಥ ಬಗ್ಗಿ ಅದನ್ನು ತೆಗೆದುಕೊಂಡು ಮನೆಯ ಕಡೆ ಹೊರಟ.

ವಿಶ್ವನಾಥ ಇಂತಹ ದುರಭ್ಯಾಸಕ್ಕೆ ಬಿದ್ದಿರುವನೆಂದು ಮಾಧವ

ರಾಯನಿಗೆ ಗೊತ್ತಿರಲಿಲ್ಲ. ಅವನು ಇದೇ ಮೊದಲಬಾರಿ ಅವನ ಈ ದುರ್ನಡತೆಯನ್ನು ಕೂಲಂಕಷವಾಗಿ ನೋಡಿ ಆಚ್ಚರಿಯಾದ. ಇವನ ಹಿಂಬಾಲಿಕೆಯನ್ನು ಆ ಮೂವರೂ ನೋಡಿದರು. ನವವಾಸನಾತೃಪ್ತಿಯನ್ನು ಅವಿಷ್ಕಾರ ಮಾಡಿದ್ದಾನೆಂದುಕೊಂಡರು. ಮದುವೆಗೆ ನಕಾರ ಮಾಡುತ್ತಿರುವುದಕ್ಕೆ ಇದೂ ಒಂದು ಕಾರಣ ಎಂದರಿವಾಯಿತು ಅವರಿಗೆ.

"ಆ ಹುಡುಗಿಯ ಭಾವ ಚಿತ್ರವನ್ನು ಪೂರ್ಣ ಅಚ್ಚಳಿಯದಂತೆ ಮನಸ್ಸಿನಲ್ಲಿ ತೆಗೆದುಕೊಂಡ ವಿಶ್ವನಾಥ" ಎಂದ ರೇಣುಕ. ಆಗ ಮಾಧು ರಾಗವಾಗಿ ಹೇಳಿದ "ಅವನು ಉತ್ತಮ ಕಲಾವಿದ. ಮನೆಗೆ ಹೋಗಿ ಅವಳ ಚಿತ್ರ ಬರೆಯಬೇಕೆಂದು . "

"ನಾನು ಅನೇಕ ಹುಡುಗರನ್ನು ನೋಡಿದ್ದೇನೆ ಅವರೂ ನೋಡುತ್ತಿರುತ್ತಾರೆ ಹೀಗಲ್ಲ ..ಇಂಥ ಹುಚ್ಚಿಲ್ಲ ಅವರಿಗೆ. ಕಾಲೇಜಿನ ಅನುಭವ ಇರುವ ನಿನಗೆ ನೋಟವಿ ಗೊತ್ತಿಲ್ಲ" ಎಂದ ರೇಣುಕ,

"ಈಗವನ ದುರಭ್ಯಾಸ ಕೈಮೀರಿದೆ ಸಾರ್. ಅವನ ಹಿಡಿತದಲ್ಲಿ ಅವನಿಲ್ಲ. ಹೇಗೆ ಬೆನ್ನಟ್ಟಿದ ... ನೋಡಿದರಲ್ಲ ನೀವು"

ಪ್ರೇಮಚಂದ್ರರು ಏನನ್ನೂ ಮಾತನಾಡುತ್ತಿದ್ದಿಲ್ಲ; ಅವರು ಇವನ ಈ ವಿಚಾರವಾಗಿ ಬಹುದಿವಸಗಳಿಂದ ಸಂಶೋಧನೆ ನಡೆಸಿದ್ದರು

"ಮಾಧು, ನೀನಿಂದು ನೋಡಿರಬಹುದು. ನಾನು ಮತ್ತು ಮೇಷ್ಟ್ರು ಒಂದು ದಿನವೆಲ್ಲಾ ಅವನ ನಡತೆ ಪರೀಕ್ಷಿಸಿದೆವು." ಎಂದು ಒಂದು ಮಂಗಳವಾರದ ಸಂತೆಯ ದಿನ ನಡೆದಿದ್ದನ್ನೆಲ್ಲಾ ವಿಶದವಾಗಿ ಹೇಳಿದ.

"ಛೆ! ಹಾಗಾದರೆ ಬಹಳ ತಯಾರಾಗಿದ್ದಾನೆ ಬಿಡಿ. ಅದಕ್ಕೆ ಅಷ್ಟು ಸಣಕಲಾಗಿದಾನೆ."

"ಹೀಗೆ ಹೆಂಗಸರನ್ನು ನೋಡುವುದಕ್ಕೂ ಆ ಕೃಶತೆಗೂ ಸಂಬಂಧವಿಲ್ಲ" ಎಂದರು ಪ್ರೇಮಚಂದ್ರ.

"ಮತ್ತೇನು ಇರಬಹುದು ಹೇಳಿ. ನೀವು ಆಗಲಿಂದ ಪರಾಂಬರಿಸಿ ನೋಡಿದರಲ್ಲಾ " ಎಂದ ರೇಣುಕ.

ಪ್ರೇಮಚಂದ್ರರು ಏನನ್ನೂ ಉತ್ತರಿಸಲಾರದಾದರು. ಅವರ ಮನಸ್ಸು ತೂಗುಯ್ಯಾಲೆಯಂತೆ ತೂಗಾಡುತ್ತಿತ್ತು. ಯಾವುದೇ ರೀತಿಯಿಂದಾಗಲಿ ವಿಶ್ವನಾಥನನ್ನು ಸನ್ಮಾರ್ಗಕ್ಕೆ ಹಚ್ಚಿ ಮನುಷ್ಯನನ್ನಾಗಿ

ಮಾಡಬೇಕು. ಇನ್ನೂ ಹೆಚ್ಚಿನ ಬಳಕೆ ಮಾಡಿಕೊಂಡು ಅದರ ಮೂಲವನ್ನು ಅವನಿಂದಲೇ ಬಿಡಿಸಿದರ ಚೆನ್ನ ಎಂದು ಧೇನಿಸಿ—

"ಹೇಗೇ ಆಗಲಿ ಅವರ ಮನೆಗೆ ಹೋಗೋಣ. ಸ್ವಲ್ಪ ಕೆಲಸವಿದೆ ಬರುತ್ತೀರಿ ತಾನೆ?" ಎಂದರು

"ಹೂಂ" ಎಂದು ಮೂವರೂ ಹೊರಟರು.

ವಿಶ್ವನಾಥ ಇನ್ನೂ ಮನೆಗೆ ಬಂದಿರಲಿಲ್ಲ. ಅವರ ತಾಯಿ ಇವರನ್ನು ಒಳಗೆ ಕುಳಿತುಕೊಳ್ಳಲು ಹೇಳಿದಳು 'ಲೇಖಕ' ಮಾಸಪತ್ರಿಕೆಯನ್ನು ಓದುತ್ತಾ ಕುಳಿತಿದ್ದ ಸಾಹಿತ್ಯ ಸಂಬಂಧ ವಿಚಾರವನ್ನು ಲೇಖನ ಒಂದರಲ್ಲಿ ರಸಪೂರ್ಣವಾಗಿ ಚರ್ಚಿಸಿತ್ತು. ಕೆಲವಂತಗಳನ್ನು ಆಯ್ದು ಗುರುತು ಹಾಕಬೇಕೆಂದು 'ಡ್ರಾ' ತೆಗೆದು ಲೇಖನಿಯನ್ನು ಹುಡುಕಿದರು ಲೇಖನಿಯ ಬದಲು ಕಟ್ಟೊಂದು ಸಿಕ್ಕಿತು ಕಟ್ಟನ್ನು ಉಚ್ಚಿ ನೋಡಿದರು. ಚಲನಚಿತ್ರ ನಟನಟಿಯರ ಭಾವಚಿತ್ರಗಳು, ನಗ್ನ ಚಿತ್ರಗಳು.

ವಿವಿಧ ಭಂಗಿಗಳಲ್ಲಿ ಬಣ್ಣಬಣ್ಣದ ಭಾವಚಿತ್ರಗಳು ಕಣ್ಣು ಕೋರೈಸುವಂತಿದ್ದವು. ಮೂವರೂ ನೋಡಿದರು.

"ನೋಡಿ, ಈ ಚಿತ್ರಗಳನ್ನು.." ಎಂದು ಪ್ರೇಮಚಂದ್ರರು ಮೇಲೆ ಒಗೆದರು. ಅವೆಲ್ಲಾ ಪಿಲ್ಲಿಯಾಗಿ ಬಿದ್ದವು. ಅದೇ ಹೊತ್ತಿಗೆ ಸರಿಯಾಗಿ ಕೋಣೆಯ ಬಾಗಿಲನ್ನು ಕಿರ್ರೆಂದು ತಗೆದು ವಿಶ್ವನಾಥ ಒಳಗೆ ಬಂದು, ಚಿತ್ರಗಳನ್ನು ನೋಡಿ ಮಂತ್ರ ಮುಗ್ಧನಾದ.

"ಏನು ವಿಶ್ವ, ಇದೆಲ್ಲಾ ಏನು ಕಥೆ ನಡೆಸಿರುವೆ. ವೃಥಾ ಕೆಟ್ಟು ಹೋಗುತ್ತಿರುವೆ. ಇದರಿಂದ ದುರ್ವಾರ ಪರಿಣಾಮ ನಡೆಯದೇ ಇರದು. ಈ ಚಿತ್ರಗಳು ನಿನ್ನ ನಡತೆಯ ಸಜೀವ ಸಾಕ್ಷಿ. ಹೀಗೆಲ್ಲಾ ಮಾಡಬಾರದು. ಇಂದ್ರಿಯ ನಿಗ್ರಹ ಶಕ್ತಿಯಿಲ್ಲದಿದ್ದರೆ ಲಗ್ನ ಮಾಡಿಕೊಳ್ಳಬೇಕು...." ಎಂದು ಚೆನ್ನಾಗಿಯೇ ಪ್ರೇಮಚಂದ್ರರು ಗದರಿಸಿದರು.

ವಿಶ್ವನಾಥನ ಮುಖ ಬೆವರಿತು. ಮಾಧವರಾವ್ ಮತ್ತು ರೇಣುಕ ನೆದುರಿಗೆ ಅವನಿಗೆ ಮುಖ ಭಂಗತವಾಯಿತು. ಆದ್ದರಿಂದ ಅವನು ಇನ್ನೂ ಲಜ್ಜಾ ಪೂರ್ಣನಾಗಿ ಏನೂ ಮಾತನಾಡದೇ ಹೋದ. ಆದರೆ ಏನನ್ನಾದರೂ ಉತ್ತರಿಸಬೇಕಾಗಿತ್ತು. ಕೊರಡಿಯಲ್ಲಿ ಪ್ರವೇಶಿಸಿ ಮನೆಯವರಂತೆ ವಿಚಾರಣೆಮಾಡುತ್ತಿದ್ದರು. ಅವರು ಪೋಲಿಸ್ ಇನ್ಸ್ಪೆಕ್ಟರ್

ಕಳ್ಳನನ್ನು ಕುರಿತು ಶೋಧಿಸುವಂತೆ ಶೋಧಿಸುತ್ತಿದ್ದರು.

"ಇವು ನನ್ನವಲ್ಲ, ಅನ್ಯರವು. ಅ....ಅ ...ಅವರು ನನಗೆ ತರಿಸಲಿಕ್ಕೆ ಹೇ.... ಹೇ.... ಳಿ.... ದ್ದ. . ರು" ಎಂದು ತೊದಲಿಸುತ್ತ ಬಾಯಿಬಿಟ್ಟ.

"ಇವನ್ನು ಯಾರಿಗೆ ಹೇಳುತ್ತೀಯೆ ವಿಶ್ವನಾಥ? ನಿಮ್ಮ ತಂದೆ ಬಳಿ ತಿಳಿಸಲೆ? ಮಲಿಯ ಹೊಟ್ಟೆಯಲ್ಲಿ ಇಲಿ ಹುಟ್ಟಿದಂತಾಯಿತು. ಲಗ್ನವಾಗಲು ಯಾಕಾಗಿ ಒಲ್ಲೆ ಎಂತೀಯೆ? ನಾನು ನಿನಗೆ ಅಣ್ಣ, ತಂದೆ, ಬಂಧು ಎಲ್ಲ. ನಿನ್ನ ಮನಸ್ಸಿನಲ್ಲಿರುವುದನ್ನು ತೆರದ ಹೃದಯದಿಂದ ಹೇಳು."

ಅದಕತ್ತಿನಲ್ಲಿ ಅಡಕೆ ಸಿಕ್ಕಹಾಗೆ ಆಗಿತ್ತು ಅವನ ಪರಿಸ್ಥಿತಿ. ಆ ತನ್ನ ನೈಜ ಜೀವನವನ್ನು ಹೇಳಲೆ? .. ಬೇಡ ಬೇಡ ....ಅದಂತೂ ಆಗದ ಮಾತು. ತನ್ನ ವಿಷಯದ ಬಗ್ಗೆ ಕೇಳಲು ಇವರು ಯಾರು? ತನ್ನನ್ನು ಕೇಳಲು ಸಂಬಂಧವಿಲ್ಲವೆಂದು ಕವಿಯುಳಿ? ಛೆ! ಅದಾಗದು. ಇವರು ಸಕಲ ಶಾಸ್ತ್ರಕೋವಿದರು. ಯಾವ ರೀತಿಯಾದರೂ ಈ ರೋಗವನ್ನು ನಿವಾರಣೆ ಮಾಡಬಲ್ಲರು. ಹೇಳಿಬಿಡುವುದೆ? ಬೇಡ, ಬೇಡ, ನೀನು ಹೇಳಿದರೆ ಮನುಷ್ಯನಾಗಲಾರೆ ಎಂದಿತು ಇನ್ನೊಂದು ಮನಸ್ಸು. ಮೊದಲನೆಯ ಮನಸ್ಸಿನ ಅಧೀನನಾದ ಅವನು. ಅಳುತ್ತಾ ನುಡಿದ: 'ಸಾರ್, ನಾನು ಹುಟ್ಟಲೇಬಾರದಾಗಿತ್ತು. ನಾನು ನನ್ನ ಜನ್ಮದಲ್ಲಿ ಬಹಳ ಕಷ್ಟ ಪಟ್ಟಿದೇನೆ. ನೋಡಿ, ನನಗೇನೂ ಆರ್ಥಿಕ ಕಷ್ಟವಿಲ್ಲ. ಮನೆಯಲ್ಲೂ ಯಾವ ತರಹದ ತೊಂದರೆ, ಪೀಡೆಗಳೂ ಇಲ್ಲ. ಆದರೂ ನಾನು ಬಹಳ ನೊಂದಿದೇನೆ. ದೇವರ ಕಣ್ಣು ನನ್ನ ಮೇಲೆ ಬೀಳಲಿಲ್ಲ."

ಇವನಿಗೆಂತಹ ತೊಂದರೆ ಕಷ್ಟಬಿದ್ದಿದೆಯೊ? ..ಯಾರು ಬಲ್ಲರು! ಅದನ್ನು ನಿವಾರಿಸಲು ತಾವಿರುವಾಗ ಲಜ್ಜೆಯಿಂದ ಯಾಕೆ ಹೇಳಬಾರದೆಂದೆಣಿಸಿ—

"ನಿನ್ನ ಕಷ್ಟಗಳೇನಿದ್ದರೂ ಹೇಳು. ಅದೇ ನಿನ್ನ ಪ್ರಣಯದ ವಿಚಾರವಿರಬಹುದು."

"ಅದಲ್ಲ. ನನಗೆ ಈ ಜನ್ಮದಲ್ಲಿ ಲಗ್ನವೇ ಬೇಡ."

"ಹಾಗಂದರೆ? "

ವಿಶ್ವನಾಥ ಮತ್ತೆ ಬಿಕ್ಕಿ ಬಿಕ್ಕಿ ಅಳುತ್ತಾ ಹೇಳಿದನು "ಇಲ್ಲಾ

ಸಾರ್, ವಿಧಿ ಈ ಜನ್ಮದಲ್ಲಿ ನಾನು ಲಗ್ನವಮಾಡಿಕೊಳ್ಳಬೇಕೆಂತ ಬರೆದಿಲ್ಲ. ನಿಮ್ಮನ್ನು ನೋಡಿದರೆ ನನಗೆ ಬಹಳ ಪ್ರೀತಿಯಾಗುತ್ತದೆ. ನನ್ನ ವಿಚಾರ ದಲ್ಲಿ ಕಳಕಳಿಯಿಂದ ಕೇಳುತ್ತೀರಿ. ಯಾರೂ ಇಂತೆ ಕೇಳುವುದಿಲ್ಲ. ಎಲ್ಲರೂ ಸಂತೋಷಪಡೋರ "

"ಪಕ್ಕದ ಮನೆಯವರಪ್ಪ. ನೀವೂ ಅವರೂ ಒಂದೇ ಮನೆಯ ವರಂತೆ ನಡೆದುಕೊಂಡು ಹೋಗುತ್ತೀರಿ. ಒಂದೇ ಮನೆಯವರು ಇದ್ದ ಹಾಗೆ ಇರುವುದಕ್ಕೆಂದೇ ಆಸ್ಥೆವಹಿಸಿ ಕೇಳುತ್ತಿರುವುದು. ಈಗಿಲ್ಲದಿದ್ದರೆ ನಾಳೆ ಅವರಿಗೆ ಹೇಳು. ಎಲ್ಲಾ ನಿವಾರಣೆ ಮಾಡುತ್ತಾರ" ಎಂದು ರೇಣುಕಪ್ರಸಾದ 'ಲೇಖಕ' ವನ್ನು ನೋಡುತ್ತಾ ಹೇಳಿದ.

"ಈ ಫೋಟೋ ಸುಟ್ಟುಬಿಡು. ಯಾಕೆ, ನಾನೇ ಸುಟ್ಟು ಬಿಡು ತ್ತೇನೆ" ಎಂದು ಉಪಾಧ್ಯಾಯರು ಬೆಂಕಿಕೊಟ್ಟು ಅದನ್ನು ಭಸ್ಮ ಮಾಡಿದರು.

ತನ್ನ ನಿಜವಾದ ಜೀವನವನ್ನು ನಾಚಿಕೆಯಿಂದ ಹೇಳಲೊಪ್ಪದೆ, "ಏನೂ ಹೆಚ್ಚಿಗೆ ಇಲ್ಲ. ದಾವಣಗೆರೆಯಲ್ಲಿದ್ದಾಗ ಖಾಯಿಲೆಯಾಗಿತ್ತು, ಅಷ್ಟೆ. ಯಾವುದಾದರೂ 'ಟಾನಿಕ್' ತಗೆದುಕೊಳ್ಳುವೆ" ಎಂದ ವಿಶ್ವನಾಥ.

"ದಾವಣಗೆರೆಗೆ ಹೋದಂದಿನಿಂದ ಕೃಶನಾಗಿಲ್ಲ. ಯಾವಾಗಲೂ ಹೀಗೇನೆ ಇದ್ದೀಯೆ" ಎಂದ ಮಾಧು

"ಅದೇನೋ ನಿಜ ಮಾಧು. ಆದರೆ ದಾವಣಗೆರೆಗೆ ಹೋದಂದಿ ನಿಂದ ಕೃಶತೆ ಜಾಸ್ತಿಯಾಗಿದೆ."

"ಪ್ರತಿದಿನ ವ್ಯಾಯಾಮ ಮಾಡಬೇಕು. ಬೆಳಗ್ಗೆ ನದಿಯಾಚೆಗೆ ಹೋಗಿ, ವ್ಯಾಯಾಮದ ಅನಂತರ ಸ್ನಾನವಮಾಡಿ, ಆ ಎಳೆಬಿಸಿಲಿಗೆ ಮೈ ಯೊಡ್ಡಿ ನಿಂತುಕೊಂಡರೆ ಎಂತಹದೇ ರೋಗವೇ ಇರಲಿ, ಕಿತ್ತು ಹೋಗುತ್ತೆ"

"ಹಾಗೆ ಮಾಡುವೆ. ನೀವು ..."

"ಓಹೋ! ನಾವೀಗ ನಿತ್ಯ ಹೋಗುತ್ತಿದ್ದೇವೆ."

"ಆಗಲಿ ಮಾಧು, ರೇಣುಕ. ನಾಳೆನಿಂದ ತಪ್ಪದೆ ಬರುತ್ತೇನೆ. ಜೀವಕ್ಕಿಂತ ಹೆಚ್ಚೇ. ಎಲ್ಲಿಯ ಮಾತು."

"ಆರೋಗ್ಯವೇ ಭಾಗ್ಯ. ಆರೋಗ್ಯಕ್ಕಿಂತ ಹೆಚ್ಚು ಯಾವುದಿದೆ?

ಆರೋಗ್ಯ ಇದ್ದರೆ ತಾನೆ ಬುದ್ಧಿ ಬೆಳೆಸಿಕೊಳ್ಳೋದು" ಎಂದು ಪ್ರೇಮ ಚಂದ್ರರು ನಾಣ್ಣುಡಿಯೊಂದನ್ನಿತ್ತು ಮಾತನ್ನು ಪುಷ್ಟೀಕರಿಸಿದರು.

"ರೇಣುಕ, ನಾವಿನ್ನು ಹೊರಡುವ. ಆದರೊಂದು ಕಡೆಯ ಮಾತು: ಇಂಥ ಚಿತ್ರಗಳ ವ್ಯವಹಾರ ಮಾತ್ರ ಎಂದಿಗೂ ಮಾಡದಿರು. ದುರ್ಜನರ ಸಂಘ ಬಿಡು" ಎಂದರು ಪ್ರೇಮಚಂದ್ರ.

"ಆಗಲಿ ಸಾರ್, ನೀವು ಈಗ ತಾನೆ ಸುಟ್ಟುಬಿಟ್ಟರಲ್ಲ" ಎಂದ.

"ನಾವಿನ್ನು ಬರುತ್ತೇವೆ, ಹೊತ್ತಾಯಿತು" ಎಂದು ಹೊರಟರು.

ನಾಳೆನಿಂದ ವ್ಯಾಯಾಮಮಾಡುವುದರಿಂದ ದೇಹ ದಾರ್ಢ್ಯವಾಗಿ ತಾನೊಬ್ಬ ಮನುಷ್ಯನಾಗಬಹುದೆಂದು ಕನ್ನೈದಿಲೆ ಅರಳುವಂತೆ ಅವನ ಮುಖ ಅರಳಿತು. ಜೀವನರಂಗದ ದ್ವಿತೀಯ ದೃಶ್ಯದಲ್ಲಿ ಕಾಲಿಡಬಹುದೆಂದು ನೆಮ್ಮದಿಯಾಗಿತ್ತು—ಆದರೆ 'ಅದರಿಂದ' ನಿರ್ಲಿಪ್ತ ನಾಗಿ ನಿತ್ಯ ವ್ಯಾಯಾಮ ಮಾಡಿದರೆ ಸಾಧ್ಯ ಎಂದು ನೆನಪಾದಾಗ ವಿಶ್ವನಾಥನಿಗೆ ಚೇಳು ಕಚ್ಚಿದಂತಾಯಿತು.

## ೮

ಮಾಲಿನಿ ಹೊಕ್ಕುತುಂಬುವ ಬಾವಿಯಿಂದ ಎರಡು ಕೊಡ ನೀರನ್ನು ಒಂದೇ ನಾರಿಗೆ ತರುತ್ತಿದ್ದಳು ಒಂದು ಸೊಂಟದಲ್ಲಿ, ಇನ್ನೊಂದು ಕೈಯಲ್ಲಿ. ಬೇಗ ನೀರಾಗುತ್ತದೆಂದು ಅವಳು ಹಾಗೆ ಮಾಡುತ್ತಿದ್ದಳು. ಈಗಾಗಲೇ ಅವಳು ಆರು ನಾರಿ ಹಾಗೆ ತಂದು ಹಾಕಿದ್ದಳು. ಇದು ಏಳನೆಯ ನಾರಿ ಬೇಗ ಬಂದು ಬಲಗೈಯಲ್ಲಿದ್ದ ಕೊಡವನ್ನು ಸಾಧ್ಯವಾದಷ್ಟು ಮೆಲ್ಲಗ ಹೊರಬಾಗಿಲಿನ ಹೊಸಲು ಕೊರಡಮೇಲಿಟ್ಟಳು. ಅವಳ ಕೈ ನೋಕಿತ್ತು; ಆದ್ದರಿಂದ ಹಾಗೆ ಮಾಡಿದ್ದಳು. ಮೆಲ್ಲಗೆ ಇಟ್ಟ ಸದ್ದು ಈ ದಿನ ಸಿದ್ಧಮ್ಮನಿಗೆ ಜೋರಾಗಿ ಪರಿಣಮಿಸಿತು, ಏಕೆಂದರ ಹರಿಹರದಿಂದ ಕಾಗದ ಒಂದು ಬಂದಿತ್ತು. ಮೊದಲೇ ಮನಸ್ಸು ಕೆಟ್ಟು ರಾಡಿಯಾಗಿತ್ತು.

"ಎಷ್ಟೊತ್ತೆ ಹೋಗೋದು ನೀನು ಹೋದವಳು ಬರಲಿ ಅಥವಾ ಬಿಡಲಿ, ಕೊಡಯಾಕೆ ನೆಗ್ಗುವಂತ ಕುಕ್ಕುತ್ತೀಯೆ?" ಎಂದಳು ಏರಿದ ಧ್ವನಿಯಲ್ಲಿ.

"ಇಲ್ಲ ಅತ್ತೆ, ಬಹಳ ಮೆಲ್ಲಗೆ ಇಟ್ಟೆ .ನಾನೇನು ಇಂದೇ ಈರೀತಿ ಇಡುತ್ತಿರುವೆನೇ" ಎಂದು ಸೌಮ್ಯವಾಗಿ ಉತ್ತರಿಸಿದಳು ಮಾಲಿನಿ.

"ಏನು, ಮಾತಿಗೆ ಪ್ರತಿ ಆಡಲಿಕ್ಕೆ ಸುರುಮಾಡಿದೆಯಲ್ಲ ನೀನೊಳ್ಳೆ ಮಾರಿ ಬಂದ ಹಾಗೆ ಬಂದು ಸೇರಿದೀಯೆ!"

ಆಕೆ ಅತ್ತೆಯ ಮುನಿಸಿನ ಜ್ವಾಲಾಮುಖಿಯನ್ನು ನೋಡಿ ಅಲ್ಲಿಗೇ ಸುಮ್ಮನಾದಳು ಈಗ ಎರಡು ವರ್ಷಗಳಲ್ಲಿ ಅತ್ತೆ ಎಂದೂ ತನ್ನ ವಿಷಯದಲ್ಲಿ ಈರೀತಿ ಸಿಟ್ಟುಮಾಡಿಕೊಂಡಿದ್ದಿಲ್ಲ. ಆದರೂ ಮಾಲಿನಿಯ ಮನಸ್ಸು ತಡೆಯದಾಯಿತು. ಸಿಟ್ಟೊಂದೇ ಮಾಡಿದ್ದರ ಸುಮ್ಮನಿರುತ್ತಿದ್ದಳು. ಅದರ ಜೊತೆ ಪಾತ್ರೆಗಳನ್ನು ಬಿರುಸಾಗಿ ಒಲೆಯ ಮೇಲೆ ಇಡುವುದು, ಹಸಮಾಡುವ ಮರವನ್ನು ಕುಕ್ಕುವುದು—ಏನೇನೂ ಇನ್ನೂ ರಾದ್ಧಾಂತ ನಡೆಸುತ್ತಿರುವದನ್ನು ನೋಡಿ ಕೇಳಿದಳು :

"ಯಾಕಾಗಿ ಅತ್ತೆ, ಇವೊತ್ತು ಮೈಯಲ್ಲಿ ಚೆನ್ನಾಗಿಲ್ಲವೆ ?"

"ಇರದೇನು ಮಾಡುತ್ತದೆ. ನೋಡು ಹೋಗಲ್ಲಿ, ನಿಮ್ಮಪ್ಪ ಕಾಗದ

ಹಾಕಿದಾನೆ. ಯಾರಿಗೆ ಕೂಳು ಸರಿಯಾಗಿ ಸೇರುತ್ತೆ" ಎನ್ನುತ್ತಾ ಕಾಗದ ಕೊಟ್ಟಳು.

"ಯಾರತ್ತೆ ತಂದು ಕೊಟ್ಟವರು ಅಂಚೆಯವ ಬರುವ ಹೊತ್ತಾಗಿಲ್ಲ"

"ಯಾರರ ತಂದು ಕೊಡಲಿ, ಮೊದಲು ಓದು, ಮಾದೇವಿ. ಇಸ್ಕೂಲು ಕಲಿತಿಯಂತಲ್ಲ."

ಮಾಲಿನಿದೇವಿಯ ಮುಖ ಅತ್ತೆಯ ಹಳಿಯುವಿಕೆಯಿಂದ ಪುನಃ ಕೆಂಪೇರಿತು. ತುಟಿಗಳು ಕಂಪಿಸಿದವು, ಮೈ ನಡುಗಿತು. ಕಾಗದವನ್ನು ನಿದಾನವಾಗಿ ಓದಿದಳು ಕಾಗದ ಶಿವಣ್ಣಯ್ಯನವರಿಂದ ಬರೆಯಲ್ಪಟ್ಟಿತ್ತು.

ಅದೊಂದು ಚಿಕ್ಕ ಚರಿತ್ರೆಯಂತಿತ್ತು. ತನ್ನ ವಿವಾಹದ ಮೊದಲಿನಿಂದ ಹಿಡಿದು ಸಾರಾಸಾರವಾಗಿ ಕೊನೆಯ ಘಳಿಗೆಯವರೆವಿಗೂ ಉಮಾಪತಿ ಮಾಡಿದ ಕುತಂತ್ರಗಳನ್ನು ಅವರು ಬರೆದಿದ್ದರು. ಎಲ್ಲವನ್ನೂ ವಿಶದವಾಗಿ ಬರೆದು ಕೊನೆಯದಾಗಿ ಮಾಲಿನಿಗೆ ಬುದ್ಧಿವಾದದ ಮಾತುಗಳನ್ನು ಬರೆದಿದ್ದರು. ಗಂಡನ ಮನೆಯಲ್ಲಿ ನಡೆದುಕೊಳ್ಳುವ ರೀತಿಯನ್ನು ಮನಸ್ಸಿಗೆ ಅಂಟುವಂತೆ ಲಿಖಿಸಿದ್ದರು ಮಾಲಿನಿ ಎಲ್ಲವನ್ನೂ ಓದಿದಳು. ಎರಡು, ಮೂರುಬಾರಿ ಓದಿದಳು. ಅವರು ಬರೆದ 'ತಾಯಿ, ನನ್ನ ಸತ್ತ ಒಂಭತ್ತನೆಯ ದಿನವನ್ನು ಮಾಡಿದ್ದೇನೆಂದು ತಿಳಿದುಕೊ' ಎಂಬ ವಾಕ್ಯ ಕಣ್ಣೀರನ್ನು ಚಿಮ್ಮಿಸಿತು.

ಆ ಪತ್ರದಲ್ಲಿ ಯಾರಿಗೂ ವೇದನೆಯಾಗುವ ಅಸಹ್ಯ ಮಾತುಗಳಿಲ್ಲದಿದ್ದರೂ, ಉಮಾಪತಿ ಪತ್ರಬರೆಯುವ ದಿನದವರೆವಿಗೂ ಮಾಡಿದ್ದ ಹೃದಯವಿದ್ರಾವಕ ಕೆಲಸಗಳನ್ನೆಲ್ಲ ಅವರು ಬರೆದಿದ್ದರು. ಆದ್ದರಿಂದ ಉಮಾಪತಿಯ ಹೊಟ್ಟೆಯಲ್ಲಿ ಮೆಣಸಿನಕಾಯಿ ಮುರಿದ ಹಾಗಾಗಿತ್ತು. ಪತ್ರವನ್ನು ನೋಡಿ ಕೊಟ್ಟು ಅವನು ಘೂರ್ಮಿಸಿದ್ದನು ಆಗ ತಾಯಿ ಸಿದ್ಧಮ್ಮ ಹೇಳಿದಳು: "ನನ್ನನ್ನು ಕೇಳದೆ ಹೋಗಿ ಮಾಡಿಕೊಂಡಿದ್ದಕ್ಕೆ ಅನುಭವಿಸು. ಗುರುಹಿರಿಯರೆಂಬುದು ನಿನಗೆ ಅರಿವಿತ್ತೇನು...." ಎಂದು ಬೆದರಿಸಿ ಕಳುಹಿಸಿದ್ದಳು.

ಮಾಲಿನಿ ಇನ್ನೂ ಪತ್ರ ಮುಗಿಸಿರಲಿಲ್ಲ ಹೇಮಗಿರಿ 'ಇಸ್ಪೇಟ್' ಆಡಲಿಕ್ಕೆ ಹೋಗಿದ್ದ. ಅವನೂ ಬಂದ. ಹೇಮಗಿರಿ, ಬಸಪ್ಪ, ಸಿದ್ಧವೀರಯ್ಯ ಈ ಮೂವರೂ ಒಬ್ಬೊಬ್ಬರೊಬ್ಬರು ಅಗಲಿರುತ್ತಿದ್ದಿಲ್ಲ. ತವ್ಮಿಬ್ಬ

ಗಿಂತ ಬಸಪ್ಪನನ್ನು ಇವರು ತುಂಬಾ ಬುದ್ಧಿವಂತನೆಂದು ಪರಿಗಣಿಸಿದ್ದರು. ಅವನು ಸೀನಿಯರ್ ಇಂಟರ್‌ನಲ್ಲಿ ಕನ್ನಡ ಒಂದನ್ನು ಪಾಸು ಮಾಡಿ ಕೊಂಡಿದ್ದ ಆದ್ದರಿಂದ ಹೇಮಗಿರಿ, ಸಿದ್ಧವೀರಯ್ಯ ಇವರು ಇವನನ್ನು ತುಂಬಾ ಪ್ರೀತಿಸುತ್ತಿದ್ದರು. ಸದಾ ಅವನೊಡನೆ 'ಇಸ್ಪೀಟು' ಆಡು ತ್ತಿದ್ದರು. "ಪತ್ರ ಯಾವುದು? ಕೊಡಿ ಇಲ್ಲಿ" ಎಂತಲೇ ಹೇಮಗಿರಿ ಬಂದು ಓದಿದ. "ಮಹಾ ಲೇಖಕರು ಬರೆದ ಹಾಗೆ ಬರೆದಿದ್ದಾನೆ ಶಿವಯ್ಯ" ಎಂದ ಓದಿ ಮುಗಿಸಿ ರೇಗಿದ ಧ್ವನಿಯಲ್ಲಿ. ಊಟಮಾಡಲಿಕ್ಕೆಂದು ಬಂದ ಉಮಾಪತಿ, ಹೇಮಗಿರಿಯ ಮಾತನ್ನು ಕೇಳಿ

"ಶಿವಯ್ಯೆಂದಲ್ಲದು ಆ ರೇಣುಕಂದು. ಅವನೇನೋ ಕಥೆ ಬರೆ ಯುತ್ತಾನಂತೆ, ಪದ್ಯ ಬರಿತಾನಂತೆ."

"ಬೆಂಕಿ ಹಚ್ಚಿತು, ಅವನ ತಲೆ ನಮಗೂ ಸಹ ಕಾಗದ ಬರೆಯಲಿಕ್ಕೆ ಬರುವುದಿಲ್ಲೇನು? ಬಸಪ್ಪನ ಕೈಲಿ ಬರೆಸಿ ಹಾಕುತ್ತೇನೆ ನೋಡು. ಅವನ ತಲೆ ಅದರಿ ಹೋಗಬೇಕಲ್ಲ. ಹೋಗಲಿ" ಎಂದು ಹೊರಡನುವಾದ.

"ಕೊಂಚ ತಾಳು, ಮಗು. ಕುಳಿತು ಮಲಗಿಕೋಪ್ಪ. ಯಾಕಷ್ಟು ಅವಸರ" ಎಂದಳು ಮುದುಕಿ.

"ಊರಿನಲ್ಲೆಲ್ಲಾ ಡಂಗುರ ಹೊಡೆಯಲಿಕ್ಕೆ ಯಾಕೆ ಹೋಗು ತ್ತೀಯೆ. ನೀನೆ ಬರೆಯಲಿಕ್ಕೆ ಬರಲ್ಲವೆ?" ಎಂದು ತಮ್ಮನ ಮುಖವನ್ನು ನೋಡುತ್ತ ಉಮಾಪತಿ ಹೇಳಿದ.

"ನನಗೆ ಬರುವುದಿಲ್ಲ. ಬಂದರೂ ಈ ಪತ್ರಕ್ಕೆ ಸರಿಯಾಗಿ ಬರೆಯ ಲಾರೆ. ಈ ಊರಿನ ಲೇಖಕಪಟು ಬಸಪ್ಪನೇ ಸೈ..." ಎಂಬ ಅರ್ಥ ಬರುವಂತೆ ಮುಖಮಾಡಿ ತುಟಿಯನ್ನು ಅಲುಗಾಡಿಸಿದ.

"ಯಾಕೆ ಎಸ್. ಎಸ್. ಎಲ್. ಸಿ. ವರೆವಿಗೆ ಈ ಬುದ್ಧಿವಂತಿಕೆ ಗಳಿಸಲು ಓದಿದೆಯೊ!"

ಹೇಮಗಿರಿಯ ಮುಖ ಮುರಿದ ಹಾಗಾಯಿತು. ಅವನು ಅಲ್ಲಿರದೆ ಹೊರಟು ಹೋದ. ಸಿದ್ಧಮ್ಮ ಮುದ್ದೆಗೆ ಎಸರಿಟ್ಟು ಒಲೆಯ ಮುಂದೆ ಕುಳಿತುಕೊಂಡಳು.

"ಏನೇ ...ಏನೇ, ಈ ಪತ್ರಕ್ಕೆ ಏನು ಮಾಡೋಣ" ಎಂದ ಉಮಾ ಪತಿ ದೇವರ ಕೋಣೆಯಲ್ಲಿ ನೆಲಸಾರಿಸುತ್ತಿದ್ದ ಮಾಲಿನಿಯನ್ನು ಕುರಿತು.

ಅವಳಿಗೆ ಮನಸ್ಸು ಕದಡಿದಂತಾಗಿತ್ತು. ತನ್ನ ತೌರುಮನೆಯ ಕಡೆಗೆ ಅವಳ ಮನಸ್ಸು ಸುಳಿಯುತ್ತಿತ್ತು. ತಾನಿನ್ನು ಆ ಮನೆಯ ಕಟ್ಟೆಯನ್ನು ಮೆಟ್ಟುವ ಹಾಗಿಲ್ಲ. ಸೆಗಣಿ ರಾಡಿಯಲ್ಲಿ ಕಣ್ಣೀರ ಹನಿ ತುಂತುರು ತುಂತುರಾಗಿ ಬೀಳುತ್ತಿದ್ದವು. ಗಂಡನ ಕೂಗು ಅವಳಿಗೆ ಕೇಳಿ ಬರಲಿಲ್ಲ.

"ಏನೇ, ಏನು ಮಾಡುತ್ತೀಯೆ ..." ಎನ್ನುತ್ತ ದೇವರ ಕೋಣೆಗೆ ಉಮಾಪತಿ ಬಂದ.

"ಕೊಂಚ ಅಲ್ಲಿಯೇ ಇರಿ. ಎಲ್ಲಿ ಓಡಾಡಿ ಬಂದ ಕಾಲೋ ಏನೊ. ನೆಲ ತುಳಿಯಬೇಡಿ ಅಂದರೆ .. ." ಎಂದು ಎದ್ದು ನಿಂತಳು ಉಮಾಪತಿಯನ್ನು ತಡೆಯುವ ಭಂಗಿಯಲ್ಲಿ.

"ನಿಮ್ಮ ಅಪ್ಪನ ಕಾಗದ ನೋಡಿ ಸಿಟ್ಟು ಬಂದು ಅಳುತ್ತಿದೀಯೇನು?"

"ಅವರ ಕಾಗದ ಬಂದರೆ ಯಾಕೆ ಅಳಲಿ. ನಾನ್ಯಾವಗಲೋ ತೌರು ಮನೆ ಆಸೆ ಬಿಟ್ಟಿರುವೆ."

ಮಾಲಿನಿಯ ಮಾತು ಕೇಳಿ ಅವನಿಗೆ ಸಂತೋಷ ಉಕ್ಕಿಬಂತು.

"ಈಗ ನಾನು ಹೇಳಿದಂತೆ ಕೇಳಬೇಕು. ಹುಂ, ಆ ಕಾಗದ........ ಯಾವುದು ಹೇಳು ?"

"ನಾನು ಮೊದಲು ಹಾಕಿದ್ದಸೆಲ್ಲ .."

"ಹೂ, ಜಾಣಮರಿ ಅದು. ಅದನ್ನ "ನಾನು ಸ್ವಂತ ಹಾಕಿದ್ದೇನೆ ಎಂತ ಹೇಳಬೇಕು. ಅವರು ಬರೆಸಿದರೂಂತ ಸಮಯ ಬಂದಾಗ ಏನಾದರೂ ಹೇಳಿದರೆ...."

ಮಾಲಿನಿ ಗಂಡನ ಮಾತನ್ನು ಅಲ್ಲಿಗೇ ತಡೆದು "ಹೇಳಿದರೆ ಏನು ಮಾಡುತ್ತೀರಿ?...."

"ಏನು ಮಾಡುತ್ತೀನೆಂತ ಹೇಳಿ ಅನುಭವಿಸು. ಹಾಗೆಲ್ಲಾ ಹೇಳಬೇಡ ಗೊತ್ತಾಯಿತೇ? ನಮ್ಮ ಮಾನ—ಮರ್ಯಾದೆ ಹೋಗೋ ಕೆಲಸಕ್ಕೆ ಕೈ ಹಾಕಬಾರದು."

"ಹೂ. ಆಗಲಿ ನಾನೇ ಬರೆದೆ ಎಂತ ಹೇಳುತ್ತೇನೆ, ಆಯಿತೇ."

"ಬಂಗಾರದ ಬಳೆ ಬಿಚ್ಚಿಕೊಡು ಹಾಗಾದರೆ."

"ಯಾಕೆ?"

"ನಿನ್ನೆ ರಾತ್ರಿ ಹೇಳಿದ್ದೆನಲ್ಲ....ವಯ್ಯಾರ ಮಾಡಬೇಡ, ಕೊಡು"

ಹೇಮಗಿರಿಯ ಆಪರೇಷನ್ ಖರ್ಚಿಗಾಗಿ ಸುಮಾರು ಐದುನೂರು ರೂಪಾಯಿಗಳು ಬೇಕಾಗಿದ್ದವು. ಅದಕ್ಕೋಸ್ಕರ ಬಂಗಾರದ ಬಳೆಗಳನ್ನು ಮಾರಿ ಒದಗಿಸಬೇಕೆಂದೂ ಅವುಗಳನ್ನು ಬೆಳಗ್ಗೆ ಕೊಡಬೇಕೆಂದೂ ಗಂಡ ಹೇಳಿದ್ದು ಅವಳ ಜ್ಞಾಪಕಕ್ಕೆ ಬಂದಿತು.

"ಕೊಂಡೊಯ್ಯಿರಿ. ನಾ ಇಲ್ಲಾಂದೆನೆ ಏನೋ ಮರೆತು ಹೋಗಿತ್ತು. ಆ ಕಾಗದ ಬಂದಾಗಿನಿಂದ ಮನಸ್ಸಿಗೆ ನೆಮ್ಮದಿಯೇ ಇಲ್ಲ ಅಂದಹಾಗೆ ಹೇಮಣ್ಣನ ಆಪರೇಷನ್‌ಗೆ ಹಾವೇರಿಗೆ ಹೋಗಬೇಕೆಂತ ಮಾಡಿರುವಿರೋ ಅಥವಾ ದಾವಣಗೆರೆಗೋ ..."

"ದಾವಣಗೆರೆಯಲ್ಲಿ ಸರ್ಜನ್ ಇದಾರೆ. ಅಲ್ಲಿಗೆ ಕರೆದುಕೊಂಡು ಹೋಗಬೇಕು. ಎಷ್ಟು ಖರ್ಚು ಬರುತ್ತೆಯೊ ದೇವರೊಬ್ಬ ಬಲ್ಲ!"

"ಎಷ್ಟಾದರೂ ಖರ್ಚಾಗಲಿ. ವಾಸಿಯಾದರೆ ಸಾಕು."

ಅಷ್ಟುಹೊತ್ತಿಗೆ ಸರಿಯಾಗಿ ಅಲ್ಲಿಗೆ ಹೇಮಗಿರಿ ಬಂದ. ಇನ್ನೂ ಬರುತ್ತಲೇ ಹೇಳಿದ. "ಅಣ್ಣ, ಬಸಪ್ಪ ಕಂಡಿದ್ದ. ಇಬ್ಬರೂ ಸೇರಿ ಮಧ್ಯಾಹ್ನ ಕಾಗದ ಬರೆಯೋಣ ಎಂತ ಹೇಳಿದ."

"ಸರಿಯಾಗಿ ಬರೆಯಬೇಕು. ಅವರ ಪತ್ರದ ಪ್ರತಿ ಶಬ್ದಕ್ಕೂ ಉತ್ತರ ದಬಾಯಿಸಬೇಕು."

ಹೇಮಗಿರಿ ತಲೆಯಾಡಿಸಿದ.

ಆ ದಿನ ಮಧ್ಯಾಹ್ನವೆಲ್ಲಾ ಈ ದುಷ್ಟ ಚತುಷ್ಟಯ ಕುಳಿತು ಬರೆದರೂ ಕಾಗದ ಮುಗಿಯಲಿಲ್ಲ. ಹೇಮಗಿರಿ ಅಷ್ಟಕ್ಕೇ ಅದನ್ನು ಬಿಟ್ಟು ಬಂದು ದಾವಣಗೆರೆಗೆ ಹೋಗಬೇಕಾಗಿದ್ದುದರಿಂದ ಬಟ್ಟೆ ಮತ್ತು ಸಾಮಾನುಗಳನ್ನು ನಾಲ್ಕು ದಿವಸ ಮುಂಚಿತವಾಗಿ ಸಿದ್ಧಮಾಡಲು ಪ್ರಾರಂಭಿಸಿದ. ಸುಮಾರು ಮೂರು ನಾಲ್ಕು ತಿಂಗಳು ಇರಬೇಕಾಗಿದ್ದುದರಿಂದ ಚಟ್ನಿಪುಡಿ, ಖಾರದ ಪುಡಿ, ಸಾಂಬಾರ, ಉಪ್ಪಿನಕಾಯಿ ಇತ್ಯಾದಿಗಳನ್ನು ಹೆಚ್ಚಾಗಿ ಮಾಡುವಂತೆ ಮನೆಯಲ್ಲಿ ಹೇಳಿದ್ದ. ಸಿದ್ಧಮ್ಮ ಚಟ್ನಿಪುಡಿ ಕುಟ್ಟುತ್ತಾ ನಡುನಡುವೆ ಸೀನುತ್ತಾ ಕೇಳಿದಳು:

"ಕಾಗದ ಬರೆಯೋದು ಮುಗಿಯಿತೆ ಹೇಮಾ?"

"ಇಷ್ಟು ಬೇಗ ಅದು ಹೇಗೆ ಬರೆಯಲಿಕ್ಕೆ ಸಾಧ್ಯ? ನಾಳೆ ದಿವಸ ಮಧ್ಯಾಹ್ನ ಮುಗಿಸಿ, ನಿಮ್ಮೆಲ್ಲರೆದುರಿಗೂ ಓದಿ 'ರಿಜಿಸ್ಟರ್' ಮಾಡಿಸಿ

ಬಿಡುತ್ತೇವೆ” ಎಂದ.

“ಅಲ್ಲ, ಬರೆಯುವುದು ಆಯಿತೇಂತ ಕೇಳಿದೆ”

“ಊಹೂ, ಇನ್ನೂ ಆಗಿಲ್ಲ.”

“ಏನೆಂದು ಬರೆದಿರುತ್ತೀರಿ ಹೇಮಣ್ಣ” ಎಂದಳು ಮಾಲಿನಿ ಯಾತನೆಯ ಧ್ವನಿಯಲ್ಲಿ.

“ನಾಳೆಯಂದು ಹೇಳುವೆ. ಈಗ ಹೇಳಲು ಮನಸೊತ್ತಿಲ್ಲ. ಹೇಳಿದರೂ ಅದರ ಸಾರ ಹೋಗಿ ಬಿಡುತ್ತೆ. ಸುಮಾರು ಹತ್ತು ಪುಟಗಳಾಗಬಹುದು.”

“ಬಸವಣ್ಣನ ಹತ್ತಿರ ಯಾಕೆ ಬರೆಸಬೇಕಿತ್ತು? ಅವನೊಬ್ಬನಿಗೆ ಈ ವಿಚಾರ ತಿಳಿದು, ಊರಿನಲ್ಲೆಲ್ಲಾ ಹರಡಿದರೆ....”

“ಹಾಗಾದರೆ ನೀನು ಬರೆ....” ಎಂದಳು ಸಿದ್ಧಮ್ಮ ಏರಿದ ಧ್ವನಿಯಲ್ಲಿ.

“ಹಾಗೆ ಅರ್ಥ ಬರುವ ರೀತಿಯಲ್ಲಿ ನಾನು ಮಾತನಾಡಿದೆನೆ? ಹೇಮಣ್ಣನಾಗಲಿ ಅವರಾಗಲಿ ಬರೆದಿದ್ದರೆ ಸಾಕಿತ್ತು.”

“ನಮಗೆ ಹಾಗೆ ಹೀಗೆ ಅಂಥ ಮಾತಾಡಲು ಬರೋದಿಲ್ಲ. “ಮೈಸೂರು ಜಾಲ ಮನೆಗೆ ಮೂಲ” ಎಂತ ಚಂದಕ್ಕೆ ಹೇಳುತ್ತಾರೇನು.”

“ನಾನೇನು ಹೇಳಿದೆ ಅತ್ತೆಯವರೆ?”

“ನೀನೇನು ಹೇಳಿದೆ! ನಮಗೆ ಬುದ್ಧಿ ಹೇಳಲಿಕ್ಕೆ ಬರುತ್ತೀಯೆ!”

ಮಾಲಿನಿಯ ಮಾತು ಹೇಮಗಿರಿಗೆ ನಿಜವೆನ್ನಿಸಿತು. ಆದರೆ ಅದಕ್ಕೆ ಉತ್ತರವನ್ನು ಸರಿಯಾಗಿ ಬರೆಯಲು ಅವನು ನಿಸ್ಸಹಾಯಕನಾಗಿದ್ದ. ಈಗ ಮಾಲಿನಿಯ ಮಾತು ಕೇಳಿ,

“ಹಾಗೇನೂ ತಿಳಿಯಬೇಡತ್ತಿಗೆ. ಬಸಣ್ಣನೂ ನಮ್ಮ ಮನೆಯವನಿದ್ದ ಹಾಗೆಯೇ ಸರಿ. ಯಾರೆದುರಿಗೂ ಹೇಳೋದಿಲ್ಲ” ಎಂದು ಸಮಾಧಾನಪಡಿಸಿದ.

ಮಾರನೆಯ ದಿವಸವೆಲ್ಲಾ ಇಡಿಯಾಗಿ ತೆಗೆದುಕೊಂಡು ಕಾಗದ ಬರೆಯುವುದನ್ನು ಈ ಗೆಳೆಯರು ಮುಗಿಸಿದರು. ಕಾಗದವನ್ನು ಮನೆಯಲ್ಲಿ ಮೊದಲು ತೆಗೆದುಕೊಂಡು ಬಂದು ಓದಿದವನು ಹೇಮಗಿರಿ. ಆ ದಿನ ರಾತ್ರಿ ಊಟವಾದನಂತರ ಎಲ್ಲರೂ ಒಂದು ಕಡೆಗೆ ಚಾಪೆಯನ್ನು

ಹಾಸಿಕೊಂಡು ಕುಳಿತರು. ಮೊದಲಿನ ಪಂಕ್ತಿಯಿಂದ ಹಿಡಿದು ಕೊನೆಯ ಪಂಕ್ತಿಯವರೆವಿಗೂ ವಿಶದವಾಗಿ ಕಂಚಿನ ಧ್ವನಿಯಂತೆ ಹೇಮಗಿರಿ ಕಾಗದ ಓದಿದ ಆ ಹತ್ತು ಪುಟಗಳನ್ನು ಎಲ್ಲೂ ಬಿಡದೆ ಉಸಿರುಕಟ್ಟುವ ಹಾಗೆ ಓದಿ, ಕೊಂಚ ನೀರು ತರಿಸಿಕೊಂಡು ಕುಡಿದ ಎಲ್ಲರೂ ಚೆನ್ನಾಗಿದೆ ಎಂದರು ಮಾರನೆಯ ದಿನವೇ ಉಮಾಪತಿ ತನ್ನ ಸ್ವಯಂ ಅಕ್ಷರಗಳಲ್ಲಿ ಅದನ್ನು ಬರೆದು 'ರಿಜಿಸ್ಟರ್' ಮೂಲಕ ಕಳುಹಿಸುವುದೆಂದು ನಿರ್ಧರ ವಾಯಿತು.

ಅಂದು ರಾತ್ರಿ ಮಾಲಿನಿಗೆ ನಿದ್ದೆ ಹತ್ತಲಿಲ್ಲ. ಆ ಪತ್ರದ ಪ್ರತಿ ಯೊಂದು ಶಬ್ದಗಳೂ ಅವಳ ಕರುಳನ್ನು ಕುಯ್ಯುವಹಾಗಿದ್ದವು. ಎಂತಹ ವರು ಓದಿದರೂ ಕ್ರುದ್ಧರಾಗುವ ರೀತಿಯಲ್ಲಿತ್ತು ಬರವಣಿಗೆ ಕ್ರುದ್ಧತೆಯ ಜೊತೆಗೆ ತಡೆಯಲಾರದ ಯಾತನೆಯೂ ಹುಟ್ಟುವ ಸಂವಿಧಾನವಲ್ಲಿ ಪತ್ರ ಬರೆಯಲ್ಪಟ್ಟಿತ್ತು.

ತನ್ನ ತಂದೆಯ ಪತ್ರವನ್ನೂ ಇವರ ಪತ್ರವನ್ನೂ ಮಾಲಿನಿ ಹೋಲನೆ ಮಾಡಿದಳು ಮನಸ್ಸಿನಲ್ಲಿಯೇ ಅದೆಷ್ಟು ವ್ಯತ್ಯಾಸ? ಅಜಗಜಾಂತರ ವ್ಯತ್ಯಾಸ—ಭೂಮಿ ಆಕಾಶಗಳ ತಾರತಮ್ಯ—ನಕ್ಷತ್ರದಷ್ಟು ದೂರ— ಅದರಲ್ಲಿ ಬುದ್ಧಿಯ ಉದ್ಬೋಧಕ ಮಾತುಗಳಿದ್ದರೆ, ಇದರಲ್ಲಿ ಹೃದಯ ವನ್ನು ಕೋಪಾಗ್ನಿಯಲ್ಲಿಟ್ಟು ಸುಟ್ಟಂತೆ ಭಾಸವಾಗುವ ವಾಕ್ಯಗಳು. ಹೀಗಿರುವಾಗ ಅವಳಿಗೆ ನಿದ್ದೆ ಹೇಗೆ ತಾನೆ ಬಂದೀತು? ಆಕೆ ಕಣ್ಣೀರ ಕೋಡಿಯನ್ನು ಹರಿಸಿದಳು .. ....

—ಆದರೆ ಅವರ ಮೆಚ್ಚಿಕೆಗೆ ಪಾತ್ರಳಾಗಬೇಕಾಗಿದ್ದರಿಂದ ಓಲೆ ತುಂಬಾ ಚೆನ್ನಾಗಿದೆಯೆಂದು ಅವಳೂ ಸಮ್ಮತಿಸಿದಳು ಸಮ್ಮತಿಸದೆ ವಿರುದ್ಧ ಮಾತುಗಳನ್ನು ಆಡಿದ್ದೇನಾದರೂ ಉಮಾಪತಿಗೆ ತಿಳಿದು ಬಂದರೆ, ಮೈ ಹಸಿರು ನೆಡುವವರೆವಿಗೆ ಹೊಡೆಯುವನೆಂದು ಆಕೆ ಬಲ್ಲಳು. ಈ ಹಿಂದೆ ತೌರುಮನೆಯಲ್ಲಿಯೇ ಆಕೆಯನ್ನು ಅವನು ಮೈ ಹಸಿರು ನೆಡು ವಂತೆ ಹೊಡೆದಿದ್ದ. ಈಗಲೂ ಹಾಗೆಯೇ ತಬ್ಬಲಿ ಮಗಳಿಗೆ ಹೊಡೆದರೆ, ಯಾಕೆ ಹೊಡೆದೆ—ಎಂದು ಕೇಳುವವರಾರು? ಆ ದೀರ್ಘ ಪತ್ರದ ಪ್ರತಿ ಯೊಂದು ವಾಕ್ಯಗಳು ಸ್ಮೃತಿಗೆ ಬರದೇ ಇದ್ದರೂ ಅದರ ಸಾರಾಂಶ ಅವಳ ನೆನಪಿಗೆ ಬಂತು.

"ತೇಜೋಪಹತಿಯಿಂದ ಜರ್ಝರಿತರಾದ ಹಾಗೂ ವಿಚಾರಶೂನ್ಯತೆಯಿಂದ ಬಡಬಡಿಸುತ್ತಿರುವ ಮಾವನವರ ಸನ್ನಿಧಿಗೆ—

ನಿಮ್ಮ ಹುರುಳಿಲ್ಲದ ಆಲಾಪಣ ಪತ್ರದ ಕಂತೆ ಈ ದಿನವೇ ನನ್ನ ಕರಗತವಾಗಿ ನಿಮ್ಮ ರೋದನದ ಕಾರಣ ತಿಳಿಯದೆ ಭ್ರಾಂತನಾದೆ

ವಿಧಿಯನ್ನು ದೂರುತ್ತಾ ಮಗಳನ್ನು ಹರಸುವುದೇಕೆ? ವಿಧಿಯ ಕ್ರೂರ ಕಟಾಕ್ಷವು ಎಲ್ಲರಿಗೂ ಬರಲೆಂದು ನೀವು ದ್ವಂದ್ವಾರ್ಥದಿಂದ ಹೊಗಳಿ ಆಶೀರ್ವದಿಸಿದಂತೆ ತೋರುತ್ತದೆ.

ಇನ್ನೊಬ್ಬ ಮಗಳಿಗೆ ಆದರದಿಂದ ಅಳಿಯನನ್ನು ಅರಿಸಿ, ಬಹು ವಿಜೃಂಭಣೆಯಿಂದ ಲಗ್ನಮಾಡಿಕೊಟ್ಟಿರುವಿರಿ. ಇದು ಎಲ್ಲರಿಗೂ ಗೊತ್ತಿದೆ. ಅಳಿಯನ ಖರ್ಚು ಸ್ವಲ್ಪವೂ ಇಲ್ಲ. ಹಾಗಾದುದರಿಂದಲೇ ಈ ಗೋಳಲ್ಲವೇ? ನಿಮ್ಮ ನಮೂನೆಯ ಲಗ್ನವನ್ನು ಏನೊಂದೂ ಗತಿ ಇಲ್ಲದ ನಿರ್ಗತಿಕಳಾದ ಸಹಾಯಶೂನ್ಯ ಸ್ತ್ರೀ ಸಹ ಮಿಗಿಲಾಗಿ ಮಾಡಿಕೊಡಬಲ್ಲಳು. ಗುರುಹಿರಿಯರಿಬ್ಬರದೆ ಏಳು ಮಂದಿ ಮಾತ್ರ ಬಂದು ಲಗ್ನ ತೀರಿಸಿಕೊಂಡು ಹೋಗಿರುವಿರೆಂದು ಬರೆದಿರುವಿರಿ. ಬಂದ ನಮ್ಮ ಪಾಡು ನಮಗೆ ಮಾತ್ರ ಗೊತ್ತುಂಟು. ಇನ್ನು ಗುರುಹಿರಿಯರಿಂದ ಆಗದಿ ಸಿದ್ಧರೆ ಮರ್ಯಾದೆಗೆ ಯಾವ ಸ್ಥಾನವಿತ್ತು? ನೀವೇ ಆಲೋಚಿಸಿಕೊಳ್ಳಿ. ಇಷ್ಟೆಲ್ಲಾ ಕೊಳಕನ್ನು ತುಂಬಿಟ್ಟುಕೊಂಡು "ನಾವು ಹಾಗೇ, ನೀವು ಹೀಗೆ" ಎಂದು ಬಡಿವಾರಮಾಡಿ ಬರೆಯಲು ನಿಮಗೆ ನಾಚಿಕೆಯಾಗುವುದಿಲ್ಲವೆ?

ನನ್ನ ಪರಮ ಶತ್ರು ದಾಯಾದಿಯ ಮನೆಗೆ ಆಗಾಗ್ಗೆ ಹೋಗುತ್ತಾ ಬರುತ್ತಾ ಮಾಂಗಲ್ಯಧಾರಣವಾದೊಡನೆ, ಅವರುಗಳ ಕಲ್ಯಾಣಗುಣಗಳನ್ನು ಹೊರಸೂಸುತ್ತಾ ಏನೂ ಅಯಿರ್‌ನ್ನು—ಬೆಲೆಬಾಳುವ ಆಯಿರ್‌ನ್ನು ಮಾಡಲಿಲ್ಲವೆಂದು ಗೊಣಗಿದೆ—ಎಂಬುದಾಗಿ ಹಾಳು ಹರಟೆಯನ್ನು ಬಿಚ್ಚಿರುವಿರಿ. ಪರಮ ಶತ್ರು ದಾಯಾದಿ ಯಾರು? ಆ ದಾಯಾದಿಯನ್ನು ನನ್ನ ಸಮಕ್ಷಮ ಸಿದ್ಧಪಡಿಸಬೇಕಾಗುವುದು. ನಿಮ್ಮ ಬಾಯಿ ಮಾತಿನಿಂದ ಪ್ರಯೋಜನವಿಲ್ಲ. ನೀವು ಸಿದ್ಧಪಡಿಸುವ ಮುನ್ನ ನಿಮ್ಮ ಭದ್ರತೆಗಾಗಿ ಸಕಲ ಸಾಮಗ್ರಿಗಳಿಂದ ಸುಸಜ್ಜಿತವಾಗಿರಿ, ಆ ಮೇಲೆ 'ಬಾ' ಎಂದು ತಿಳಿಸಿದರೆ ನಾನೋರ್ವನೇ ಬರುವೆ!

"—ಶಿವಣ್ಣಯ್ಯನವರ ಏಕಮಾತ್ರ ಪ್ರೇಮದ ಮಗಳ ದುರ್ದೈ

ವವೆ?" ಎಂದು ನೆರೆದವರೆಲ್ಲಾ ಉಸಿರ್ಗರೆದು ಗೋಳಿಟ್ಟದ್ದು ನಿನಗೆ ನಾಟಲಿಲ್ಲವೇಂದು ತೋರುತ್ತದೆ" ಎಂಬ ಒಕ್ಕಣಿಕೆ ನಮೇದಾಶ್ಚರ್ಯವನ್ನುಂಟು ಮಾಡಿತು. ಏಕಮಾತ್ರ ಪುತ್ರಿಯಾಗಿಯೂ ಸರಿಯಾದ ಆದರವಿಲ್ಲದೆ ಪರವೇಶಿಯಂತಿರುವಳಲ್ಲ—ಎಂದು ಒಳಗೆ ಮರುಗಿ ಗೋಳಿಟ್ಟು ಉಸಿರ್ಗರೆದಿರುವವರು ವಿಚಾರ ಶೂನ್ಯತೆಯಿಂದ ಮುಗ್ಧರಾದ ತಮಗೆ ಅದರ ಅರಿವು ಅದೆಂತು ಉಂಟಾಗಬಲ್ಲದು ? .......

'ಪ್ರೇಮದಿಂದ ಇದ್ದಿದ್ದರೆ ನಿನ್ನ ಮೂರು ಜೇವಿಕೆಗಳೇಕೆ? ಹನ್ನೆರಡನ್ನು ಕೊಡಿಸಬಹುದಾಗಿತ್ತು' ಎಂದು ಮಾತನ್ನು ಉಳಿಸಿರುವಿರಿ. ಈ ಮಾತು ನಿಮ್ಮ ಯೋಗ್ಯತೆಯ ಪೀಠಿಕೆ ಎಂದು ಭಾವಿಸಲೆ? ನಾನು ಸತ್ತ ಒಂಭತ್ತನೆಯ ದಿನವೆಂದು ತಿಳಿದಿಕೊ—ಎಂದು ಬರೆದನ, ಮಗಳ ಮೇಲೆ ತಂದೆಗೆ ಎಂಥ ಮಮತೆ ಎಂದು ಭಾವಿಸಿ ಮುಗ್ಧ ಹೃದಯಗಳು ಹಾಳಾಗಲೆಂದು ಹಾರೈಸಿರುವಿರಿ. ಆದರೆ ನಿಮ್ಮ ಅವಿವೇಕ ಹಾಗೂ ಅಯೋಗ್ಯ ಗುಣಗಳನ್ನು ಸಂಪೂರ್ಣಬಲ್ಲ ನಾನು ಮಾತ್ರ ಒಂಭತ್ತನೇ ದಿನದ ಪಕ್ವಾನ್ನವನ್ನು ಈ ಮೊದಲೇ ಜೀರ್ಣಿಸಿಕೊಂಡಿರುವೆ!

ಬೇರೆ ಜನರನ್ನು ಮೂದಲಿಸುತ್ತ ನಿಮ್ಮ ಕೊಳಕನ್ನು ಬಚ್ಚಿಡಲು ಯತ್ನಿಸುವಿರಿ. ಆದರೆ ಆ ದುರ್ಗಂಧದ ವಾಸನೆ ಎಲ್ಲಾ ಕಡೆಗೂ ಪಸರಿಸದೆ ಬಿಟ್ಟೀತೆ?

ರೇಣುಕನು ವಿದ್ಯಾವಂತನಾದರೂ ವ್ಯವಹಾರಜ್ಞಾನ ರಹಿತನಾದವನೆಂದು ಮೇಲೆಯೇ ಗೊತ್ತಾಗುತ್ತದೆ. ಎಚ್ಚರವಿಲ್ಲದೆ ಸಿಕ್ಕಾಪಟ್ಟೆ ಉದ್ಧಟತನದಿಂದ ಓಲೆ ಬರೆದಿದ್ದಾನೆ. ಮುದ್ದುಮಗ ಏನು ಮಾಡಿದರೂ ತಮಗೆ ಪ್ರಿಯಕರವಲ್ಲವೆ?

ಕ್ಷುಲ್ಲಕ ಭಾವನೆಗಳನ್ನು ಅಂತರಂಗದಲ್ಲಿ ಬಚ್ಚಿಟ್ಟುಕೊಂಡು, ಗಂಡುಗಲಿಗಳಂತೆ ನಲಿದಾಡುವ ಸತ್ಪುತ್ರರ ದುರವಸ್ಥೆ ನಿಮ್ಮ ನೇತ್ರ ಸಮ್ಮುಖದಲ್ಲಿಯೊ, ಇಲ್ಲವೆ, ನಿಮ್ಮ ಕಾಲಾನಂತರವೋ ಬರುವುದೆಂದು ದೃಢವಾಗಿ ನಂಬಿರಿ. ನನ್ನ ನೆರವಿರದಿದ್ದರೆ ಈ ಒಳಗಾಗಿ ಎಂದೋ ದುರವಸ್ಥೆಗೆ ಗುರಿಯಾಗುತ್ತಿದ್ದಿ. ಯಾರ ಭೀತಿಯಿಂದ ಅನುಕೂಲವಾತಾವರಣ ನಿನಗುಂಟಾಗಿದೆಯೆಂದು ಆಲೋಚಿಸುತ್ತ ಸ್ಮರಿಸುತ್ತಿರು. ನಾವು ಬರೆದಿರುವ ಎಲ್ಲಾ ವಿಷಯಗಳನ್ನು ಸಂಪೂರ್ಣ ಮನವರಿಕೆ ಮಾಡಿಕೊ!"

ಬಹುವಚನದಿಂದ ಪ್ರಾರಂಭವಾಗಿ ಏಕವಚನದಿಂದ ಕೊನೆಗೊಳ್ಳು ವಂತಹ ಕಾಗದದ ಅಲ್ಪಾಂಶ ಆಕೆಯ ನೆನಪಿಗೆ ಬಂತು. ಇದಿಷ್ಟೇ ವಿಷಯ ಗಳಲ್ಲದೆ, ಇನ್ನೂ ಅಸಂಬದ್ಧ, ಅಪಭ್ರಂಶ, ಹೊಲೆಯರಾಡುವ ಮಾತು ಗಳನ್ನೂ ಆ ಪತ್ರ ಒಳಗೊಂಡಿತ್ತು.

ಮಾಲಿನಿಗೆ ಕಾಗದದ ಬಿರುಸು ಬಹಳ ನೋವನ್ನುಂಟುಮಾಡಿತು. ಅವರ ವಿರುದ್ಧ ಒಂದು ಮಾತನ್ನೂ ಆಕೆ ಪಿಟಕ್ಕೆನ್ನುವ ಹಾಗಿದ್ದಿಲ್ಲ.

ಮೊದಲಿನ ಕಾಗದವನ್ನು ಉಮಾಪತಿ ಒತ್ತಾಯದಿಂದ ಬರೆಸಿದ ನೆಂದೇನಾದರೂ ಹೇಳಿದರೆ, "ವಿಷದ ಇಂಜಕ್ಷನ್ ಕೊಡಿಸಿ ಸಾಯಸುತ್ತೇನೆ" ಎಂದು ಗದರಿಸಿದ್ದು ಆಕೆಯ ನೆನಪಿಗೆ ಬಂತು. ಅದೊಂದು ಕಟುಕರ ಅಂಗಡಿ. ಈ ಕಟುಕರ ಅಂಗಡಿಯಲ್ಲಿ ಸಾಧು ಪ್ರಾಣಿ ಹಸುವನ್ನು ಕೊಂದರೂ ಯಾರೂ ಕೇಳುವ ಹಾಗಿಲ್ಲ! ಒಬ್ಬರಿಗಾದರೂ ಕರುಣೆಯಿದ್ದರೆ ತಾನೆ ಆ ಹಸುವಿಗೆ ಉಳಿಗಾಲ! ಅಂತೆಯೇ ಮಾಲಿನಿಯ ಪ್ರಸ್ತುತ ಪರಿಸ್ಥಿತಿಯೂ ಹಾಗಿತ್ತು. ತೌರುಮನೆಯವರನ್ನು ಎತ್ತಿಕಟ್ಟಿ ಮಾತಾಡು ವಂತಿದ್ದಿಲ್ಲ. ಅವರಂತೆಯೇ ಇದ್ದು ಕೆಲಸಮಾಡುತ್ತ ಒಂದು ತುತ್ತು ಅನ್ನ ತಿಂದು ಹಾಯಾಗಿರಬೇಕಾಗಿತ್ತು. ಅಕಸ್ಮಾತ್ ಬಾಯಿತಪ್ಪಿ ಮಾತಾಡಿ ದರೆ ಪೈಬಾಯುವವರೆವಿಗೂ ಏಟು ಬೀಳುವುದೆಂದು ಆಕೆಗೆ ಗೊತ್ತಿತ್ತು. ಈ ಹಿಂದೆ ತೌರುಮನೆಯಲ್ಲಿಯೇ ಯಾರ ಹೆದರಿಕೆಯಿಲ್ಲದೆ ಉಮಾಪತಿ ಹೆಂಡತಿಯನ್ನು ಹೊಡೆದಿದ್ದ.

ಒಂದು ದಿನ ಬಸವರಾಜನ ಮನೆಯ ಎಮ್ಮೆಕರುವೊಂದು ಶಿವಣ್ಣ ಯ್ಯನವರ ಮನೆಯಲ್ಲಿ ನುಗ್ಗಿ ಕಾಳು ಕಡ್ಡಿ ತಿಂದುಬಿಟ್ಟಿತು. ಇದನ್ನು ನೋಡಿ ಮಾಲಿನಿಗೆ ಸಹಿಸಲಾಗಲಿಲ್ಲ. ಅದೆಷ್ಟು ಹೆದರಿಸಿ ಕೈಯಿಂದ ಹೊಡೆದರೂ ಆ ಹಾಳು ಕರು ಬಾಯೆತ್ತಲಿಲ್ಲ. ಇನ್ನೂ ತಿನ್ನುತ್ತಲೇ ಇತ್ತು. ಮಾಲಿನಿ ಕೋಪದಿಂದ ಕೋಲು ತೆಗೆದು ಅದನ್ನು ಹೊಡೆದಟ್ಟಿದಳು.

ಈ ವಿಚಾರ ಬಸವರಾಜನ ಮನೆಯವರಿಗೆ ತಿಳಿದು, ಬಸವರಾಜ ಮನೆಗೆ ಊಟಕ್ಕೆಂದು ಬಂದಾಗ ಹೇಳಿದರು. ಅವನು ಉಮಾಪತಿಯೆ ದುರಿಗೆ ಹೇಳಿದ, ಉಮಾಪತಿ ಆ ದಿನ ರಾತ್ರಿ ಮಾಲಿನಿಯನ್ನು ಸಿಕ್ಕಾ ಪಟ್ಟೆ ಹೊಡೆದು ಕೈ ಕಡಿತವನ್ನು ತೀರಿಸಿಕೊಂಡ. ಇವನ ಈ ಆಟಾ ಟೋಪ ಶಿವಣ್ಣಯ್ಯನವರಿಗೆ ತಿಳಿದು, ಅವರು ಬಹಳ ಉದ್ವೇಗರಾಗಿ,—

"ಇನ್ನೂ ಗಂಡನ ಮನೆಗೆ ಹೋಗಿ ಬಂದು ಮಾಡಿಲ್ಲ. ಆಗಲಿ–ಅದೂ ತೌರುಮನೆಯಲ್ಲಿ ಹಿರಿಯರ ಹೆದರಿಕೆಯಲ್ಲದೆ ಯಾಕಾಗಿ ಹೊಡೆದಿ?" ಎಂದರು.

"ಹಾಗಲ್ಲ ಮಾವ, ಆ ಮೂಕ ಪ್ರಾಣಿ ಏನು ಮಾಡಬಲ್ಲದು? ಅವರೊಡನೆ ಸಿಟ್ಟಿದ್ದರೆ ಅವರ ಮನೆಯ ವ್ಯಕ್ತಿಗಳ ಮೇಲೆ ತೀರಿಸಿಕೊಳ್ಳಬೇಕು,"

"ಏನು ಸಿಟ್ಟೋ ಏನು ಜಿದ್ದೋ, ಅಲ್ಲಾ ... .ಕರುವಿನ ವಿಚಾರ ತೆಗೆದರೆ ಏನೆಲ್ಲ ಮಾತಾಡುತ್ತೀಯಪ್ಪ" ಎಂದು ಆ ವಿಚಾರವನ್ನು ಅವರು ಅಲ್ಲಿಗೇ ಕೈಬಿಟ್ಟಿದ್ದರು

ಅಲ್ಲಿಯೇ ಕುಳಿತಿದ್ದ ಪಾಟೀಲರು ಅವನ ವ್ಯಕ್ತಿತ್ವ ಯಾವ ಮಟ್ಟಕ್ಕಿದೆಯೆಂದು ಆಗಲೇ ಅರಿತುಕೊಂಡರು. ಪಾಟೀಲರು ಊರಿನ ಗಣ್ಯವ್ಯಕ್ತಿಗಳೂ ಹಾಗೂ ಜವಳಿ ವ್ಯಾಪಾರಿಗಳು. ಅವರ ಎದುರಿಗೂ ಕೂಡ ಹೆದರಿಕೆಯಿಲ್ಲದೆ ಕೆಚ್ಚೆದೆಯಿಂದ, ಬಾಯಿಗೆ ಬಂದದ್ದನ್ನು ಮಾತನಾಡುವ ವ್ಯಕ್ತಿ ಏನು ಮಾಡುವುದಕ್ಕೆ ತಾನೆ ಹೇಸುವುದಿಲ್ಲ? ಆ ಪರದೇಶಿ ಮಗಳಿಗೆ ದೇವರ ಓರೆಗಣ್ಣಾದರೂ ಏಕೆ ಬಿದ್ದೀತು?....

# ೯

ಸಾಹುಕಾರ ದೊಡ್ಡಪ್ಪನವರು ಕಾಫಿ ಕುಡಿಯುತ್ತ ಹೇಳಿದರು:

"ಬಾನಪ್ಪ ರೇಣುಕ, ನಿನಗೊಂದು ಜವಾಬ್ದಾರಿಯ ಕೆಲಸ ವಹಿಸ ಬೇಕೆಂತ ಇದೇನೆ. ಹೇಗೆ? ನೀನು ಮಾಡಲಿಕ್ಕೆ ಸಿದ್ಧವೆ?"

ಗಣೇಶ ವಿಲಾಸದ ಮಾಣಿ 'ಟ್ರೇನಲ್ಲಿ' ರೇಣುಕನಿಗೆ ಕಾಫಿ ತಂದಿಟ್ಟ. ರೇಣುಕನಿಗೆ ಕೊಂಚ ಆಶ್ಚರ್ಯವಾಯಿತು. ಎಂದೂ ತನ್ನ ಬಗ್ಗೆ ಪ್ರೇಮಾದರಗಳನ್ನು ತೋರಿಸದ ಒಡೆಯರು ಈ ದಿನ ಪ್ರೀತಿಯಿಂದ ಕಾಫಿ ತರಿಸಿ ಕೊಟ್ಟಿದ್ದಾರೆ!

"ಅದಕ್ಕೇನಂತಣ್ಣಾ. ನನ್ನ ಕೈಯಿಂದ ತೂಗಿಸಿಕೊಂಡು ಹೋಗುವ ಕೆಲಸಗಳನ್ನೆಲ್ಲಾ ಮಾಡಬಲ್ಲೆ."

ರೇಣುಕನ ಮಾತು ದೊಡ್ಡಪ್ಪನವರ ಹೃದಯವನ್ನು ಕೊಳ್ಳೆ ಹೊಡೆಯಿತು. ಅವರು ಆನಂದ ತುಂದಿಲರಾಗಿ ಒಮ್ಮೆ ಮೀಸೆಯ ಮೇಲೆ ಕೈಯಾಡಿಸಿ "ಜೀರ ಏನೆಲ್ಲ ತಿಳಿದಿಕೋಬಾರದು....ಹಾಗಾದರೇನೆ ನಾನು ಹೇಳುವುದು"

"ನಿಮ್ಮಲ್ಲಿ ನಾನು ಯಾಕೆ ವಂಚನೆ ಮಾಡಲಿ. ತಾವು ಹೇಳಿದ ಹಾಗೆ ಈ ತಾರೀಖಿನವರೆವಿಗೂ ನಡಕೊಂಡು ಬಂದೆ. ಮುಂದೂ ಇದೇ ರೀತಿ ನಡೆಯಬಲ್ಲೆ." ಅವನು ಹೃದಯ ಬಿಚ್ಚಿ ಮಾತನಾಡಿದ. ತನ್ನ ಸಂಬಳದ ಬಗ್ಗೆ ಸಾಹುಕಾರರು ಮಾತನಾಡಿ, ಜವಾಬ್ದಾರಿಯುತ ಕೆಲಸವನ್ನು ಒಪ್ಪಿಸಬಹುದೆಂದೂ ಕಲ್ಪನೆ ಕಟ್ಟಿದ. ಅದು ಅವನ ಕಣ್ಣುಗಳ ದೀನತೆಯ ಮೊರೆಯಿಂದ ಸ್ಪಷ್ಟವಾಗಿ ಕಂಡು ಬರುತ್ತಿತ್ತು.

"ಈಗ ನಮ್ಮ ಅಂಗಡಿ ದಿನಬಿಟ್ಟು ದಿನ ಕುಸಿಯುತ್ತಾ ಇದೆ. ಖರೀದಿ ಅಂತಹ ಹೆಚ್ಚೇನೂ ಇಲ್ಲ ಎಲ್ಲಾ ರೈತರು ದಾವಣಗೆರೆಗೇ ಕಾಳನ್ನು ಹೊಡೆಯುವುದೇ ಹೆಚ್ಚು. ಅದಕ್ಕೇ ನಾವೀಗ ಕಂಟ್ರೋಲ್ ಜಿನಸುಗಳನ್ನು ನ್ಯಾನದಿಂದ ಗಡಿ ಸಾಗಿಸಿದರೆ ಮಾತ್ರ ಅಂಗಡಿ ಪುರೋಭಿವೃದ್ಧಿಗೆ ಬರುತ್ತೆ. ಅವು ಧಾನ್ಯವಾಗಿರಬಹುದು. ಸಾಮಾನಾಗಿರಬಹುದು, ನೂಲಾಗಿರಬಹುದು. ಏನೇ ಇರಲಿ, ಗಡಿ ದಾಟಿಸಬೇಕು.

ಅಂಗಡಿ ಲೆಕ್ಕ ಪಂಚಾಕ್ಷರಯ್ಯ ನೋಡಿಕೊಳ್ಳುತ್ತಾರೆ. ಅದರ ಯೋಚನೆ ಎಳ್ಳಷ್ಟೂ ಮಾಡಬೇಡ. ನಿನ್ನ ಸಹಾಯಕ್ಕೆ ಆಳು, ಲಾರಿ ಪೂರೈಸುತ್ತೇವೆ. ಹೇಗೆ?" ಎಂದು ಅವನ ಉತ್ತರ ನಿರೀಕ್ಷಣೆಮಾಡುತ್ತ ಕುಳಿತರು.

ರೇಣುಕ ದಿಗ್ಭ್ರಾಂತನಾದ. 'ದೊಡ್ಡಪ್ಪನವರ ಅಂಗಡಿಯನ್ನು ಬಿಟ್ಟು ಸುಮ್ಮನೆ ಮನೆಯಲ್ಲಿರಲೇ? ಬೇಡ, ಇವರು ಹೇಳಿದಹಾಗೆ ಕಾರ್ಯಗತ ಮಾಡುತ್ತ ಹೋದರೆ ಮುಂದಾದರೂ ವೇತನಕೊಟ್ಟಾರು. ಇಷ್ಟೇ ದಿನಗಳು ಕಳೆದದ್ದಾಗಿದೆ. ಒಂದು ಸಮಯ, ಪೋಲಿಸ್‌ರ ಕೈಯಲ್ಲಿ ಸಿಕ್ಕರೆ? ಪೋಲಿಸ್‌ಗೆ ಸಿಕ್ಕರೆ ಯಾರು ಜವಾಬ್ದಾರರು. ಇಂತಹ ವಿಚಾರಕ್ಕೆ ತೊಡಗುವಾಗ ಪೂರ್ವಭಾವಿಯಾಗಿ ತಂದೆಯವರನ್ನು ಕೇಳಿ ನೋಡುವುದು ಲೇಸು.' ಅವನು ಹೀಗೆ ವಿಚಾರ ಸರಣಿಯಲ್ಲಿಯೇ ಇದ್ದ. ದೊಡ್ಡಪ್ಪ ಅವನಿಂದ ಉತ್ತರ ನಿರೀಕ್ಷಿಸಿ ಸಾಕಾಗಿ ಹೋದರು.

"ಏನು ರೇಣುಕ? ಏನಂತೆ? "

ಯಾವುದೋ ಆಳವಾದ ಬಾವಿಯೊಂದರಿಂದ ಮೇಲಕ್ಕೆ ಬಂದು ಮಾತನಾಡುವವನಂತೆ ರೇಣುಕ ಉತ್ತರಿಸಿದ. "ಈ ಕೆಲಸ ನನ್ನಿಂದ ದಯವಿಟ್ಟು ಆಗುವುದಿಲ್ಲ. ಹಾಗೇನಾದರೂ ..."

"ಹಾಗಿದ್ದು ಹೀಗಲ್ಲ. ನಿನ್ನ ದಿನ ಖರ್ಚಿಗೆ ನಾನು ಹಣ ಕೊಡುವೆ. ಆಳುಗಳೇ ನಿನ್ನ ಕೈಯಲ್ಲಿದ್ದು ಹೇಳಿದಂತೆ ಕೇಳುತ್ತಾರೆ."

"ಪೋಲಿಸ್‌ರು ಹಿಡಿದರೆ ಹ್ಯಾಗಣ್ಣ.?"

"ಪೋಲಿಸ್‌ರು ಹಿಡಿದರೆ ಅಲ್ಲಿಗೇನೆ ಉಪಾಯದಿಂದ ಮುರಿದು ಬಿಡಬೇಕು. ಇಂತಹ ಕ್ಷುಲ್ಲಕ ಸಮಸ್ಯೆಗಳಿಗೆ ಚಿಕ್ಕ ಬಾಲಕ ಉತ್ತರಿಸ ಬಲ್ಲ."

ಈ ಸಮಸ್ಯೆ ಅವರ ದೃಷ್ಟಿಯಲ್ಲಿ ಕ್ಷುಲ್ಲಕವಾಗಿತ್ತು. ಸೋಣವನ್ನು ಹೊಡೆದೋಡಿಸುವಂತೆ ಬಿಡಿಸಬಹುದೆಂಬ ಭಾವ ಬರುವಂತೆ ಅವರು ರೀತಿಯಿಂದ ಹೇಳಿದುದನ್ನು ಕೇಳಿ, ಅವನಿಗೆ ಕೊಂಚ ಉತ್ಸಾಹ ಬಂದರೂ, ಇದು ಕಾಯಿದೆ ಭಂಗಮಾಡುವ ಕೆಲಸವೆಂದರಿತಾಗ ಉತ್ಸಾಹಕ್ಕೆ ಸುಡುವ ನೀರು ಎರಚಿದಂತಾಯಿತು.

"ಮನೆಯಲ್ಲಿ ತಂದೆಯವರ ಹತ್ತಿರ ಹೇಳಿ ನೋಡುತ್ತೇನೆ. ಇವತ್ತು ಕೇಳಿ ಹೇಳಿದರಾಯಿತಲ್ಲವೆ ?"

"ಮನೆಯಲ್ಲಿ ಯಾಕಪ್ಪ ಕೇಳೋದು. ಇದೇನು ಖೂನಿ ಕೆಲಸವೆ. ಕಳ್ಳತನವೆ? ಇದು ನಮ್ಮ ದುಡ್ಡಿನ ಸಾಮಾನುಗಳನ್ನು ಪರಪ್ರಾಂತಗಳಿಗೆ ಸಾಗಿಸುವುದು. ನೀನು ವಿದ್ಯಾವಂತನಾಗಿದ್ದೀಯೆ, ಹೇಳು ಮತ್ತೆ? ಅಲ್ಲಿಗೆ ಅಭಾವದ ವಸ್ತುಗಳನ್ನು ಕಳಿಸಿಕೊಟ್ಟರೆ ಲೋಕೋಪಕಾರ ಕಾರ್ಯ ಮಾಡಿದಂತಾಗೋದಿಲ್ವೆ? ಒಬ್ಬನೇ ಏಕಾಂತದಲ್ಲಿ ಕುಳಿತುಕೊಂಡು ಯೋಚಿಸು. ಇದರ ಮರ್ಮ ಬೇಗ ತಿಳಿಯುತ್ತದೆ" ಎಂದು ಉಪಾಯದಿಂದ ಸಾಹುಕಾರರು ರೇಣುಕನ ಮೇಲೆ ಬಲೆ ಬೀಸಿದರು. ಈ ಬಲೆಗೆ ಎಂತಹ ಲವಲವಿಕೆಯ ಮೀನೂ ಬೀಳುತ್ತದೆಂದು ಅರಿತಿದ್ದ ವ್ಯವಹಾರ ಚತುರ ದೊಡ್ಡಪ್ಪನವರು ಇದನ್ನು ರೇಣುಕನ ಮೇಲೂ ಉಪಯೋಗಿಸಿದ್ದರು. ಇವರ ಈ ಮಾಯದ ಬಲೆ ಮೋಡಿಯಂತೆ ಅವನ ಮೇಲೆ ಕೆಲಸಮಾಡಿತು.

"ಹೂಂ ..ಆಗಲಣ್ಣ ನೀವೆ ಹೇಳುತ್ತಿರುವಾಗ ಪಾಲಿಸುವುದರಲ್ಲಿ ತಪ್ಪಾದರೂ ಏನು?"

"ಇನ್ನೊಂದು ಮಾತು ಅಕಸ್ಮಾತ್ ಪೋಲಿಸ್‌ನವರ ಕೈಯಲ್ಲಿ.... ಹಾಗೆಂದಿಗೂ ಆಗೋದಿಲ್ಲ ಅನ್ನು. ಸಮಯ ಯಾವಾಗಲೂ ಸರಿಯಿರುವುದಿಲ್ಲ. ಸಿಕ್ಕರೆ? ನನ್ನ ಸಾಮಾನುಗಳೆಂತ ಒಪ್ಪಿಕೊಳ್ಳಬೇಕು. ಆ ಮೇಲೆ 'ಟ್ಯಾಕ್ಟ್' ಉಪಯೋಗಿಸಿ ಬಿಡಿಸುವುದು ಇದ್ದೇ ಇದೆಯಲ್ಲ."

"ನಿಮ್ಮ ಸಾಮಾನುಗಳೆಂದು ಹೇಳಬಾರದೆ?"

"ಛೆ! ಹಾಗೆ ಹೇಳಲಿಕ್ಕೆ ಬರುವುದಿಲ್ಲ"

"ಏಕೆ?"

"ನಾವೀಗ ಗಣ್ಯ ವ್ಯಾಪಾರಸ್ಥರೆಂದು ಖ್ಯಾತನಾಮ ಪಡೆದಿದೇವೆ. ಅಂಥವರು ಈ ರೀತಿಯ ಕೆಲಸ ಮಾಡಿದರೆಂದರೆ ಬೆಲೆ ಕಡಮೆ."

"ನಿಜ ನಿಜ" ಎಂದು ತಲೆಯಲ್ಲಾಡಿಸಿದ ರೇಣುಕ.

"ಹ ಹ ಹಾ! ...ಹಾಗೆ ಒಂದೊಂದೆ ಮೆಟ್ಟಿಲಾಗಿ ತಿಳಿದುಕೊಳ್ಳಬೇಕು. ಅಲ್ಲ, ದೇವರು ಬುದ್ಧಿ ಯಾಕೆ ಕೊಟ್ಟಿದ್ದಾನೆ? ಎಂಬುದು ನನ್ನ ಮೊದಲ ಪ್ರಶ್ನೆ"

"ವಿಚಾರ ಮಾಡಲಿಕ್ಕೆ"

"ಹಾಗೆ ಜಾಣ. ಸ್ವಂತ ವಿಚಾರ ಮಾಡಬೇಕು. ಆಗ ನಾಲ್ಕು

ಜನಗಳಲ್ಲಿ ಅಡ್ಡಾಡಿ ಭಾರಿ ಕೆಲಸ ಮಾಡಿಕೊಂಡುಬರಬಹುದು. ಸರ್ಕಾರದವರ ಕೂಡ ನೆಣಸಾಡಿ ಕೆಲಸ ಸಾಧಿಸಬಹುದು. ಹೌದೂ ಅಲ್ಲೊ?"

"ಹೂಂ"

"ಸರಿ. ಸಿಹಿ ಇದ್ದರೆ ಕೊಂಡು ಬರಲಿಕ್ಕೆ ಹೇಳು" ಎಂದು ಸಾಹುಕಾರರು ಆಜ್ಞೆಯಿತ್ತರು

ಕಾಫಿ ತಿಂಡಿ ತಿಂದಾದನಂತರ ರೇಣುಕಪ್ರಸಾದ ಮನೆಗೆ ಊಟಕ್ಕೆಂದು ಹೊರಟ. ಅವನಿಗೆ ಅಂದು ಎರಡು ಮೂರು ಬಾರಿ ಕಾಫಿಯಾಗಿತ್ತು. ಅಂತಹ ಹಸಿವೇನೂ ಆಗಿರಲಿಲ್ಲ. ಅಲ್ಲದೆ, ಹೊಸ ಕೆಲಸವೊಂದು ತನ್ನ ತಲೆಯಮೇಲೆ ಹೊರೆಯಾಗಿ ಬಿದ್ದಿತ್ತು. ಆದ್ದರಿಂದ ಅದೇ ಗುಂಗಿನಲ್ಲಿ ಅವನು ಮನೆಗೆ ಬಂದ

ಪೋಸ್ಟ್‌ಮ್ಯಾನ್ ರಿಜಿಸ್ಟರ್ ಕಾಗದ ಒಂದನ್ನು ಹಿಡಿದುಕೊಂಡು ಬಂದು ಶಿವಣ್ಣಯ್ಯನವರ ರುಜು ಹಾಕಿಸುತ್ತಿದ್ದ. ರೇಣುಕ ಬಂದನಂತರ ಅವನ ಕೈಯಲ್ಲಿ ಅವರು ಅದನ್ನು ಓದಿಸಿದರು. ಅದೇ ಅವರ ಅಳಿಯನ ಕುಟಾರಪ್ರಾಯದ ಕಾಗದ. ಆಗ ಮಗಳು ಬರೆದಿದ್ದಳು. ಈಗ ಸ್ವಂತ ಅಳಿಯ 'ಮೂರೂ' ಬಿಟ್ಟು ಬರೆದಿದ್ದ! ತಮ್ಮ ಕಾಗದ ಅದೆಷ್ಟು ವಿಚಾರ ಪರಿಪ್ಲುತ! ಅವನ ಕಾಗದ ಅದೆಷ್ಟು ವಿಚಾರಶೂನ್ಯ! ಎರಡಕ್ಕೂ ಸಂಬಂಧವೇ ಇದ್ದಿಲ್ಲ

ಕಾಗದ ಬಂದ ಎರಡು ದಿನಗಳು ಶಿವಣ್ಣಯ್ಯನವರಿಗೆ ಸರಿಯಾಗಿ ಅನ್ನ ಸೇರಲಿಲ್ಲ. ಅವರು ತುಂಬಾ ಯಾತನೆಯನ್ನು ಪಟ್ಟುಕೊಂಡರು. ಅಳಿಯನು ತಮಗೆ ಬುದ್ಧಿ ಹೇಳುವ ರೀತಿಯಲ್ಲಿ ಕಾಗದ ಬರೆದಿದ್ದರೆ, ಅದಕ್ಕಾಗಿ ಉತ್ತರಿಸಬೇಕಾಗಿರಲಿಲ್ಲ, ಉತ್ತರಿಸುತ್ತಿದ್ದೂ ಇಲ್ಲ. ಬಂದವರೆದುರಿಗೆಲ್ಲಾ ಈ ವಿಚಾರದ ಪ್ರವಚನಮಾಡಿ ತಮ್ಮ ಅಳಲನ್ನು ಕೊಂಚ ಕಡಮೆ ಮಾಡಿಕೊಳ್ಳುತ್ತಿದ್ದರು.

ಒಂದು ದಿನ ಪಾಟೀಲರ ಬಳಿಗೆ ಶಿವಣ್ಣಯ್ಯ ಅಳಿಯನ ಕಾಗದ ತೆಗೆದುಕೊಂಡು ಹೋದರು. ಪಾಟೀಲರ ಬಳಿ ಈ ಕಾಗದವನ್ನು ಒಯ್ಯಲು ಇವರಿಗೆ ಇನ್ನೊಂದು ಕಾರಣವಿತ್ತು. ಪಾಟೀಲರ ಮಗನನ್ನು ಕೆಲಸಕ್ಕೆ ಶ್ರೀಕಂಠನಾಥರ ಮನೆಗೆ ಕಳಿಸಿತ್ತು. ಅವರು ಆಗಾಗ ಪೇಟೆಗೆ ಹೋಗಿ ಬರುವುದನ್ನು ಇಟ್ಟುಕೊಂಡಿದ್ದರು. ಈ ಒಂದು ಕಾರಣದಿಂದ ಶಿವಣ್ಣಯ್ಯ ಅಲ್ಲಿಗೆ ಟಪಾಲು ಕೊಂಡೊಯ್ದರು.

"ಏನು ಸ್ವಾಮಿ, ದಯಮಾಡಿಸಬೇಕು" ಎಂದು ಆದರದ ಸ್ವಾಗತ ನೀಡಿದರು ಪಾಟೀಲರು.

ಅವರು ತೋರಿಸಿದ ಆಸನದಮೇಲೆ ಶಿವಣ್ಣಯ್ಯ ಕುಳಿತರು.

"ಬಡವರ ಮನೆಗೆ ಅಪರೂಪಕ್ಕೆ ಬರೋಣವಾಯಿತು."

"ಅಪರೂಪರ ಎಲ್ಲಿ ಬಂತು ಮಲ್ಲಿಕಾರ್ಜುನ. ಈಗೆಂಟು ದಿವಸಗಳಿಂದ ಬಿಡುವೇ ಇದ್ದಿಲ್ಲ. ಅದಕ್ಕಿಂತ ಮುಂಚೆ ಪ್ರತಿದಿನವೂ ಬರುತ್ತಿದ್ದಿಲ್ಲವೆ? ನೀನೆ ಹೇಳು"

ಪಾಟೀಲರ ಹೆಸರು ಹಿಡಿದೇ ಶಿವಣ್ಣಯ್ಯ ಮಾತಾಡುತ್ತಿದ್ದರು. ಹತ್ತಿರದ ಆತ್ಮೀಯತೆಯನ್ನು ಇಬ್ಬರೂ ಹೆಣೆದುಕೊಂಡಿದ್ದರು.

"ಈ ಪತ್ರ ಓದು. ನಂತರ ನಿನಗೇ ಗೊತ್ತಾಗುತ್ತದೆ."

ಪಾಟೀಲರು ಒಮ್ಮೆ ಆ ಹತ್ತು ಪುಟಗಳನ್ನು ಸಮೀಕ್ಷಿಸಿ ಓದಿದರು ತುಂಬಾ ನಿಧಾನವಾಗಿ ಅಲ್ಲಿಯ ಪ್ರತಿ ಶಬ್ದಗಳು ಎಷ್ಟು ವೇದನೆಯನ್ನು ಶಿವಣ್ಣಯ್ಯನವರಿಗೆ ಮಾಡಿದ್ದವೋ, ಅಷ್ಟೇ ವೇದನೆಯನ್ನು, ಅಷ್ಟೇ ವಿಚಿತ್ರ ಯಾತನೆಯನ್ನು ಅವು ಮಲ್ಲಿಕಾರ್ಜುನ ಪಾಟೀಲರಿಗೆ ಮಾಡಿದವು. ಅದನ್ನು ಪೂರೈಸುವ ಹೊತ್ತಿಗೆ ಅವರ ಮೈಯ್ ಬೆವರಿತು.

"ಉಮಾಪತಿ ಇ...ವ .ನಿ...ಗೆ ತಂದೆ ಇಲ್ಲವೆ?" ಎಂದರು ತೊದಲುವ ಧ್ವನಿಯಲ್ಲಿ ಆ ಪ್ರಶ್ನೆ ಶಬ್ದಗಳು ಅವರ ಮಾತನ್ನು ಅಡ್ಡಗಟ್ಟುವಂತೆ ತೋರುತ್ತಿತ್ತು.

"ಇಲ್ಲ."

"ಹಾಂ. . ಸಬೆಂಗ, ಪಕ್ಕಾ ಪಬೆಂಗ ನೀವು ಏನೆಲ್ಲ ತಿಳಿದುಕೊಳ್ಳಿ, ಮಹಾಲೋಫರ್ ಇದಾನೆ ಇವನು"

ತಮ್ಮ ಪೂಜ್ಯ ಗುರುಗಳಿಗೆ ಕುಠಾರದಂಥ ಮಾತುಗಳು! ಶಿವಣ್ಣಯ್ಯನವರಿಗೆ ಕಂಠಲಗಿನಂತಹ ಶಬ್ದಗಳು! ಪಾಟೀಲರಿಗೆ ಸಹಿಸದಂತಾಯಿತು. ತಾವು ಏನು ಮಾತನಾಡುತ್ತಿರುವೆನೆಂಬ ಜ್ಞಾನವಿಲ್ಲದೆ ಅವರು ಮಾತನಾಡಿದರು.

ಶಿವಣ್ಣಯ್ಯ ಮಲ್ಲಿಕಾರ್ಜುನ ಪಾಟೀಲರ ಸಂಗೀತ ಗುರುಗಳು. ಹೆಣ್ಣು ಮಕ್ಕಳ ಶಾಲೆಯಲ್ಲಿ ಉಪಾಧ್ಯಾಯ ವೃತ್ತಿಯಲ್ಲಿದ್ದಾಗ ಪಾಟೀಲರಿಗೆ ಸಂಗೀತ ಪಾಠ ಹೇಳುತ್ತಿದ್ದರು. ಆಗ—ಇನ್ನೂ ಚಿಕ್ಕವರಿದ್ದಾಗ

ಕಿವಿ ಹಿಂಡಿ ಪಾಠ ಹೇಳಿಕೊಡುತ್ತಿದ್ದ ಅಯ್ಯನವರು ಒಂದು ದಿನ,

"ಯಾವ ಕಡೆ ಮಲ್ಲಿಕಾರ್ಜುನ ಪಾಟೀಲರು ದಯಮಾಡಿಸ್ತಾ ಇದಾರೆ?" ಎಂದು ಬಹು ನಮ್ರತೆಯಿಂದ ಕೇಳಿದರು. ಪಾಟೀಲರಿಗೆ ಈ ನಮ್ರತೆ ಬಹಳ ದುಃಖವನ್ನುಂಟುಮಾಡಿತು. ಆಗ ಚಿಕ್ಕ ಮುಖ ಮಾಡಿಕೊಂಡು ಹೇಳಿದರು: "ಸ್ವಾಮಿ, ತಾವೆಷ್ಟಾದರೂ ನನ್ನ ಗುರುಗಳು. ನಾಲ್ಕಕ್ಷರ ಕಲಿಸಿ ಸಂಗೀತಜ್ಞಾನ ಮಾಡಿದವರು. ನನಗೆ 'ಮಲ್ಲಿಕಾರ್ಜುನ' ಎಂತ ಕರೆದರೇನೆ ಸಮಾಧಾನ ನೋಡಿ" ಎಂದಾಗ,

"ಹಾಗಲ್ಲ, ಚಿಕ್ಕವನು ಬೆಳೆದು ಊರಿನ ಪ್ರಮುಖ ವ್ಯಕ್ತಿಯಾಗಿದ್ದೀಯೆ" ಎಂದರು ನಗುತ್ತ ಗುರುಗಳು.

"ನಾನು ಮಂತ್ರಿಯಾಗಲಿ ನಿಮ್ಮ ಮುಂದೆ ಚಿಕ್ಕವನೇ. ತಾಯಿಯ ಮುಂದೆ ಮಕ್ಕಳು ಎಷ್ಟೇ ದೊಡ್ಡವರಾಗಲಿ, ಸಣ್ಣವರಲ್ಲವೆ?" ಎಂದು ಪಾಟೀಲರು ಗುರುವಿಗೆ ಎರಡು ಮಂತ್ರ ಹೇಳಿ ಅವರನ್ನು ಒಪ್ಪಿಸಿದ್ದರು.

"ನೋಡಿ, ಹೊನ್ನಪ್ಪಯಲ್ಲೀ ನನ್ನ ಪ್ರತಿಸ್ಪರ್ಧಿ ನಾದಪಿದ ರುದ್ರಪ್ಪ ಒಳ್ಳೇ ಪ್ರಚಾರಿ. ಇವನ ಮುಚ್ಚು ಬಡಿಯಲಿಕ್ಕೆ ಹಚ್ಚಬೇಕೇ?" ಎಂದರು ಆವೇಗದಲ್ಲಿ.

"ಎಂತಹ ಸಂಘರ್ಷ ಯಾವ ಪುರುಷಾರ್ಥಕ್ಕೆ ಮಲ್ಲಿಕಾ? ಬುದ್ಧಿಯನ್ನು ನೀನೆ ಆಗಲಿ ಅಥವಾ ಯಾರಿಂದಲೇ ಆಗಲಿ ಹೇಳಿಸುತ್ತಿದ್ದರೆ ನೋಡು. ನೀನು ಈಗ ಹೇಳಿದ್ದನ್ನು ನಾನೇ ಆಗಲಿ ನೀನೇ ಆಗಲಿ ಮಾಡುವುದು ನಮ್ಮ ಮರ್ಯಾದೆಗೆ ಕುಂದಕ ಕಣಯ್ಯ."

ಮಲ್ಲಿಕಾರ್ಜುನ ಪಾಟೀಲರು ಈಗ ಕೊಂಚ ಸಮಾಧಾನದಿಂದ ಹೇಳಿದರು.

"ಆಗಲಾಗಲಿ. ಅವನಷ್ಟುಮಟ್ಟಿಗೆ ಸಾಮೋಪಾಯದಿಂದ ಬಿಡಿಸುವ."

ಪುನಃ ಐದು ನಿಮಿಷ ಯಾರೂ ಮಾತನಾಡಲಿಲ್ಲ. ಈ ವೇಳೆಗೆ ಪಾಟೀಲರ ಮಗಳು ಕೋಸುಂಬರಿ— ಪಾನಕ ತಂದಿಟ್ಟಳು. ಇಬ್ಬರೂ ಇದೇ ವಿಚಾರ ಕುರಿತಾಗಿ ಮಾತಾಡುತ್ತ ಅವನ್ನು ತಿಂದು ಮುಗಿಸಿದರು. ಆನಂತರ ಪಾಟೀಲರು ಕವರಿನಲ್ಲಿ ಆ ಕಾಗದವನ್ನಿಟ್ಟು ಕೊಟ್ಟರು. ಶಿವಣ್ಣಯ್ಯ ಮನೆಯತ್ತ ಮೆಲು ಹೆಜ್ಜೆಗಳನ್ನಿಡುತ್ತ ಹೊರಟರು.

ಮನೆಯೊಳಗೆ ಗಂಗಮ್ಮ ನೆರೆಮನೆಯ ಹೆಣ್ಣುಮಕ್ಕಳೊಂದಿಗೆ ಕುಳಿತು, ಕಾಗದದ ವಿಷಯವನ್ನು ಹೇಳುತ್ತ ಅಳುತ್ತಿದ್ದಳು. ಅಲ್ಲಿ ನೆರೆದಿದ್ದ ಹೆಣ್ಣುಮಕ್ಕಳು ಗಂಗಮ್ಮನನ್ನು ಸಮಾಧಾನ ಮಾಡುತ್ತಿದ್ದರು. ಮನೆಗೆ ಶಿವಣ್ಣಯ್ಯ ಬಂದಿದ್ದನ್ನು ನೋಡಿದ ಹೆಂಗಸರು ಒಬ್ಬೊಬ್ಬರಾಗಿ ಎದ್ದು ಹೊರಟು ಹೋದರು.

"ಯಾಕ ಗಂಗವ್ವ, ಇಷ್ಟು ರಂಪಾಟ ಮಾಡುತ್ತಿರುವುದು? ಬರುವುದೆಲ್ಲ ಬರಲಿ. ನಮಗೆ ಎಂಥ ಕಷ್ಟವೇ ಬಂದಿರಲಿ, ಅದನ್ನು ಹೆರರ ಮುಂದೆ ವರ್ಣಿಸುವುದು ಬೇಡ. ನಮ್ಮ ಕಸುಬು ಇನ್ನೊಬ್ಬರ ಕಿವಿಗೆ ಹೋಗೋದು ಬೇಡ."

"ನಾನು ಹೇಳಲಿಲ್ಲ. ಅವಳೇ ಗೌರಮ್ಮ ಕೇಳಿದ್ದಕ್ಕೆ .."

"ಹಾಗೆಲ್ಲಾ ಇನ್ನು ಮೇಲೆ ಹೇಳಬೇಡ. ಗುರುಮೂರ್ತಿ ದಾವಣಗೆರೆಗೆ ಹೋದನೇನು?"

"ಹೂ, ಪ್ಯಾಸಿಂಜರ್ ಗಾಡಿಗೆ ಹೋದನಲ್ಲ."

"ರೇಣುಕ ಊಟಕ್ಕೆ ಬಂದಿಲ್ವೆ?"

"ಅಗೋ, ಬಂದನಲ್ಲ"

ಮಗನ ತಲೆಯ ಮೇಲೆ ಕೈಯಾಡಿಸಿಕೊಳ್ಳುತ್ತ "ಎಷ್ಟು ಹೊತ್ತೋ ರೇಣುಕ. ಇಷ್ಟು ಹೊತ್ತುಮೀರಿ ಉಂಡರೆ ಆರೋಗ್ಯ ಸರಿಯಾಗಿ ಇರುತ್ತೇಂತ ನೀನು ತಿಳಿದಿರಬಹುದಲ್ಲ" ಎಂದರು ಶಿವಣ್ಣಯ್ಯನವರು.

"ಇಂದು ಕ್ಲಾಸಾಗಿರಲಿಲ್ಲ."

"ಯಾಕಾಗ? ಏನಾದರೂ ."

"ಹೂಂ, ಎರಡು ಬಾರಿ ಶಾಖ ಕುಡಿದ್ದು"

"ಸಂಬಂಧದ ವಿಷಯ ಏನಾದರೂ ತಿಳಿದಿದ್ದೇನು?"

"ಇಲ್ಲ. ಇನ್ನುಮೇಲೆ ಗೊತ್ತುಮಾಡುವ ಪ್ರಯತ್ನದಲ್ಲಿದಾರೆ."

"ಇನ್ನೇ ಬೇಗ ಗೊತ್ತು ಮಾಡ್ಯಾರು? ರಕ್ಷಾಬಂಧನವಾಗಿ ಮುಗಿದರೂ ಸಂಬಂಧ ಇಲ್ಲ ಎಂದರೆ ಏನರ್ಥವು! ನನಗೇನಂದರೂ ಅರ್ಥವಾಗುತ್ತಿಲ್ಲ."

ತಂದೆಯ ಮಾತು ರೇಣುಕಪ್ರಸಾದನಿಗೆ ಯಾಕೋ ಮನಸ್ಸಿಗೆ ಸಂಕಟವಾದಹಾಗಾಯಿತು. ಏನನ್ನೆಲ್ಲ ಮಾಡಿದರೂ ಅದಕ್ಕೆ ತಕ್ಕಂಥ ಫಲ ಸಿಕ್ಕ

ತ್ತಿಲ್ಲ, ನಿಜ

ಸಂಬಳವಿಲ್ಲದೆ ಈಗ ಜವಾಬ್ದಾರಿಯುತ ಕೆಲಸವನ್ನು ಬೇರೆ ಕೊಟ್ಟಿದ್ದಾರೆ. ಈ ವಿಷಯವನ್ನು ತಂದೆಯವರೆದುರಿಗೆ ಹೇಳಿ, ಅಂಗಡಿ ಬಿಟ್ಟು ಬಿಡಲೆ? ಛೆ! ಬೇಡ ..ಆಗದು ಅನ್ನ ಆಗುವವರೆವಿಗೂ ಇದ್ದು, ಆರುವ ವರೆವಿಗೂ ಏಕಿರಬಾರದು?

"ಹೂ....ಇರಲಿ ನಾನು ಊಟಮಾಡುತ್ತೇನಪ್ಪ"

"ಹೋಗು, ಹೊತ್ತಾಗಿದೆ ಹೋಗು. ಕಾಯಿಲೆ ಬೀಳೋತನಕ ಸರ್ತಿ."

ಅದೇ ದಿನ ಸೋಮೇನೂರು ಶಿವಮೂರ್ತಿ ಶಿವಣ್ಣಯ್ಯನವರ ಎದುರಿಗೆ ಕಾಣಿಸಿಕೊಂಡ ಶಿವಮೂರ್ತಿ ಉಮಾಪತಿಯ ತಂಗಿಯ ಗಂಡ. ಅವನೆದುರಿಗೂ ಒಂದುಸಾರಿ ಶಿವಣ್ಣಯ್ಯ ತಮ್ಮ ಪುರಾಣ ಬಿಚ್ಚಿ ಹೇಳಿದರು.

"ನಾನು ಏನು ಮಾಡಲಿಕ್ಕಾಗ್ತ ಸಾಧ್ಯವಿಲ್ಲರಿ. ಅವರಿಗೆ ಗುರು ಹಿರಿಯರು ಎಂಬ ನಿಯತ್ತು ಇದ್ದರೆ ತಾನೆ" ಎಂದ ಶಿವಮೂರ್ತಿ.

'ನಿಜ' ಎಂದುಕೊಂಡು ತೆಪ್ಪಗೆ ಮನೆಗೆ ಬರಬೇಕಾಯಿತು.

ಶಿವಣ್ಣಯ್ಯ ತಮಗೆ ಆತ್ಮೀಯರಾಗಿದ್ದವರ ಬಳಿಯೆಲ್ಲ ಈ ವಿಷಯವನ್ನು ಹೇಳಿಕೊಳ್ಳುತ್ತಿದ್ದರು. ಆದ್ದರಿಂದ ತಮಗಾಗುತ್ತಿದ್ದ ಯಾತನೆ ಕೊಂಚ ಕಡಮೆಯಾಗುತ್ತಿತ್ತು. ಹೀಗೆಯೇ ಅವರು ಒಂದಿಲ್ಲ ಒಂದು ದಿನ ಒಬ್ಬೊಬ್ಬರೆದುರಿಗೆ ಇದನ್ನು ಹೇಳುತ್ತಲೇ ಇರುತ್ತಿದ್ದರು

ಮಾರನೆಯ ದಿನ ಬೆಳಿಗ್ಗೆ ಕೆಂಚನಹಳ್ಳಿ ಮಲ್ಲಪ್ಪನವರು ಸಿಕ್ಕರು. ಮಲ್ಲಪ್ಪನವರೂ ಸಹ ಶಿವಣ್ಣಯ್ಯನವರ ಶಿಷ್ಯರೇ. ಅವರ ನೆಂಟಸ್ತನ ಹೊಸಹಳ್ಳಿಯಲ್ಲಿ ನಡೆದಿತ್ತು ಅವರಿಗೆ ಇದನ್ನು ಹೇಳಿದಾಗ,

"ನನಗೂ ನಿಮ್ಮ ಉಮಾಪತಿಗೂ ಅಷ್ಟಾಗಿ ಪರಿಚಯವಿಲ್ಲ. ಆದರೂ ಹೇಳುವ ಕೆಲಸ ಕೈಕೊಳ್ಳೋಣ, ಬಲ್ಲವರಿಂದ ಹೇಳಿಸೋಣಂತೆ" ಎಂದು ಹೇಳಿ, ನಂತರ ಅವರೇ ಮುಗುಳ್ನಗುತ್ತ "ಇನ್ನೊಂದು ಕೆಲಸ ತಪ್ಪು ಮಾಡಿದಿರಿ ನೀವು" ಎಂದರು.

"ಏನು?" ಎಂದು ದಿಗ್ಭ್ರಾಂತರಾಗಿ ಪ್ರಶ್ನಿಸಿದರು ಶಿವಣ್ಣಯ್ಯ.

"ಮಗಳಿಂದ ಆಗ ಕಾಗದ ಬಂತಲ್ಲಾ, ಸುಮ್ಮನೆ ಮಡಗಿಕೊಂಡು ಕುಳಿತುಕೋಬೇಕಿತ್ತು."

ಮಲ್ಲಪ್ಪನವರ ಮಾತು ನಿಜವೆನ್ನಿಸಿತು. ತಾವು ಕಾಗದ ಬರೆಯ ದಿದ್ದರೆ ವಿಷಯ ಇಷ್ಟು ವಿಕೋಪಕ್ಕೆ ಹೋಗುತ್ತಿದ್ದಿಲ್ಲ. ಒಂದು ಹದದಲ್ಲಿ ಇರುತ್ತಿತ್ತು. ಆದರೆ ನಾವು ಬರೆದುದಾದರೂ ಏನು? ಎಲ್ಲಾ ಬುದ್ಧಿ ವಾದದ ಮಾತುಗಳು. ಹಾಗೂ ಹಿಂದೆ ಅವನು ಮಾಡಿದ್ದ ಹೊಲಸು ಕೃತ್ಯ ಗಳು. ನಿಂದನೆಯ ಮಾತು ಅವರಲ್ಲಿ ಒಂದೂ ಇಲ್ಲ ಎಂತ ಯೋಚಿಸಿ,

"ಅದರಲ್ಲಿ ಏನಂಥ ವಿಚಾರವಿಲ್ಲ. ತಾವು ತಿಳಿದವರು ನಾಲ್ಕು ಜನರು ಎರಡೂ ಕಾಗದಗಳ ತುಲನೆ ಮಾಡಿನೋಡಿ. ಆಗ ಗೊತ್ತಾಗು ತ್ತದೆ, ಅದರ ಸತ್ಯಾಂಶ"

"ಮೇಲೆಯೇ ಗೊತ್ತಾಗುತ್ತೆ. ದುಷ್ಟರನ್ನು ಕಂಡರೆ ದೂರವಿರ ಬೇಕು, ಸ್ವಾಮಿ. ಅವನು ಮನುಷ್ಯನಾಗಿದ್ದರೆ ಇಂಥ ಮಾತುಗಳನ್ನು ಬರೆಯುತ್ತಿರಲಿಲ್ಲ."

"ನೀವು ಹೇಳೋದು ನಿಜ."

"ಮಾಲಕ್ಕನ್ನ ಕೊಡುವಾಗ ನನ್ನಾದರೂ ಕೇಳಿದಿರಾ. ಹೋಗಲಿ, ನಿಮ್ಮೂರಿನಲ್ಲಿ ಪಾಟೀಲರನ್ನಾದರೂ ಕೇಳಿದಿರಾ. ನಮಗೆ ಮುಂಚೆಯೇ ಗೊತ್ತಿತ್ತು—ಅವರು ಜಗಳಗಂಟರೂ ಎಂತ"

"ಕಾಲ ಮಿಂಚಿ ಹೋಯಿತು ಮಲ್ಲಪ್ಪ."

"ಅದು ದೇವರು ಹೇಳಿದ ಮಾತು ಬಿಡಿ. ಕೊಟ್ಟ ಹೆಣ್ಣು ಕುಲಕ್ಕೆ ಹೊರತು. ಅವನು ಚಲೋ ಜಗಳಗಂಟ ಅವರ ಕಕ್ಕ, ಅವರ ದೊಡ್ಡಪ್ಪ, ಎಲ್ಲರ ಜೊತೆಗೂ ಇದೇ ರಂಪಾಟ. ಯಾರೂ ಇವನನ್ನು ಕಂಡರೆ ನೇರುವುದಿಲ್ಲ. ಮುಂಗೈಮೇಲೆ ಒಂದಿಷ್ಟು ನೀರು ಹಾಕುವುದಿಲ್ಲ. ನೋಡಿ ಜಗಳ ಒಂದರಲ್ಲಿ ಅವರಮ್ಮನ ಕೆನ್ನೆಗೇ ಹೊಡೆದಿದ್ದ. ಕೇಳಿ ಬೇಕಾದರೆ ಆ ಮುದುಕಿ ಇನ್ನೂ ಇದಾಳೆ ಮಲ್ಲಿಕಾರ್ಜುನಯ್ಯನವರ ಮನೆಯಲ್ಲಿ."

"ಕೇಳಿದ್ದೆ ಕೇಳಿದ್ದೆ. ತಿಮ್ಮಲಾಪುರದಲ್ಲಿ ಆ ಅಂಗಡಿ ಪುಟ್ಟಮ್ಮ ಖೂನಿ ಮಾಡುತ್ತೇನೆಂತ ಕುಳಿತಿದ್ದಳಂತೆ...."

"ಹಾಹಾ.... ನೋಡಿ, ಬಿಡುತ್ತಾರೆಯೆ? ಇನ್ನೊಬ್ಬರ ವೈಯಕ್ತಿಕ ವಿಚಾರದಲ್ಲಿ ಯಾವ ಕಾರ್ಯಸಾಧನೆಗೆಂದು ಭಾಗವಹಿಸಬೇಕು? ಆ ಪುಟ್ಟಮ್ಮ ಎಂತಾದರೂ ಜೀವಿಸುತ್ತಿರಲಿ, ಇವನೇನು ಸಂಸಾರ ನಡೆಸು

ತ್ತಾನೆಯೆ?" ಎಂದ ಮಲ್ಲಪ್ಪ ರೀವಿಯಿಂದ. "ಇಲ್ಲ" ಎಂದರು ಶಿವಣ್ಣಯ್ಯ. ಈ ವೇಳೆಗೆ ಗುರುಮೂರ್ತಿ, ಗುರುಶಾಂತಶಾಸ್ತ್ರಿಗಳು ಮಾತನಾಡುತ್ತ ಬಂದರು. "ಯಾವಾಗ ಬರೋಣಾಯಿತು ಶಾಸ್ತ್ರಿಗಳು" ಎಂದರು ಶಿವಣ್ಣಯ್ಯ.

"ಇದೇ ತಾನೆ ಬಸ್ಸಿನಲ್ಲಿ ಬಂದೆ. ಗುರುಮೂರ್ತಿ ದಾರಿಯಲ್ಲಿ ಕಂಡ, ಒಟ್ಟಿಗೆ ಬಂದಿದ್ದಾಯಿತು."

"ಏನು, ಸರಳಮ್ಮನ್ನ ಏಕೆ ಕರೆದುಕೊಂಡು ಬರಲಿಲ್ಲ?"

"ಆ ಹುಡುಗನಿಗೆ ಚೆನ್ನಾಗಿದ್ದಿಲ್ಲ. ಕಾಮಾಲೆ ಹಾಗೆ ಆಗಿತ್ತು. ಅದಕ್ಕೆ ಇನ್ನೊಂದು ಸಾರಿ ಬಂದು ಕರೆದುಕೊಂಡು ಹೋಗುವಂತೆ ಎಂದೆ."

ಕಣ್ಣು ಕೆಂಪಗೆ ಮಾಡಿಕೊಂಡು ಗಂಗಮ್ಮ ಹೇಳಿದಳು :

"ನಾನಿನ್ನು ಎಷ್ಟು ದಿನವೆಂತ ದುಡಿಯಲಿ...ನಾಕಾಗಿ ಹೋಗಿದೆ. ಮನೆಯಲ್ಲಿ ನಾನಿರಲಿಲ್ವೆ. ಮಕ್ಕಳ ಆರೋಗ್ಯದ ಚಿಕಿತ್ಸೆ ನೋಡಲಿಕ್ಕೆ?"

"ಇರಲಿ ಬಿಡು, ಗಂಗವ್ವ ನಿನ್ನ ಹಾಳು ಪುರಾಣ. ಏನು ಶಾಸ್ತ್ರಿಗಳೆ, ಮತ್ತೇನು ವಿಶೇಷ?" ಎಂದರು ಶಿವಣ್ಣಯ್ಯ.

"ಏನೂ ಇಲ್ಲ, ತಮ್ಮದೇ ಎಲ್ಲಾ. ಏನೋ ವಿಶೇಷ ತಮ್ಮ ಬಗ್ಗೆ"

"ನೋಡಿ, ಈ ಕಾಗದ ತಮಗೆಲ್ಲ ಗೊತ್ತಾಗುತ್ತೆ" ಎನ್ನುತ್ತ ಶಿವಣ್ಣಯ್ಯ ಅವರಿಗೆ ಕಾಗದವನ್ನಿತ್ತರು. ಶಾಸ್ತ್ರಿಗಳು ನಸ್ಯ ಏರಿಸುತ್ತ ಅದನ್ನು ಪದಶಃ ಓದಿ ಮನನ ಮಾಡಿಕೊಂಡರು.

"ಆ ಸಚ್ಚಿದಾನಂದನೇ ಕಾಪಾಡಬೇಕು. ಇರಲಿ, ಇಟ್ಟುಕೊಳ್ಳಿರಿ. ಎಷ್ಟು ದಿವಸ ಮನೆಯಲ್ಲಿ ಇಟ್ಟುಕೊಳ್ಳುತ್ತಾನೋ ಇಟ್ಟುಕೊಳ್ಳಲಿ."

"ಅವರ ವಸ್ತು ಅವರೇನಾದರೂ ಮಾಡಬಹುದು" ಎಂದು ದೇಶಾವರಿ ನಗು ನಗುತ್ತ ಮಲ್ಲಪ್ಪ ಹೇಳಿದರು.

"ಅದು ನಿಜ. ಅವರ ಮಾಲೂಂತ ಬೇಕಾದದ್ದು ಮಾಡಲಿಕ್ಕೆ ಬರುತ್ತೆಯೆ?" ಎಂದರು ಶಿವಣ್ಣಯ್ಯ.

"ದೊಡ್ಡ ಮಾತು, ದೊಡ್ಡ ಮಾತು. ಸಾವಿರ ವರ್ಷದ ಸಂಬಂಧ ಎಂದು ಅಲಂಕಾರಕ್ಕೆ ಹೇಳಲಿಲ್ಲವಲ್ಲ! ಅಂಥದು ಸಾವಿರ ನಿಮಿಷಕ್ಕೇನೆ ಹೀಗೆ ದೂರ ಸರಿದರೆ ಯಾರ ಮನಸ್ಸು ನೋಯುವುದಿಲ್ಲ?" ಎಂದು

ಶಾಸ್ತ್ರಿಗಳು ಸವಾಲು ಹಾಕಿದರು.

"ನೋಯ್ದೇನು ಮಾಡುತ್ತದೆ...ಹುಚ್ಚು ಬಿಟ್ಟು ಹೋಗುತ್ತೆ" ಎಂದರು ಮಲ್ಲಪ್ಪ.

"ಬಂದಿದ್ದನ್ನು ಅನುಭವಿಸಬೇಕು. ಈ ಸಂಸಾರ ಒಂದು ಸಾಗರ; ಅದನ್ನು ದಾಟಲಿಕ್ಕೆ ಯತ್ನಿಸಬೇಕು. ಅಲ್ಲಿ ಬರುವ ತರಂಗಗಳೆಲ್ಲ ಬರುವ ಕಷ್ಟಕಾರ್ಪಣ್ಯಗಳು. ಅವನ್ನೆಲ್ಲ ಬಿರುಗಾಳಿಯಂತೆ ಎದುರಿಸುತ್ತ ಹೋಗಬೇಕು. ಓಹ್...ಎಲ್ಲ ಆ ಸಚ್ಚಿದಾನಂದನ ನಾಟಕ. ನಾಟಕ ದಲ್ಲಿ ನಮ್ಮ ಪಾತ್ರ ಇದು. ಅದನ್ನು ಸರಿಯಾಗಿ ನಿರ್ವಹಿಸಬೇಕಾಗಿದೆ" ಎಂದು ಶಾಸ್ತ್ರಿಗಳು ಉಸಿರ್ಗರೆಯುತ್ತ ಉಸುರಿದರು

ಅಷ್ಟು ಹೊತ್ತಿಗೆ ಸರಿಯಾಗಿ ಗುರುಮೂರ್ತಿ ಊಟಮಾಡಿಕೊಂಡು ಬಂದ.

"ಏನಪ್ಪಾ, ಊಟವಾಯ್ತೋ?" ಎಂದರು ಮಲ್ಲಪ್ಪ.

"ಹೂ, ಆಯಿತು. ಅಜ್ಜ, ನೀವಿನ್ನು ಸ್ನಾನಕ್ಕೆ ಏಳಿ" ಎಂದ.

ಶಿವಣ್ಣಯ್ಯನವರ ಮುಖವನ್ನುದಿಟ್ಟಿಸಿ ನೋಡಿ "ಅಪ್ಪ, ಉಮಾಪತಿ ಯನ್ನು ನೋಡಿದೆ" ಎಂದ.

"ಮಾತನಾಡಿಸಿದನೆ? ಯಾವಾಗ ಕಂಡಿದ್ದ? " ಎಂದು ಆಶಾ ಪೂರ್ಣ ದೃಷ್ಟಿಯಿಂದ ಗಂಗಮ್ಮ ಕೇಳಿದಳು.

"ಆ ಗಡಿಯಾರದ ಟವರ್‌ನ ಹತ್ತಿರ ಹೋಗುತ್ತಿದ್ದಾಗ ಅಲ್ಲೇ ಬಂದ. ನಾನೂ ಮಾತನಾಡಿಸಲಿಲ್ಲ. ಅವನೂ ಮಾತನಾಡಲಿಲ್ಲ" ಎಂದ ಚಿಕ್ಕ ಧ್ವನಿಯಲ್ಲಿ.

"ಹೋಗು, ಮಾತನಾಡಿಸದವನ ಸುದ್ದಿ ಏನು ಹೇಳ್ತೀಯೆ" ಎಂದು ಗಂಗಮ್ಮ ಹೇಳಿದಳು

ಮಲ್ಲಪ್ಪನವರು ಮಧ್ಯ ಭಾಗವಹಿಸಿ "ಅಲ್ಲರಿ, ಅಯ್ಯನೋರೆ, ನೀವು ಬೀಗರನ್ನು ಮಾತನಾಡಿಸಬೇಕೋ ಬೇಡವೊ ? ಅವರ ಮೇಲೇ ತಪ್ಪು ಹೊರಿಸಿರಿ" ಎಂದರು.

"ಆ ಎರಡನೇ ಕಾಗದ ಬರದೇ ಇದ್ದಿದ್ದರೆ ಬೇಕಾದ್ದು ಮಾಡ ಬಹುದಿತ್ತು"

"ಮನಸ್ಸು ತುಂಬಾ ಕಲಕಿಹೋಗಿದೆ, ಮಲ್ಲಣ್ಣ. ಈ ಜನ್ಮದಲ್ಲೇ

ಅವರ ಮುಖ ನೋಡಬಾರದು ಅನ್ನಿಸುತ್ತದೆ" ಶಿವಣ್ಣಯ್ಯ ಎಂದರು.

"ಛಿ! ಯಾಕಂಥ ಮಾತು. ಒಂದಿಲ್ಲ ಒಂದಿನ ಸರಿ ಹೋಗುತ್ತದೆ. ಅವನದು ಮೂಗಿನಮೇಲೆ ಸಿಟ್ಟು. ಮುಟ್ಟಿದರೆ ಮುನಿಯುವ ಗಿಡ ಇದ್ದ ಹಾಗೆ ಅಲ್ಲವೆ ಗಂಗಮ್ಮ?" ಎಂದರು ಶಾಸ್ತ್ರಿಗಳು

"ಆಕೆ ಮಾಡಿದ್ದೇ ಎಲ್ಲಾ. ನಮಗ್ಯಾತಕ್ಕೆ ಬೇಕಿತ್ತು. ನಮಗೆ ಸಾಯುವತನಕ ಕೊರಗು ಹಚ್ಚಿದಳು" ಎಂದು ರೇಗಿದ ಧ್ವನಿಯಲ್ಲಿ ಗುರುಮೂರ್ತಿ ನುಡಿದ

"ನೋಡಿಯಜ್ಜ, ನಾನೇನು ಮಾಡಲಿ. ಇವರು ಕೊಡುವುದಿಲ್ಲೆಂತ ಹಟ ಹಿಡಿದಿದ್ದರೆ ನಾನೇನು ಮಾಡುತ್ತಿದ್ದೆ ಹೆಣ್ಣುಮಕ್ಕಿ. ವರ ಚೆನ್ನಾಗಿದೆಂತ ನನಗನ್ನಿಸಿತು. ಕೈಕೊಟ್ಟು ಹಗ್ಗ ಕಟ್ಟಿಸಿಕೊಂಡಂತಾಯಿತು."

"ಗಂಗಮ್ಮನೂ ಮಾಡಿಲ್ಲ, ಶಿವಣ್ಣನೂ ಮಾಡಿಲ್ಲ ಆ ವಿಧಿ ಲಿಖಿತ ಈ ರೀತಿ ನಡೆದಿದೆ. ಅದಕ್ಕೆ ಯೋಚನೆ ಯಾಕಾಗಿ ಮಾಡಬೇಕು" ಎಂದು ವೇದಾಂತಿಶಾಸ್ತ್ರಿಗಳು ಹೇಳಿ ಎಲ್ಲರ ಬಾಯಿ ಮುಚ್ಚಿಸಿದರು.

# ೧೦

ಆ ದಿನ ವಿಶ್ವನಾಥ ವಾಚನಾಲಯದಲ್ಲಿ ವರ್ತಮಾನ ಪತ್ರಿಕೆಗಳನ್ನು ಓದಿ ಮನೆಗೆ ಪೋಲಿಸ್ ಸ್ಟೇಷನ್ ಪಕ್ಕದಲ್ಲಿ ಹಾಯ್ದು ಹೋಗುತ್ತಿದ್ದಾಗ ಅವರ ಬಳಿ ಜನಗಳ ಗುಂಪೊಂದು ಸೇರಿತ್ತು. ಅಲ್ಲಿ ತುಂಬಾ ಜನಗಳು ಸೆರೆದಿದ್ದರು ಅಲ್ಲಿಗೆ ವಿಶ್ವನಾಥನೂ ಹೊರಟ. ಇನ್ನೂ ನಮೀಪಕ್ಕೆ ಹೋಗಿರಲಿಲ್ಲ, ಆಗಲೇ ಒಂದಿಬ್ಬರು ಅಲ್ಲಿಂದ ಬರುತ್ತಿದ್ದರು. ಗಲಾಟೆ ಮತ್ತು ಜನಗಳೇಕೆ ಕಲೆತಿರುವರೆಂದು ಅವರನ್ನು ಅವನು ಕೇಳಿದ. ಅವರಲ್ಲೊಬ್ಬ ಹೇಳಿದ.

"ಕಳ್ಳ ದಾರ್‍ಯಾಗ ಸಾಮಾನ್ ಸಾಗ್ತಿದ್ರೆ ಪೋಲಿಸ್ರು ಬಿಡ್ತಾರಾ. ಸರ್ಕಾರಾಂಪ್ರೆ ಏನಂತ ಒ ಪ್ರ ಬಿಳ್ಕಂಡಾರೆ. ಜೆಂಕಿ, ಬೆಂಕಿದ್ದಂಗೆ."

"ಯಾರು ಸಾಗಿಸುತ್ತಿದ್ದವ ' ಯಾವಾಗ ?" ಎಂದ ವಿಶ್ವನಾಥ ಮೆಲುದನಿಯಲ್ಲಿ.

"ದೊಡ್ಡಪ್ಪಾರ ಅಂಗಡ್ಯಾಗ ರೇಣುಕ ಪರಸಾದ ಎಂತ ಇದ್ನಲ್ಲಾ."

ವಿಶ್ವನಾಥನ ತಲೆಯ ಮೇಲೆ ಕಲ್ಲು ಬಿದ್ದಂತಾಯಿತು ವಿಷದ ಬಲೆಯಲ್ಲಿ ಸಿಕ್ಕಿ ಇನ್ನವನು ಹೊರಗೆ ಅದೆಂತು ಬರಬಲ್ಲ ಎನ್ನಿಸಿತು ಅವನಿಗೆ. ವಿಶ್ವನಾಥನ ಮುಖವೆಲ್ಲಾ ಬೆವರು ಹನಿಗಳಿಂದ ಮುತ್ತು ಕಟ್ಟಿತು

"ಹೂ....ಇದ್ದ....ಏನಾಯಿತು ಹೇಳಿ?" ಎಂದು ದೈನ್ಯ ಸ್ವರದಲ್ಲಿ ಪ್ರಶ್ನಿಸಿ ಉತ್ತರಕ್ಕಾಗಿ ಹಸಿದ ಮನುಷ್ಯನಂತೆ ಅವನು ನಿಂತುಕೊಂಡ.

"ಅವ್ನು ಅವ್ರ ಸಾಮಾನ ಒಳಗಡೆಗೆ ಸಾಗ್ಸ್ತಿದ್ದನಂತೆ, ಇವತ್ತು ಲಾರಿ ಸಮೇತ ಸಿಕ್ಕಬಿಟ್ಟನಂತೆ. ಇದು ದೊಡ್ಡಪ್ಪಾರ ಸಾಮಾನೆಂತ ಹೇಳಾಬೇಕೋ ಬೇಡ್ವೋ ? ಸೀದಾ ಬಂದು ಅವರ್‍ನ್ನೆ ಹೆಂಗೆ ಮಾಡ್ಲಿ ಅಂತ ಕೇಳಿದ್ನಂತೆ. ಅವ್ರು ನನ್ನ ಸಾಮಾನಂತೆ ಸದ್ಯಕ್ಕೆ ಒಪ್ಪಿಗ್ಯಾ, ಮುಂದೆ ಏನರ ಬರ್‍ಲಿ ತಲೆಗೆ ತಲಿ ಕೊಡ್ತೇನೀಂತ ಅಂದ್ರಂತೆ. ಈಗ ಒಪ್ಪಿಗೊಂಡು ಸಿಕ್ಕಿಬಿದ್ದಾನೆ."

ಪಕ್ಕದ ವ್ಯಕ್ತಿ ಹೊರಡಲು ಅವಸರ ಮಾಡಲಿಕ್ಕೆ ಹತ್ತಿದ. ಇಬ್ಬರೂ

ಹೋದರು.

ಸೂರ್ಯನ ಬೆಳಕು ಉಜ್ಜ್ವಲವಾಗಿ ಬೆಳಗುತ್ತಿದ್ದರೂ ವಿಶ್ವನಾಥನಿಗೆ ಅದು ಅಂಧಕಾರವಾಗಿ ಪರಿಣಮಿಸಿತ್ತು. ತಲೆಗೆ ಯಾವುದೋ ಶೂನ್ಯ ಅಡರಿ, ಅವನನ್ನು ಮಂಕನನ್ನಾಗಿ ಮಾಡಿತ್ತು; ಅವನ ತಲೆ ತಿರುಗುತ್ತಿತ್ತು.

ಸಂಬಳವಿಲ್ಲದೆ ತುಂಬಾ ಮರ್ಯಾದೆಯಿಂದಲೂ, ನಂಬಿಕೆಯಿಂದಲೂ ಕೆಲಸಮಾಡಿದರೆ ಈ ಸ್ಥಿತಿಗಳು. ಎಂತಹ ಪಾಷಾಣ ಹೃದಯದ ಶ್ರೀಮಂತರು ದೇಶದ ಮಧ್ಯೆ ಇರುತ್ತಾರೆ! ಈಗೊಂದು ವರ್ಷದಿಂದ ಹಗಲೂ ರಾತ್ರಿ ನಿದ್ದೆ ಇಲ್ಲದೆ ಕೆಲಸ ಮಾಡಿದರ ಫಲ ಇದು. ವಿದ್ಯಾವಂತನಿಂದ ಕೆಲಸ ತೆಗೆದುಕೊಂಡು, ಅವನಿಗೆ ಕೊಟ್ಟ ಬಹುಮಾನವಿದು—ಎಂದು ವಿಶ್ವನಾಥ ಯೋಚಿಸಿದ.

ತಲೆಯನ್ನು ತಗ್ಗಿಸಿಕೊಂಡು ಅವನು ಆ ಗುಂಪಿನ ಬಳಿ ಒಯ್ಯೊಯ್ಯನೆ ಹೆಜ್ಜೆಗಳನ್ನಿಡುತ್ತ ಬಂದ. ಆ ಸ್ಥಳದಲ್ಲಿ ರೇಣುಕಪ್ರಸಾದ ನಿಂತಿದ್ದ. ಒಳಭಾಗದಿಂದ ಗುಜುಗುಜು ಶಬ್ದ ಕೇಳಿ ಬರುತ್ತಿತ್ತು. ದೊಡ್ಡಪ್ಪನವರೂ ಬಂದಿದ್ದರು. ಅನತಿ ಸಮಯ ಕಳೆದಮೇಲೆ ದೊಡ್ಡಪ್ಪ, ರೇಣುಕಪ್ರಸಾದ ಒಂದಿಗೇ ಹೊರಗೆ ಬಂದರು. ಮೋಡದಲ್ಲಿ ಮುಸುಕಿಕೊಂಡ ಚಂದ್ರನಂತೆ, ಮುಖವನ್ನು ದುಃಖದ ತೆಳು ಹೊದಿಕೆಯೊಂದು ಮುಚ್ಚಿತ್ತು. ದೊಡ್ಡಪ್ಪನವರು ದೊಡ್ಡದೊಡ್ಡ ಹೆಜ್ಜೆಗಳನ್ನಿಡುತ್ತ ಮುಂದೆ ನಡೆದರು. ವಿಶ್ವನಾಥ, ರೇಣುಕಪ್ರಸಾದ ಅವರ ಹಿಂದೆ ಹಿಂಬಾಲಿಸಿದರು. ರೇಣುಕಪ್ರಸಾದ ಅದೇನೊ ಹೇಳಬೇಕೆಂದು ಬಾಯಿ ತೆರೆಯಲು ಸರ್ವಪ್ರಯತ್ನಮಾಡಿದ, ಸಾಧ್ಯವಾಗಲಿಲ್ಲ. ಅವನು ಪೋಸ್ಟ್ ಆಫೀಸ್ ಬಳಿ ಬಂದಿರಬಹುದು. ಸರ್ವಪ್ರಯತ್ನಮಾಡಿ ನಡುಗುವ ಧ್ವನಿಯಲ್ಲಿ ಹೇಳಿದ.

"ದೊಡ್ಡಪ್ಪ, ಜಾ..ಮೀ. ನ್ ಮೇಲೆ ಬಿ ...ಬಿಡಿಸಿದರು."

"ಬಡವರ ಮೇಲೆ ಅಷ್ಟಾದರೂ ಕೃಪೆದೋರಿದರಲ್ಲ. ಅಲ್ಲ, ನೀನು ಅದು ಹೇಗೆ ನಮ್ಮ ಸಾಮಾನೆಂತ ಒಪ್ಪಿಕೊಂಡೆ. ಇಷ್ಟೂ ಯೋಚಿಸಬಾರದೆ?"

"ಛೆ! ನನಗೆಂಥ ಮಂಕು ಕವಿದಿತ್ತೋ ಏನೋ!"

ಆ ವೇಳೆಗೆ ಪ್ರೇಮಚಂದ್ರ, ಮಾಧು ಅಲ್ಲಿಗೆ ಬಂದರು. ಕೊಂಚ ಸಮಯ ಎಲ್ಲರೂ ಮೌನ.

ದೊಡ್ಡಪ್ಪ ಬಲಗಡೆಗೆ ತಿರುಗಿ ತಮ್ಮ ಮನೆಯಕಡೆ ಹೊರಟರು. ಯಾವುದೋ ಬಸ್ಸೊಂದು ಧೂಳನ್ನೆಬ್ಬಿಸಿಕೊಂಡು ಹೊರಟು ಹೋಯಿತು. ಹುಚ್ಚನೊಬ್ಬ ಪದವೊಂದನ್ನು ಹೇಳಿಕೊಂಡು ಹೋಗುತ್ತಿದ್ದ. ತನ್ನ ಸ್ಥಿತಿ ಆ ಹುಚ್ಚನಿಗಿಂತ ಕಡೆಯಾಯಿತೆಂದುಕೊಳ್ಳುತ್ತಿದ್ದ. ಅಲ್ಲಿಯೇ ಇದ್ದುಕೊಂಡು ಆ ಸನ್ನಿವೇಶ ಕೊಡುವ ಭೀಕರ ಆಜ್ಞೆಯನ್ನು ಅವನು ಪರಿಪಾಲಿಸಬೇಕಾಗಿತ್ತು.

ನಾಲ್ವರೂ ಮನೆಗೆ ಬಂದು ಸೇರಿದರು ಗಂಗಮ್ಮ ಅಳುತ್ತಾ ಕುಳಿತಿದ್ದಳು ಪಕ್ಕದ ಮನೆ ಗೌರಮ್ಮ, ಪಾರ್ವತಿಬಾಯಿ, ನೀಲಮ್ಮ, ಶಿವಕ್ಕ ಹೀಗೆ ಹತ್ತಾರು ಹೆಣ್ಣುಮಕ್ಕಳು ಆಕೆಗೆ ಸಮಾಧಾನ ಹೇಳುತ್ತಿದ್ದರು.

ಪುಟ್ಟಮಕ್ಕಳಾಗಿದ್ದಾಗಿನಿಂದ ಸಾಕಿಸಲುಹಿ ವಿದ್ಯಾವಂತರನ್ನಾಗಿ ಮಾಡಿದ ಕರುಳದು. ರೇಣುಕನ ವಿಷಮ ಪರಿಸ್ಥಿತಿಯನ್ನು ನೆನೆದು ಸಹಜವಾಗಿ ಗಂಗಮ್ಮನ ಕರುಳು ಕುಯ್ದುಹೋಯಿತು.

ಪ್ರೇಮಚಂದ್ರರಿಗೂ ಕಣ್ಣು ತೇವವಾಯಿತು ನಡುವೆ ಬಾಯಿ ಹಾಕಿ ಅಂದರು "ಆ ದೇವರು ಇದ್ದಾನೆ; ಎಲ್ಲರನ್ನೂ ಕಾಪಾಡುತಾನೆ. ಎದೆ ಒಡೆಯಬೇಡಿ. ಎಲ್ಲಿಗೆ ಹೋಗಿದಾರೆ ಅಣ್ಣಯ್ಯ?"

"ಅತ್ತ, ಗುರುಮೂರ್ತಿ ಆ ದೊಡ್ಡ ಮನುಷ್ಯನ ಮನೆಗೆ ಹೋಗಿದ್ದಾರೆ. ಇಂತಹ ಮಕ್ಕಳು ಅವರಿಗೂ ಇದಾವೋ ಏನಿಲ್ಲೊ ? ..."

ಎಂದು ಗಂಗಮ್ಮ ಬಿಕ್ಕಿಬಿಕ್ಕಿ ಅಳಲಿಕ್ಕೆ ಪ್ರಾರಂಭಿಸಿದಳು. ಗಂಡುಮಕ್ಕಳು ಬಂದಿದ್ದನ್ನು ನೋಡಿದ ಆ ಗೃಹಿಣಿಯರು ಸರಸರನೆ ಮನೆಯತ್ತ ಧಾವಿಸಿದರು. ಗಂಗಮ್ಮನವರ ಅಳು ದೋಣಿಯಂತೆ ಕಟ್ಟೊಯೊಡೆದು ಬರುತ್ತಿತ್ತು. ಆ ದುಃಖವನ್ನು ಹೇಗೆ ನಿಲ್ಲಿಸಿಕೊಳ್ಳಬೇಕೆಂದು ಅವಳಿಗೇ ತಿಳಿಯಲಿಲ್ಲ. ಪ್ರೇಮಚಂದ್ರ ಆಕೆಗೆ ಸಮಾಧಾನ ಮಾಡಿ, ದೊಡ್ಡಪ್ಪನವರ ಮನೆಗೆ ಹೋದರು.

ಸಾಹುಕಾರರು ಆರಾಮಕುರ್ಚಿಯ ಮೇಲೆ ಕುಳಿತುಕೊಂಡಿದ್ದರು. ಪಕ್ಕದ ಬೆಂಚಿನ ಮೇಲೆ ಗುರುಮೂರ್ತಿ, ಶಿವಣ್ಣಯ್ಯ ಕುಳಿತುಕೊಂಡಿ

ದ್ದರು. ಇವರು ಬಂದಮೇಲೆ ಮತ್ತೊಂದು ಬೆಂಚು ತಂದು ಹಾಕಿಸಿದರು.

ದೊಡ್ಡಪ್ಪ ಮಾತು ಮುಂದುವರಿಸುತ್ತ,

"ಹೂಂ....ಅವನಿಗೆ ಬಂದ ಕಷ್ಟ ನಮಗೆ ಬಂದಂತೆ" ಎಂದರು ದೊಡ್ಡಪ್ಪ.

"ಸಾಹುಕಾರರ ಮಾತು ನಿಜ ಆದರೆ ."

"ಏನಾದರೂ ಮಾಡಿ ಇದರಿಂದ ಪಾರು ಮಾಡಿ ಬಿಡಿ. ದೊಡ್ಡ ಕಂಟಕದಿಂದ ಪಾರುಮಾಡಿದ ಹಾಗಾಗುತ್ತದೆ" ಎಂದು ಗದ್ಗದಿತ ಕಂಠದಲ್ಲಿ ಗುರುಮೂರ್ತಿ ನುಡಿದ.

"ಆಗಲಿ ಸ್ವಾಮಿ, ಯಾರು ಬೇಡೆಂತ ಹೇಳಿದರು. ಇಲ್ಲವಿದ್ದರೆ ದೇವರು ಮೆಚ್ಚ್ತಾನೆ."

"ಈಗೇನು ಪೋಲೀಸ್ ಠಾಣ್ಯದಲ್ಲಿ ಹೇಳಿಬಂದಿದ್ದೀರಿ ಸಾಹುಕಾರರೆ?" ಎಂದು ನಡುವೆಯೇ ಮಾಧವರಾವ್ ಪ್ರಶ್ನಿಸಿದ.

"ಈಗ ಜಾಮೀನಿನ ಮೇಲೆ ಬಿಡಿಸಿದ್ದಾಗಿದೆ. ಕೋರ್ಟಿನಲ್ಲಿ ಮೊಕದ್ದಮೆ ನಡೆಸುತ್ತಾರೆ. ನಾವೂ ವಕೀಲರನ್ನು ಇಡೋಣ ಅದ್ಯಾಕರಿ ಹೆದರಬೇಕು? ಆ ಕಡೆ ಸ್ಟೇಷನಲ್ಲಿನ ಅಭಾವದ ವಸ್ತುಗಳನ್ನು ನಾಗನು ತ್ರಿಪ್ಪವು. ಅವನಾಗ ತಪ್ಪೇನು ಬಂತು!" ಎಂದು ಜೋರಾಗಿ ನಗು ಬೀರುತ್ತಾ ನುಡಿದರು ದೊಡ್ಡಪ್ಪ.

"ಅಲ್ಲಾರಿ, ನಡುವೆ ಏನಾದರೂ ಮಾಡಿ ಮುರಿದು ಹಾಕಲಿಕ್ಕೆ ಬರಲ್ಲವೇ? ಮತ್ತೆ ಕೋರ್ಟಿನಲ್ಲೇನಾದರೂ "

"ಪೋಲೀಸ್ ಇನ್‌ಸ್ಪೆಕ್ಟರ್ ಬಹಳ ಕಾನೂನುದಾರರು. ನಾವೇನೂ ಮಾಡಬರಲ್ಲ, ನಾವು ನಿಯಂತ್ರಿಕರಿದ್ದೇವೆ ಅಂತಂದರು"

"ಹೂಂ ." ಎಂದು ಶಿವಣ್ಣಯ್ಯ ಉಸಿರ್ಗರೆದರು.

"ಆಗಲಿ ನೀವಿನ್ನು ಹೊರಡೋಣವಾಗಬಹುದು" ಎಂದು ದೊಡ್ಡಪ್ಪ ಅವರನ್ನೆಲ್ಲಾ ಒತ್ತಾಯಪೂರ್ವಕವಾಗಿ ಬೀಳ್ಕೊಟ್ಟರು.

ದಾರಿಯಲ್ಲಿ ಪ್ರೇಮಚಂದ್ರ, ವಿಶ್ವನಾಥರಾವ್, ಮಾಧವರಾವ್ ವಿಭಕ್ತರಾದರು. ಉಳಿದ ಮೂವರೂ ನಿರುತ್ಸಾಹದವರಾಗಿ ಮನೆಯನ್ನು ಸೇರಿದರು. ಗಂಗಮ್ಮ ಬಾಗಿಲ ಬಳಿ ನಿಲ್ಲುತ್ತಾ ಸ್ವರದಲ್ಲಿ ಕೇಳಿದಳು:
"ಏನು? ಪೋಲೀಸ್‌ರು ಬಿಟ್ಟರೆ? ಏನಾಯ್ತು ಹೋಗಿದ್ದು....ಅಂ...."

"ಬಿಡದೇನು ಮಾಡುತ್ತಾರೆ? ಆದರೆ ಅವರಿಂದ ಪೂರ್ತಿ ತಪ್ಪಿಸಿ ಕೊಳ್ಳುವುದು ಬಹಳ ಕಷ್ಟ" ಎಂದರು ಶಿವಣ್ಣಯ್ಯ.

"ಬಹಳ ಕಷ್ಟ! ಹಾಗೆಂದರೇನು ಶಿವಣ್ಣ" ಎಂದು ಮುದುಕಿ ಗಾಬರಿಯಿಂದ ಕೇಳಿದಳು.

'ಇವನಂಥ ಅಧಿಕಪ್ರಸಂಗ ಮಾಡಿದನಲ್ಲಾ. ಆ ನಾಮಾಸೆಲ್ಲ ದೊಡ್ಡಪ್ಪನವರದೆಂತ ಯಾಕೆ ಒಪ್ಪಿಕೊಬಾರದಾಗಿತ್ತು? ಇವೆಲ್ಲಾ ಪ್ರಕರಣಗಳು ನಮ್ಮ ಜೀವಕ್ಕೆ ಮುಳ್ಳು ಕಾಡುವ ಗ್ರಹಚಾರ ಎಂತಿವೆಯೋ, ಏನೇನ್ನುತ್ತೋ ನೋಡು"

ಮಗ ರೇಣುಕ ಕಣ್ಣೀರಿಡುತ್ತಾ ಹೇಳಿದ:

"ಏನೆಲ್ಲ ಒರಲಿ, ಜೀವಕ್ಕೆ ಜೀವ ಕೊಡುವೆ- ಎಂದರು. ಅದಕ್ಕೆಂದೇ ಒಪ್ಪಿಕೊಂಡೆ. ಇಲ್ಲದಿದ್ದರೆ ಯಾರು .."

"ತಮ್ಮಾ, ಕಲಿಕಾಲ ಹ್ಯಾಗಿದೆಯೆಂತ ನಿನಗೇನು ಗೊತ್ತು. ಕಾಲ ಚಕ್ರ ಉರುಗಿದೆ. ಶ್ರೀಮಂತರನ್ನು ನಂಬುವ ಕಾಲವಲ್ಲ ಈಗ ಆ ಮಾತು ಪಲ್ಲಟಮಾಡಿದ್ದನ್ನು ಯಾರು ಕೇಳುತ್ತಾರೆ?"

"ಅದು ಹೇಗೆ ಹಾರಿಸುತ್ತಾರೆ ಊರಿನಲ್ಲಿ ನಾಲ್ಕು ಜನ ಹೇಳು ವುದಿಲ್ಲವೆ?" ಎಂದ ರೇಣುಕನ ಅಗ್ರಜ.

"ಮೂರು ಕಾಸಿನ ಆದಾಯವಿಲ್ಲ. ಕತ್ತಿ ಜೋಕಿದಂತೆ ಇದು ಬೇರೆ ವಹಿಸಿದರು. ನಿನಗೆ ಅಂದೇ ಬೇಡೆಂದು ಹೇಳಿದೆ, ಕೇಳಬೇಕಲ್ಲ ನೀನು. ನಾಲ್ಕು ಕಾಸು ಮನೆಗೆ ತರುವುದು ಬೇಡ, ಖಾತೆ—ಖಿರ್ದಿ ಇತ್ಯಾದಿ ಸರಾಗವಾಗಿ ಕಲಿಯಕೊಳ್ಳಲಿ ಎಂತ ನೇರಿಸಿದರೆ ಈ ವಕ್ರ ದೃಷ್ಟಿಯನ್ನು ಶನಿ ಬೀರುತ್ತಾನೆಂದು ಯಾರಿಗೆ ಗೊತ್ತಿತ್ತು?"

ಎಂದು ಉಸಿರ್ಗರೆಯುತ್ತ ಶಿವಣ್ಣಯ್ಯ ಹೊರ ಜಗುಲಿಯ ಮೇಲೆ ಬಂದು ಕುಳಿತರು ಅವರ ದೇಹದಲ್ಲಿ ಯಾವುದೋ ವಿಷಕ್ರಿಮಿ ಹೊಕ್ಕು ಕೊರೆಯುವಂತಾಗುತ್ತಿತ್ತು, ಎಂದೂ ಇಲ್ಲದ ನಿಶ್ಚೇಷ್ಟತೆ ಇಂದು ಹುಟ್ಟಿತ್ತು. ಒಂದೆರಡು ಹಜ್ಜೆಗಳನ್ನಿಡಲು ಸಹ.ಶಕ್ತಿ ಕುಂದಿಹೋಗಿತ್ತು. ಅವರಿಗೆ ಇದೊಂದು ಕುತ್ತು ದೊಡ್ಡ ಕಂಟಕಪ್ರಾಯವಾಗಿ ಪರಿಣಮಿ ಸಿತ್ತು.

ದೊಡ್ಡಪ್ಪನವರಿಗೂ ತಾವಿಷ್ಟುದಿನ ಕಳ್ಳದಾರಿಯಲ್ಲಿ ಮಾಲುಗಳನ್ನು

ಸಾಗಿಸುತ್ತಿದ್ದುದು ತಪ್ಪೆಂದು ಈಗೀಗ ಅರಿವಾಗಲಿಕ್ಕೆ ಮೊದಲಾಯಿತು. ತಮ್ಮ ಆ ಕಾರ್ಯವಕ್ಕಾಗಿ ಆ ಬಡ ಹುಡುಗನನ್ನು ಅಣಿಮಾಡಿ ಕುತ್ತು ತಂದೊಡ್ಡಿದ್ದರೂ, ಅದರಲ್ಲಿ ಅವರು ಮೀನಿನಂತೆ ಸಿಕ್ಕಿಬಿದ್ದಿರುವುದೂ ಅರಿವಾಗದಿರಲಿಲ್ಲ. ಏನಾದರೂ ಮಾಡಿ, ವಿಪುಲ ಪ್ರಯತ್ನಮಾಡಿ ಇದರಲ್ಲಿ ಅವರು ವಿಜಯಿಗಳಾಗಬೇಕಾಗಿತ್ತು ಆದುದರಿಂದ ಇವರ ಪರವಾಗಿ ವಕೀಲರೊಬ್ಬರನ್ನು ನಿಯುಕ್ತಮಾಡಿದರು. ವಕೀಲರು ಸರಿಯಾದ ಭರವಸೆಯನ್ನು ಕೊಡಲಿಲ್ಲ. ಅವರು ಹೇಳಿದರು.

"ಅಪಾದಿತ ವ್ಯಕ್ತಿ ತನ್ನ ತಪ್ಪನ್ನು ಒಪ್ಪಿಕೊಂಡಿರುವುದರಿಂದ, ಜಯಾಪಜಯಗಳ ಬಗ್ಗೆ ನಾನು ಹೇಳಲಾರೆ. ಆದರೆ ತುಂಬಾ ಪ್ರಯತ್ನ ಮಾಡಿ ನೋಡುವುದು."

ಈ ಒಂದು ಕಾರಣದಿಂದ ದೊಡ್ಡಪ್ಪನವರಿಗೇ ಜಯವಾಗುತ್ತದೆ, ಎಂದು ಯಾರೂ ಊಹಿಸುವಂತಿರಲಿಲ್ಲ. ಆಗಲೇ ಕೋರ್ಟಿನಲ್ಲಿ ಈ ಸಂಬಂಧದ ವಿಚಾರಣೆಗಳು ಪ್ರಾರಂಭವಾಗಿದ್ದವು. ದೊಡ್ಡಪ್ಪನವರ ಪರ ಸರಿಯಾದ ಸಾಕ್ಷಿಗಳೂ ಸಹ ನಡೆಯುತ್ತಿದ್ದವು. ಅವರ ವಕೀಲರು ಕಳಕಳಿಯಿಂದ ಕೆಲಸ ನಡಸುತ್ತಿದ್ದರು.

ಊರಿನಲ್ಲಿ ಪ್ರತಿ ಬೆಳಗೂ ಜನ ಈ ಮೊಕದ್ದಮೆಯ ವಿಚಾರಣೆಗಳನ್ನು ಆಸ್ಥೆವಹಿಸಿ ಓದುತ್ತಿದ್ದರು ಪತ್ರಿಕೆಗಳಲ್ಲಿ ಇದನ್ನು ಕುರಿತಾಗಿ ಊರಿನ ಯಾವ ಮೂಲೆ ಮೂಲೆಗಳಲ್ಲಿ ನೋಡಿದರೂ ಊರಿನ ಹಿರಿಯರು, ತರುಣರು, ವಿದ್ಯಾರ್ಥಿಗಳು ಗುಜುಗುಜು ಮಾತನಾಡುತ್ತಿದ್ದರು.

ಪಿಸಣ್ಣಯ್ಯ, ಗಂಗಮ್ಮ, ಗುರುಮೂರ್ತಿ ಈಗ ಹಲವು ದಿನಗಳಿಂದ ಇಳಿದುಬಿಟ್ಟಿದ್ದರು. ಯಾರಿಗೂ ಒಂದು ಹೊತ್ತು ಅನ್ನ ಸರಿಯಾಗಿ ಸೇರುತ್ತಿದ್ದಿಲ್ಲ. ಮೂವರೂ ಬಸವಳಿದು ಬೆಂಡಾಗಿದ್ದರು. ಮೂಕವೇದನೆ ಅವರನ್ನು ಕ್ಷಯದಂತೆ ತಿನ್ನುತ್ತಿತ್ತು; ಅದು ಅವರನ್ನು ಮೂಳೆಯ ಹಂದರವನ್ನಾಗಿ ಮಾಡಿತ್ತು. ಇತ್ತ ರೇಣುಕನೂ ಕೂಡ ಯಾರೊಂದಿಗೂ ಅಷ್ಟಾಗಿ ಮಾತನಾಡುತ್ತಿದ್ದಿಲ್ಲ. ಅವನು ಏಕಾಂತಪ್ರಿಯನಾಗಿಬಿಟ್ಟಿದ್ದ. "ಓ! ಪ್ರಪಂಚವೆ ..."ಎಂದು ಒಮ್ಮೊಮ್ಮೆ ಎನ್ನುವನು. "ಬಾಳು, ರಾಜಮಾರ್ಗದಲ್ಲಿ ..." ಎಂದು ಇನ್ನೊಮ್ಮೆ ಉಸಿರೆಳೆಯುವನು.

ಒಂದು ದಿನ ಯಾವ ವಿಚಾರಣೆಗಾಗಿ ಜನ ತುಂಬಾ ಆಸ್ಥೆವಹಿಸಿ

ಕೇಳುತ್ತಿದ್ದರೋ, ಯಾರ ಬಗ್ಗೆ ಕಳಕಳಿಯಿಂದ ಮನಸ್ಸು ಸಹಕಾರವನ್ನು ವಹಿಸುತ್ತಿತ್ತೋ, ಅವರ ವಿಚಾರಣೆಯ ಫಲಿತಾಂಶ ಹೊರಬಿತ್ತು.

ತಪ್ಪು ರೇಣುಕಪ್ರಸಾದನ ಮೇಲೆ ಹೊರಿಸಲಾಗಿತ್ತು. ಅವನಿಗೆ ಒಂದು ವರ್ಷ ಕಠಿನ ಶಿಕ್ಷೆ ಮತ್ತು ದಂಡ ಹಾಕಲ್ಪಟ್ಟಿತ್ತು! ಈ ಸುದ್ದಿ ಅವನ ಮನೆಯವರಿಗೆಲ್ಲಾ ತಿಳಿದು ಕಾದ ಕಬ್ಬಿಣದಿಂದ ಬರೆ ಎಳೆದ ಹಾಗಾಯಿತು. ಶಿವಣ್ಣಯ್ಯ, ಗಂಗಮ್ಮ ಜಡಿಮಳೆಯಂತೆ ಅತ್ತಿದ್ದರಿಂದ ಕಣ್ಣು ಕೆಂಪಡರಿ ಉರಿಯುತ್ತಿದ್ದವು. ಶ್ರೀಮಂತ ದೊಡ್ಡಪ್ಪನವರು ತಮ್ಮ ಉದಾರ—ವಿಶಾಲ ಹೃದಯದಿಂದ ಇವನ ಮೇಲೆ ಹಾಕಿದ್ದ ದಂಡ ವನ್ನು ಕೊಡಲೊಪ್ಪಿದರು, ಅಷ್ಟಾದರೂ ಕರುಣೆತೋರಿ ತಮ್ಮ ದೊಡ್ಡ ಸ್ತಿಕೆಯನ್ನು ಅವರು ಪ್ರದರ್ಶಿಸಿಕೊಂಡರು.

"ಅವರವರ ಹಣೆಯ ಬರಹದಲ್ಲಿ ಬರೆದಂತಾಗುತ್ತೆ. ಇದಕ್ಕಾಗಿ ಯಾರೂ ಏನೂ ಮಾಡಲಾರರು. ಅದು ಅವನ ಹಣೆಯ ಬರಹ. ಅಂದರೆ ಹೀಗೇಕೆ ಆಯಿತು—ಎಂದು ಯಾರೂ ಕೇಳಬಾರದು. ವಿಧಿಯ ಮುಂದೆ ನಿಲ್ಲುವರಾರು ತೋರಿಸಿ" ಎಂದು ಹಾರಿಸಿಬಿಟ್ಟು, ಅವನ ದಂಡದ ಹಣವನ್ನು ಪಾವತಿಮಾಡಿ ಅವನ ಋಣ (?) ಅವರು ಹರಿದುಕೊಂಡರು.

ಫಲಿತಾಂಶ ತಿಳಿದ ಮೂರು ದಿನಗಳಿಂದ ಶಿವಣ್ಣಯ್ಯ ಊಟ ಮಾಡುತ್ತಿದ್ದಿಲ್ಲ. ಯಾವಾಗಲೂ ಯಾವುದಾದರೂ ಯೋಚನೆಯಿಂದ ಅವರು ಮಂಕಾಗಿರುತ್ತಿದ್ದರು. ಒಬ್ಬೊಬ್ಬರ ಪರಿಸ್ಥಿತಿ ಒಂದೊಂದು ವಿಧವಾಗಿತ್ತು. ಮಗನ ಪರಿಸ್ಥಿತಿಯೋ, ಅದನ್ನು ಹೇಳಲಸದಳ. ಈರ್ವರು ಮಕ್ಕಳು ಮನೆಯಲ್ಲಿದ್ದುಕೊಂಡು ಚಟ್ನಿ-ರೊಟ್ಟಿ ತಿಂದುಕೊಂಡು ಕಣ್ಣೆ ದುರಿಗೆ ಇರಲಿ, ಎಂದರೆ ನಿರಪರಾಧಿಗೆ ಕಠಿಣ ಶಿಕ್ಷೆ! ಅದೂ ಒಂದು ವರ್ಷ! ಮೂನ್ನೂರು ಅರವತ್ತೈದು ದಿನಗಳು ಆ ಜೆಂಕಿಯಲ್ಲಿ ತಮ್ಮ ಮಗ ಬೇಯಬೇಕು ಎಂದು ಯೋಚಿಸುತ್ತಾ ಯೋಚಿಸುತ್ತ ಅವರು ಹುಚ್ಚರಂತಾಗುವರು. ತಮುಷ್ಟಕ್ಕೆ ತಾವೆ ಏನನ್ನೋ ಮಾತನಾಡಿಕೊಳ್ಳು ವರು. ಮಗನನ್ನು ಹೇಗೆ ಬಂಧಖಾನೆಗೆ ಬೀಳ್ಕೊಡುವುದು—ಎಂಬ ಯೋಚನೆ ಅವರ ಹೃದಯವನ್ನು ಹಿಂಡುತ್ತಿತ್ತು; ಅದನ್ನು ನೆನಸಿ ಕೊಂಡಾಗ ಅವರು ಮುಖವನ್ನು ಕಿವಿಚಿಕೊಳ್ಳುತ್ತಿದ್ದರು. ಆ ದುರ್ಭರ ವಾದ ದಿನವೂ ಉರುಳುರುಳಿ ಬರುತ್ತಿತ್ತು. ತಮ್ಮ ಮಗ ದೂರ ದೇಶಕ್ಕೆ

ಉಚ್ಚವ್ಯಾಸಂಗಕ್ಕಾಗಿ ಹೋಗುತ್ತಿಲ್ಲ. ಅಥವಾ ಪರಊರಿಗೆ ದೊಡ್ಡ ಹುದ್ದೆಯ ಮೇಲೂ ಹೋಗುತ್ತಿಲ್ಲ. ಹಾಗಿದ್ದರೂ ಹಲವರು ತಮ್ಮ ಮಕ್ಕಳನ್ನು ಕಳುಹಿಸಲಾರದೆ ದುಃಖಡುತ್ತಾರೆ. ಅಂತಹ ಪರಿಸ್ಥಿತಿ ಏನಾದರೂ ಒದಗಿಬಂದಿದ್ದರೆ, ಇವರ ಜೀವನ ಸಾರ್ಥಕವಾಗುತ್ತಿತ್ತು. ಆದರೆ ರೇಣುಕಪ್ರಸಾದನ ಈಗಿನ ಪರಿಸ್ಥಿತಿ ಹದಗೆಟ್ಟಿತ್ತು. ಕಣ್ಣೀರು ಪ್ರತಿದಿನವೂ ಹೇಳದೆ ಕೇಳದೆ ನಿರರ್ಗಳವಾಗಿ ಹರಿಯುತ್ತಿತ್ತು ಅದೆಷ್ಟು ಕಣ್ಣೀರು ಅವನ ಕಣ್ಣುಗಳಲ್ಲಿತ್ತೊ, ಏನೋ ದೇವರೊಬ್ಬ ಬಲ್ಲ! ತನ್ನ ಪರಿಸ್ಥಿತಿ ಅರಿವಾದಾಗ ರೇಣುಕನಿಗೆ ಕಣ್ಣೀರು ಲೀಲಾಜಾಲವಾಗಿ ಕಾರಂಜಿಯಂತೆ ಹೊರಗೆ ಬರುತ್ತಿತ್ತು.

ಆ ದಿನ ಜೈಲಿಗೆ ಹೋಗುವ ಪ್ರಾತಃಕಾಲ ರೇಣುಕಪ್ರಸಾದ ಮಿಂದು ಬಂದು 'ಮೃತ್ಯುಂಜಯ ಪಾರಾಯಣ' 'ಶಾಮಲಾಷ್ಟಕ' ಇತ್ಯಾದಿ ನಿತ್ಯ ಕರ್ಮಗಳನ್ನು ಬಹು ಭಕ್ತಿಪೂರ್ವಕವಾಗಿ ಮಾಡಿ ಒಂದಿಷ್ಟು ಅನ್ನ ಉಂಡ. ಹೆಚ್ಚಾಗಿ ಹಾಕಿಸಿಕೊಳ್ಳಲಿಕ್ಕೆ ಗಂಗಮ್ಮನೂ ಹೇಳಲಿಲ್ಲ ಮನೆಯ ಹೊರಗಡೆ ಪೋಲಿಸಿನವರು ಹರಟೆ ಹೊಡೆಯುತ್ತ ಬೇರೆ ಕುಳಿತುಕೊಂಡಿದ್ದರು. ಅಕ್ಕಪಕ್ಕದ ಮನೆಯ ಹೆಣ್ಣುಮಕ್ಕಳು ಒಂದೆರಡು ಬಾರಿ ಬಂದು ಸುಳಿದುಹೋದರು. ಆ ದಿನ ಅವರ ಪರಮ ದಾಯಾದಿ ಬಸವರಾಜನೂ ಊರಿನಲ್ಲಿ—ಅದೂ ಮನೆಯಲ್ಲಿ ಉಪಸ್ಥಿತನಿದ್ದ. ಅವನಿಗೆ ಇಂದು ದೊಡ್ಡ ಸಮಾರಂಭ. ಅವನಿಗೆ ಮೃಷ್ಟಾನ್ನ ಭೋಜನ ಮಾಡಿದ ಹಾಗೆ ತೃಪ್ತಿ ಆಗಿತ್ತು. 'ಅನ್ಯಾಯ ಮಾಡಿದರೆ ಬಿಡುತ್ತದೆಯೆ, ದೇವರು ಸರಿಯಾಗಿ ಮಾಡಿದ' ಎಂದು ತನ್ನ ಸ್ನೇಹಿತರೆದುರು ಹೇಳುತ್ತ ಅವನು ಬಿದ್ದು ಬಿದ್ದು ನಗುತ್ತಿದ್ದ.

ಊಟ ಮಾಡಿದನಂತರ ನಡುಗುವ ಧ್ವನಿಯಲ್ಲಿ ರೇಣುಕ ಬಂದು ಹೇಳಿದ : "ನನ್ನ ಹಣೆಯ ಬರೆಹದಲ್ಲಿ ಬರದಂತಾಯಿತು. ನೀವೇಕೆ ಯೋಚನೆ ಮಾಡುತ್ತೀರಿ....ಕಣ್ಣೊರಿಸಿಕೊಳ್ಳಿರಿ ...ಹೂಂ. ನಮಸ್ಕಾರ ಮಾಡುವೆ" ಎಂದು ನಮಸ್ಕರಿಸಲು ತಂದೆಯ ಪಾದದ ಕಡೆಗೆ ನೋಡುತ್ತ ನಿಂತ.

ಶಿವಣ್ಣಯ್ಯ ಕಣ್ಣೀರಿಡುತ್ತಾ "ನಾವಿದ್ದೂ ಇಂಥ ಕಷ್ಟಕಾಲ, ಅದೂ ನಮ್ಮೆದುರಿಗೇ ಬಂದಾಯಿತು. ನಮ್ಮ ದು ...ರ....ದೃ....ಷ್ಟ"

"ತಬ್ಬಲಿ ಮಗನನ್ನು ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡಿದ್ದಕ್ಕೆ, ನಾನು ಇಂತಹ ಅವಸ್ಥೆ ನೋಡಬೇಕಾಗಿ ಬಂತು" ಎಂದು ಬಿಕ್ಕುತ್ತಾ ಗಂಗಮ್ಮ ಹೇಳಿದಳು.

ಗುರುಮೂರ್ತಿ ಕಡೆದ ಗೊಂಬೆಯಂತೆ ಕಂಬಕ್ಕೊರಗಿಕೊಂಡು ನಿಂತಿದ್ದ. ಯಾವುದನ್ನೋ ಏನನ್ನೋ ಹೇಳಲು ಅವನು ಪ್ರಯತ್ನ ಮಾಡಿದ. ತುಟಿ ಅಲುಗಾಡಿತೇ ವಿನಾ ಒಂದಕ್ಷರವೂ ಹೊರಗೆ ಬರಲಿಲ್ಲ. ರೇಣುಕಪ್ರಸಾದ ಅವನಿಗೆ ನಮಸ್ಕಾರ ಮಾಡಲು ಬಂದಾಗ, ಕಣ್ಣೀರು ತುಂತುರು ತುಂತುರಾಗಿ ತೊಟ್ಟಿಕ್ಕುತ್ತಿತ್ತು. ಆ ಬಿಸಿ ಹನಿಗಳು ರೇಣುಕ ಪ್ರಸಾದನ ತಲೆಯ ಕೂದಲುಗಳಮೇಲೆ ಬಾಗಿದಾಗ ಬಿದ್ದು, ಆ ಒಣಗಿದ ಕುರುಚಲು ಕೂದಲುಗಳಲ್ಲಿ ಇಂಗಿದವು. ಅಕ್ಕಪಕ್ಕದ ಹೆಣ್ಣುಮಕ್ಕಳು ಭೋರೆಂದು ಅಳಲಿಕ್ಕೆ ಪ್ರಾರಂಭಿಸಿದರು. ಪೋಲಿಸರೂ ರೇಣುಕನನ್ನು ಅವಸರಪಡಿಸುತ್ತಿದ್ದರು.

ಮಳೆಬರುವ ಹಾಗಿದ್ದಿತು. ದಿನಮಣಿ ಮೋಡಗಳ ಮಧ್ಯೆ ಸೇರಿಕೊಂಡು ವಿಲಕ್ಷಣ ಸನ್ನಿವೇಶವನ್ನು ತಂದೊಡ್ಡಿದ್ದ. ಕುಳಿರ್ಗಾಳಿ ಬೀಸುತ್ತಿದ್ದರೂ ರೇಣುಕನ ಮನೆಯವರಿಗೆ ಹೊಟ್ಟೆ ತೊಳೆಸುತ್ತಿತ್ತು. ಅವ್ಯಕ್ತವಾದ ಬಡಬಾಗ್ನಿ ಹೊತ್ತಿಕೊಂಡು ಉರಿಯುತ್ತಿತ್ತು. ಎಲ್ಲರೂ ಮಗನನ್ನು ಬೀಳ್ಕೊಡಲು ಮನೆಯಂಗಳದವರೆವಿಗೂ ಬಂದರು. ಪೋಲಿಸ್ ಖಾತೆಯ ಜೀಪ್‌ಕಾರಿನಲ್ಲಿ ರೇಣುಕಪ್ರಸಾದನನ್ನು ಕುಳ್ಳಿರಿಸಿದರು.

೧೧

ರೇಣುಕಪ್ರಸಾದ ಜೈಲಿಗೆ ಹೋಗುವ ದಿನ ಅವನ ಮೂವರು ಮಿತ್ರರೂ ತಲೆಮರೆಸಿಕೊಂಡಿದ್ದರು. ವಾಸ್ತವವಾಗಿ ಮಾಧವರಾಯನಿಗೆ ಹಾಜರಿ ಕಡಮೆ ಬಂದಿದ್ದು, ಪರೀಕ್ಷೆಗೆ ಪ್ರವೇಶಪತ್ರ ಸಿಕ್ಕುವುದೇ ದುರ್ಲಭವಾಗಿತ್ತು. ಪರೀಕ್ಷೆಯ ಸಿದ್ಧತೆಗಾಗಿ ಇಪ್ಪತ್ತು ದಿನಗಳು ರಜ ಕೊಟ್ಟಿದ್ದರು. ಆದ್ದರಿಂದ ಅವನು ಊರಿನಲ್ಲಿಯೇ ವ್ಯಾಸಂಗ ಮಾಡುತ್ತಿದ್ದ. ಹಾಜರಿ ತೀರ ಕಡಮೆ ಬಂದಿದ್ದರಿಂದ ಅವರು 'ಡಾಕ್ಟರ ಸರ್ಟಿಫಿಕೇಟ'ನೊಂದಿಗೆ ಐದು ರೂಪಾಯಿಗಳ ದಂಡ ಬೇರೆ ತೆರಬೇಕಾಗಿತ್ತು. ನಿಯತ ಸಮಯಕ್ಕೆ ಸರಿಯಾಗಿ ಕಟ್ಟಲು ಅವನಿಗೆ ಹಣವೂ ಒದಗಲಿಲ್ಲ. ಇತ್ತ ಮನೆಯಲ್ಲಿ ಅವರ ಅಜ್ಜಿಗೆ ಒಣಕೆಮ್ಮು ತೀವ್ರವಾಗಿ, ಮಾತನಾಡಲು ಸರಾಗವಾಗಿ ಬರುತ್ತಿದ್ದಿಲ್ಲ.—ಆದರೂ ದೇವರಮೇಲೆ ಭಾರಹಾಕಿ ಅವನು ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿತ್ತು. ನಿಯಂತ್ರಿತ ಸಮಯ ತೀರಿದ್ದರೂ ಸಹ ಮುಖ್ಯೋಪಾಧ್ಯಾಯರನ್ನು ಕಂಡು ತನ್ನ ವಿನಂತಿಯನ್ನು ಅವನು ಹೇಳಿಕೊಳ್ಳಬೇಕಾಗಿತ್ತು.

ಗಾಡಿಯಲ್ಲಿ ಹೋಗಲು ಅವನಿಗೆ ಹಣವಿರಲಿಲ್ಲ. ವಿಶ್ವನಾಥನಿಂದ ಸೈಕಲ್ಲೊಂದನ್ನು ತೆಗೆದುಕೊಂಡು ಹೋಗಿ 'ರೆಕ್ಟಾರ್' ಕಂಡು ಮೆಲು ದನಿಯಲ್ಲಿ ಕೇಳಿದ:

"ಇಪ್ಪತ್ತನೆಯ ತಾರೀಖಿನೊಳಗಾಗಿ ಐದು ರೂಪಾಯಿಗಳನ್ನೂ ಡಾಕ್ಟರ್ ಸರ್ಟಿಫಿಕೇಟನ್ನೂ ಹಾಜರಿ ಕಡಮೆ ಬಂದಿರುವುದರಿಂದ ಕಟ್ಟಬೇಕಾಗಿತ್ತು. ಆದರೆ ನಾನು ನಮ್ಮ ಊರಿನಲ್ಲಿಯೇ ಅಭ್ಯಾಸ ಮಾಡುತ್ತಿದ್ದೆ. ಪ್ರಕಟ ಮಾಡಿದ್ದುದು ಗೊತ್ತಾಗಲಿಲ್ಲ. ಈಗ ಬರುತ್ತದೆಯೆ?...."

ಭಕ್ತವತ್ಸಲರು ಕೆಂಚ ಶೀಘ್ರ ಕೋಪಿಗಳೂ ಅತ್ಯಂತ ಬುದ್ಧಿವಂತರೂ ಹೌದು. ಪಾಶ್ಚಾತ್ಯದೇಶಕ್ಕೂ ಹೋಗಿ ಅಲ್ಲಿ ಅವರು ಹೆಚ್ಚಿನ ಅಭ್ಯಾಸಮಾಡಿದ್ದರು. ಆ ಉಚ್ಚ ಓದಿನ ಪ್ರಭಾವದಿಂದಲೋ ಅಥವಾ ಬೇರೆ ಯಾವ ಕಾರಣದಿಂದಲೊ ಅರ್ಧ ಹುಚ್ಚರಾಗಿದ್ದರು! ವಿದ್ಯಾರ್ಥಿಗಳೂ ಉಪಾಧ್ಯಾಯರು ಇವರ ಬಗ್ಗೆ ತುಂಬ ನೊಂದುಕೊಳ್ಳುತ್ತಿದ್ದರು.

ಪಾಪ! ಎಲ್ಲಾ ವಿಷಯಗಳಲ್ಲಿ ಪಂಡಿತರಿದ್ದೂ ಸಹ ಅದನ್ನು ಸರಿಯಾದ ದಾರಿಯಲ್ಲಿ ಭಕ್ತವತ್ಸಲರು ಉಪಯೋಗಿಸಿಕೊಳ್ಳುವಂತಿರಲಿಲ್ಲ. ಭಾಷಣ ಮಾಡುವುದಕ್ಕೆಂದು ನಿಂತರೆ, ಹೊಟ್ಟೆ ಹುಣ್ಣಾಗುವವರೆವಿಗೂ ಶ್ರೋತೃವರ್ಗ ಅವರನ್ನೇ ನೋಡಿ ನಗುತ್ತಿದ್ದರು. ಅರ್ಥಾರ್ಥ ಸಂಬಂಧವಿಲ್ಲದ ಅವರ ಮಾತುಗಳೇ ಅದಕ್ಕೆ ಕಾರಣ ಯಾರಾದರೂ ವ್ಯಾಖ್ಯಾನಕಾರರು "ಕನ್ನಡ ದೇವಿಯನ್ನು ಮುಂದಕ್ಕೆ ತರಬೇಕು. ನಮ್ಮ ಕನ್ನಡ ಮಾತೆ ಸೊರಗಿದ್ದಾಳೆ. ನಾವು ಬಹಳ ಹಿಂದುಳಿದಿದ್ದೇವೆ. ನಮ್ಮ ಭಾಷೆಯೂ ಅದಕ್ಕೂ ಹಿಂದುಳಿದಿವೆ. ನಮ್ಮ ಸಾಹಿತ್ಯ ವಿಶ್ವಸಾಹಿತ್ಯದ ಮೇಲಾಟದಲ್ಲಿ ಪ್ರಗತಿದಾಯಕವಾಗಿ ಮುನ್ನುಗ್ಗಬೇಕಾದರೆ, ತಣ್ಣೀರು ಈಗ ಅವಶ್ಯ ಬೇಕಾಗಿದೆ. ಹಾಗಾದರೇನೇ ಆ ತಣ್ಣೀರಿನಿಂದ ಕನ್ನಡದ ಬಳ್ಳಿ ಚಿಗುರಿ ಹಬ್ಬುವುದರಲ್ಲಿ ಸಂದೇಹವಿಲ್ಲ"—ಎಂದು ಹೇಳಿದರೆ, ಇವರು, "ನಾವು ನಮ್ಮ ಕನ್ನಡದ ಬಳ್ಳಿಯನ್ನು ಅವಶ್ಯ ಬೆಳೆಸಬೇಕಾಗಿದೆ. ಈಗ ಕನ್ನಡ ಸಾಹಿತ್ಯದ ಬಳ್ಳಿ ಒಣಗಿ, ಹೇಳ ಹೆಸರಿಲ್ಲದೆ ಹೋಗಿದೆ ಆದುದರಿಂದ ತಣ್ಣೀರಿಲ್ಲದಿದ್ದರೂ, ತುಂಬಾ ಕಾದ ಬಿಸಿನೀರಿನಿಂದ ಬೆಳೆಸುವ" ಎಂದು ಹೇಳಿ ನಕ್ಕು ನಗಿಸುತ್ತಿದ್ದರು. ಬಿಸಿನೀರಿನಿಂದ ಒಣಗಿದ ಬಳ್ಳಿ ಇನ್ನೂ ಒಣಗುವುದಲ್ಲದೆ, ಅದು ಹೇಗೆ ಚಿಗುರಬಲ್ಲದೆಂಬ ಯೋಚನೆ ಆ ಅರ್ಥ ಹುಚ್ಚಿನಿಂದ ಅವರಿಗೆ ಹೊಳೆಯುತ್ತಿರಲಿಲ್ಲ.

ಈಗ ಮಾಧುವಿನ ಮಾತುಕೇಳಿ ಶೀಘ್ರ ಸಿಟ್ಟುಬಂತು ಭಕ್ತವತ್ಸಲರಿಗೆ.

"ರಿ....ರಿ .ರೀ ಶಿವರಾವ್ ಎಂಥ ಕ್ರ್ಯಾಕುಗಳಿರಿ ಇವು! ಎಂಥ ಕ್ರ್ಯಾಕ್‌ಗಳು ಬಂದು ಗಂಟು ಬೀಳುತ್ತವೆ ನಮಗೆ...." ಎಂದು ಅವರು ಉದ್ಗಾರ ತೆಗೆದರು.

ಶಿವರಾವ್ ಭಕ್ತವತ್ಸಲರೆದುರಿಗೆ ಬಂದು ನಿಂತುಕೊಂಡರು. ಶಿವರಾವ್ ಬಹು ಸರಳ ಸ್ವಭಾವಿ. ಭಕ್ತವತ್ಸಲರ ಮಾತು ಅವರಿಗೂ ಸರಿ ಬೀಳಲಿಲ್ಲ. ಆದರೆ ಆ ಅರ್ಥ ಹುಚ್ಚಿರುವುದರಿಂದ ತಮಗೂ ಅಂಥ ಕರಿನ ಮಾತುಗಳ ಗದಾ ಪ್ರಹಾರ ಆಗಾಗ ಆಗುತ್ತಿದ್ದುದರಿಂದ, ಅವರು ಅವಾಕ್ಕಾಗಿ ನಿಂತುಕೊಂಡರು.

ಪುನಃ ಅದೇ ಮಾತನ್ನು 'ರೆಕ್ಕಾರ್' ಎಂದರು. ಮಾಧವರಾಯನಿಗೆ

ಸ್ವಾಭಿಮಾನ ಹುಟ್ಟಿತು. ತನ್ನ ಎರಡು ವರ್ಷಗಳ ವಿದ್ಯಾಭ್ಯಾಸ ಮಣ್ಣು ಮುಕ್ಕಿದರೂ ಸರಿಯೆ, ಇಂಥ ಅರ್ಥ ಹುಚ್ಚರಿಗೆ ಸರಿಯಾಗಿ ಕೈ ತೋರಿಸಬೇಕೆಂದು ಯೋಚಿಸಿದ. ಕಣ್ಣು ಕೆಂಪುಮಾಡಿ ಕೊಂಚ ಬಿರುಸಾಗಿ ಘಂಟೆಯಂತೆ ಹೇಳಿದ: "ನಾನು ಪರೀಕ್ಷೆಗೆ ಕೂತುಕೊಳ್ಳುವುದಿಲ್ಲ.... ಸಾಧ್ಯವಾದರೆ ಮಾಡಿ" ಇನ್ನೂ ಏನನ್ನೋ ಆಡಬೇಕೆಂದು ಅವನ ನಾಲಿಗೆ ಹರಿಯಿತು; ಆದರೆ ಹೇಗೋ ತಡೆದುಕೊಂಡ.

ಭಕ್ತವತ್ಸಲರೂ ಕೂಡ ಕೊಂಚ ಏರಿದ ಧ್ವನಿಯಲ್ಲಿ ಹೇಳಿದರು:

"ಇದು ಬೇರೆ! .."

ಅವರ ಧ್ವನಿ ಏನೋ ಒಂದು ವಿಚಿತ್ರತೆಯಿಂದ ಕೂಡಿತ್ತು. ಅದನ್ನು ಏರಿದ ಧ್ವನಿಯಲ್ಲಿ ರಾಗವಾಗಿ ಹೇಳಿದ್ದರು. ಈಗ ಮಾಧವರಾವ್ ಇನ್ನೂ ಉದ್ರೇಕಗೊಂಡ. ಕತ್ತು ಬಿಗಿದು ಬಂತು. ಕೊಂಚ ದುಃಖವೂ ಆಯಿತು. ಓದಿದವರೂ ಕೂಡ ಹೀಗೆ ತಾಳ್ಮೆಯಿಲ್ಲದೆ ಮಾತನಾಡುತ್ತಾರಲ್ಲ, ಮರ್ಯಾದೆಯಿಂದ ವಿದ್ಯಾರ್ಥಿಯೋರ್ವನು ತನ್ನ ಕಷ್ಟ ಸುಖವನ್ನು ಹೇಳಿದಾಗ, ಮರ್ಯಾದೆಯಿಂದ ಉತ್ತರ ಕೊಡಬೇಡವೇ? ಇರಲಿ, ಈ 'ಕ್ರ್ಯಾಕ್'ಗೆ ಬಿಸಿ ತೋರಿಸುತ್ತೇನೆ. ಇದಕ್ಕಾಗಿ ಪರೀಕ್ಷೆಗೂ ಕುಳಿತುಕೊಳ್ಳಬಾರದು. ಕಾಲೇಜಿಗೆ ಇಲ್ಲಿಗೇ ಕೈಮುಗಿಯಬೇಕೆಂದು ಧೇನಿಸಿ,

"ಹಾಗೆಲ್ಲಾ ಬೇರೆ ಏನೂ ತಿಳಿದುಕೊಳ್ಳಬೇಡಿ....ಸಾಧ್ಯವಿದ್ದರೆ ಮಾಡಿ" ಎಂದ.

ಈ ವೇಳೆಗೆ ಭಕ್ತವತ್ಸಲರ ಮುನಿಸೂ ಸ್ವಲ್ಪ ಇಳಿಯಿತು. ಗುಮಾಸ್ತೆ ಶಿವರಾಯನನ್ನು ಕೇಳಿದರು:

"ಇವರ ವಿಚಾರವಾಗಿ ಏನು ಬರೆದಿದ್ದೀರಿ?"

"ಟ್ರಾವಲರ್ ಎಂದು ಬರೆದಿದ್ದೇನೆ"

"ಹೆಸರು?"

"ಮಾಧವರಾವ್"

"ಇವರಿಗೆ ಹಾಜರಿ ಎಷ್ಟು ಪರ್ಸೆಂಟ್ ಕಮ್ಮಿ ಬಂದಿರೋದು?"

"ಟೆನ್ ಪರ್ಸೆಂಟ್ ಕಡಮೆ ಬಂದಿದೆ" ಎಂದರು ಗುಮಾಸ್ತೆ ಶಿವರಾವ್.

"ಹಾಗಾದರೆ ಇದೇಕೆ? ಹಾಲ್‌ಟಿಕೆಟ್ ಕೊಡಬಹುದಲ್ಲಾ...."

ಎಂದರು ಭಕ್ತವತ್ಸಲರು

ಶಿವರಾವ್ ಮತ್ತು ಮಾಧವರಾವ್ ಹೊರಗಡಗೆ ಬಂದರು. ಮಾಧವ ರಾಯನಿಗೆ ಇದೊಂದೂ ಅರ್ಥವಾಗಲಿಲ್ಲ. ಪುನಃ ಮಾಧವರಾವ್ ಶಿವರಾಯರೊಂದಿಗೆ ತಾನು ಕ್ರಮ ಸಂಖ್ಯಾಪತ್ರದ ಬಗ್ಗೆ ಕೇಳಿದ. ಅವ ರೆಂದರು

"ಈಗ ಸಮಯ ಮೀರಿರುವುದರಿಂದ 'ಡಾಕ್ಟರ್ ಸರ್ಟಿಫಿಕೇಟ್' ಬೇಡ. ನಿಮಗೆ ಹತ್ತು ಪರ್ಸೆಂಟ್ ಹಾಜರಿ ಹೋಗಿರುವುದರಿಂದ ಐದು ರೂಪಾಯಿಗಳ ದಂಡವನ್ನೂ ತೆರಬೇಕಾಗಿಲ್ಲ." ಇದನ್ನು ಕೇಳಿ ಮಾಧವ ರಾಯನ ಕಣ್ಣುಗಳು ಹೊಳೆದವು.

ಮಾಧವರಾವ್ ಸೈಕಲ್‌ಮೇಲೆ ಪುನಃ ಹರಿಹರದ ಕಡೆ ಹೊರಟ. ಸೈಕಲ್ಲನ್ನು ಹೇಗೋ ತುಳಿಯುತ್ತಿದ್ದ. ರಸ್ತೆಯೂ ಹೇಗೋ ಸಾಗುತ್ತಿತ್ತು. ತಾನೆಲ್ಲಿರುವನೆಂಬ ಅರಿವೂ ಅವನಿಗಿರಲಿಲ್ಲ.

ಅದೆಷ್ಟೋಬಾರಿ ತಾನು ಭಕ್ತವತ್ಸಲರೊಡನೆ ನಡೆಸಿದ ಆ ಸಂಭಾ ಷಣೆಯ ಮಾತುಗಳು ಮಾಧವರಾಯನ ನೆನಪಿಗೆ ಮರುಕಳಿಸುತ್ತಿದ್ದವು. ಯಾವುದೋ ಒಂದು ಬಸ್ಸು 'ಹಾರ್ನ್' ಮಾಡಿದ್ದೂ ಸಹ ಇವನಿಗೆ ಗೊತ್ತಾಗಲಿಲ್ಲ. ಬಹಳ ಹತ್ತಿರ ಬಂದಮೇಲೆ ಪಕ್ಕನೆ ಎಡಕ್ಕೆ ಹೊರಳಿದ.

ರಾತ್ರಿಯಲ್ಲಿ ಸಹ ಅವನಿಗೆ ಬೇಗ ನಿದ್ದೆ ಬರಲಿಲ್ಲ ತನ್ನ ಬಡತನದ ಸಮಸ್ಯೆ ವಿಶ್ವನಾಥನ ಲೈಂಗಿಕ ಸಮಸ್ಯೆ, ರೇಣುಕಪ್ರಸಾದನ ಕರುಣಾ ಮಯ ಸಮಸ್ಯೆ–ಒಂದೆ, ಎರಡೆ ನಾನಾ ವಿಧ ಚಿಂತೆಗಳು ಅವನನ್ನು ಕೊರೆ ಯುತ್ತಿದ್ದವು. ಈ ಮಧ್ಯೆ ಇಂತಹ ಕಾಠಿಣ್ಯದ ಮಾತುಗಳ ಪ್ರಕರಣಗಳು ಬೇರೆ ಬಂದೊದಗುತ್ತಿದ್ದವು. ಪರೀಕ್ಷೆಯಾದಮೇಲೆ ಯಾವುದಾದರೂ ನೌಕರಿಯನ್ನು ಹಿಡಿಯಬೇಕೆಂದು ಅವನು ಯೋಚಿಸಿದ. ಹೇಗಾದರೂ ಮುಂದಿನ ಅಭ್ಯಾಸವನ್ನು ಮಾಡಲು ಸಾಧ್ಯವಾಗುವ ಹಾಗಿಲ್ಲ. ಆ ದಿನವೇ ರೆಕ್ಟಾರ್‌ರಿಗೆ ಸರಿಯಾಗಿ ಬುದ್ಧಿ ಕಲಿಸಿಬಿಟ್ಟಿದ್ದರೆ—ಇತ್ಯಾದಿ ವಿಷಯ ಗಳಿಗೆ ಅವನ ತಲೆಯಲ್ಲಿ ಅಭಾವವೇನೂ ಇರಲಿಲ್ಲ. ಈ ವಿಧವಾದ ಅನಂತ ವಿಚಾರ ಸರಣಿಗಳು ತಲೆದೋರುತ್ತಿದ್ದುವು. ನಡುನಡುವೆ ಮುದುಕಿ ಜೋರಾಗಿ ಕೆಮ್ಮುತ್ತಿದ್ದಳು; ಅದನ್ನು ಕೇಳಿ ಅವನ ಕರುಳು ಹಿಂಡಿತು; ಮುಂದೆ ಅದನ್ನು ಕೇಳಲಾರದೆ ಹೋದ.

"ಅಜ್ಜೀ, ಈ ಔಷಧಿಯನ್ನಾದರೂ ಕುಡಿಯಜ್ಜಿ. ಕೆಮ್ಮು ಒಂದೇ ಹೊತ್ತಿಗೆ ನಿಲ್ಲುತ್ತೆಂತ ಡಾಕ್ಟರು ಹೇಳಿದ್ದಕ್ಕೆ ತಂದೆ."

"ಅಪ್ಪಾ, ಆ ಆಸ್ಪತ್ರೆ ನೀರೊಂದು ಬಿಟ್ಟು, ಬೇರೆ ಏನಾದರೂ ತಿನ್ನುತ್ತೇನೆ.... ಕುಡಿಯುತ್ತೇನೆ ...ಅದೊಂದು. ..ಆಯ್ಯೋ ಕೆಮ್ಮೆ! ನನ್ನ ಜೀವ ತಿನ್ನಲಿಕ್ಕೆ ಬಂದಿದೆಯಪ್ಪ. ರಾಮಾ!....ಎನ್ನುತ್ತಾ ರಾಧಮ್ಮ ಮತ್ತೆ ಕೆಮ್ಮಲಿಕ್ಕೆ ಪ್ರಾರಂಭಿಸಿದಳು.

ಅಡುಗೆ ಮನೆಯಿಂದ ವೊಮ್ಮಗ ನೀರು ತಂದುಕೊಟ್ಟ. ರಾಧಮ್ಮ ಒಂದೆರಡು ಗುಟುಕು ನೀರು ಕುಡಿದಳು.

"ಅಜ್ಜಿ.... ಕುಡಿಯಜ್ಜಿ. ದಮಯಂತಿಬಾಯಿ ಕುಡಿಯಲ್ಲವೆ? ಆಕೆ ನಿನ್ನ ಹಾಗೆ ಮಡಿ ಮಾಡಲ್ವೆ? ತೀರ ಮಡಿ ಮಾಡ್ತೀಯವ್ವ."

"ಮಗು, ಇನ್ನೊಬ್ಬರ ಸುದ್ದಿ ಬೇಡ ಕಣಪ್ಪ ...ಬೇಡ. ನಾನಂತೂ ಏನೆಲ್ಲ ರಂಪು ಮಾಡಿದರೂ ಕುಡಿಯೋದಿಲ್ಲ. ನೀನು ಹೋಗು ಮಾಧು. ಪರೀಕ್ಷೆ ಹತ್ತಿರ ಬರುತ್ತಾ ಇದೆ. ಓದಿಕೋ ಹೋಗು. ಹೂ....ಹೋಗು.... ಹೋಗಪ್ಪ ಹೋಗು ಆ ರಾಜರು ಇದಾರೆ ಹೋಗು" ಎಂದು ಏನನ್ನೋ ಅನ್ನುತ್ತಿದ್ದಳು ರಾಧಮ್ಮ.

ನಿರ್ವಾಹವಿಲ್ಲದೆ ಮಾಧವರಾಯ ಹೋಗಿ ಪುಸ್ತಕ ಹಿಡಿದು ಗೊಣಗುತ್ತ ಕುಳಿತುಕೊಂಡನು.

ಮಾರನೆಯ ದಿನದಿಂದ ಮಾಧವರಾವ್ ಪರೀಕ್ಷೆಗಾಗಿ ಹೆಚ್ಚು ಲಕ್ಷ್ಯಕೊಟ್ಟು ಓದಲಿಕ್ಕೆ ಪ್ರಾರಂಭಿಸಿದ. ಈ ನಡುವೆ ರೇಣುಕನ ಮನೆಗೂ ಹೋಗಿ ಬರುತ್ತಾ, ಅವರಿಗೂ ಸಮಯಾನುಸಾರ ಸಮಾಧಾನ ಹೇಳುತ್ತಲಿದ್ದ. ಆಗಾಗ ಬೇಸರವಾದಾಗ ವಿಶ್ವನಾಥ, ಪ್ರೇಮಚಂದ್ರರೊಂದಿಗೂ ಸರಳವಾಗಿ ಮಾತನಾಡುತ್ತಿದ್ದ. ಆಗಾಗ ಅವನಿಗೆ ರೇಣುಕನ ಕಾಗದಗಳೂ ಸಹ ಬರುತ್ತಿದ್ದವು. ರೇಣುಕ ತನ್ನ ಓಲೆಗಳಲ್ಲಿ ಮನೆಯವರಿಗೆ ಸಮಾಧಾನಪರ ಉಕ್ತಿಗಳನ್ನು ಬರೆದು, ಸೂಕ್ಷ್ಮವಾಗಿ ಬಂದಿಖಾನೆಯ ಜೀವನವನ್ನು ಚಿತ್ರಿಸುತ್ತಲಿದ್ದ. ಯಾವಾಗಲೂ ಅವನದು ಒಂದೇ ಮಂತ್ರ: "ದೇವರು ಯಾರ್‍ಯಾರ ಪಾಲಿಗೆ ಏನನ್ನು ಅನುಭವಿಸಲು ಕೊಡುವನೋ, ಅದನ್ನು ತಲೆಬಾಗಿಸಿಕೊಂಡು ಪರಿಪಾಲನೆ ಮಾಡಬೇಕು. ಪಾಲಿಗೆ ಬಂದದ್ದು ಪಂಚಾಮೃತ ಎಂಬ ಗಾದೆ ಸರಿಯಾಗಿ

ಗೊತ್ತಿರಬೇಕು" ಎಂದು ಮಹಾವೇದಾಂತಿಯಂತೆ ಬರೆಯುತ್ತಿದ್ದನು. ಈ ವಿಚಾರಗಳನ್ನೆಲ್ಲಾ ಅಜ್ಜಿಯ ಎದುರಿಗೆ ಮಾಧವರಾವ್ ಹೇಳುತ್ತಿದ್ದ. ರಾಧಮ್ಮ ಆ ಕಾಹಿಲೆಯಲ್ಲಿಯೂ ಅದನ್ನೇ ಕೇಳಿ ಅಳುತ್ತಿದ್ದಳು. ಬಡವರ ಜನ್ಮವೇ ಹೀಗೆ. ಅವರು ಮಣ್ಣಿನಲ್ಲಿ ಹುಟ್ಟಿ, ಮಣ್ಣಿನಲ್ಲಿ ಬೆಳೆದು, ಮಣ್ಣಿನಲ್ಲಿ ಸಾಯಬೇಕು. ಬಡವರೆಂಬುವರು ಗತಜನ್ಮದಲ್ಲಿ ತುಂಬಾ ಪಾಪ ಮಾಡಿ, ಈ ಜನ್ಮದಲ್ಲಿ ನೋಸಲು ಬಂದಿರುತ್ತಾರೆಂತ ನರ ಹರಿಯುವ ಹಾಗೆ ಆ ಕಾಹಿಲೆಯಲ್ಲಿ ಆಕೆ ಕೂಗುತ್ತಿದ್ದಳು. ಇತ್ತೀಚಿಗೆ ಇಂತಹ ವಿಚಾರಗಳನ್ನು ಹೇಳುವುದನ್ನೂ ಬಿಟ್ಟುಬಿಟ್ಟಳು.

ಈಗ ಹಲವು ದಿನಗಳಿಂದ ದೇವರ ಮೇಲೆ ಅವನಿಗೂ ಇದ್ದ ಅಲ್ಪ ಭಕ್ತಿಯೂ ಕಮ್ಮಿಯಾಯಿತು! ಪೂಜೆ ಪುನಸ್ಕಾರಗಳನ್ನು ಯಾಂತ್ರಿಕವಾಗಿ ಮಾಡುತ್ತಿದ್ದರೂ, ದೇವರ ಮೇಲಿನ ಮೊದಲಿನ ನಿಶ್ಚಲಭಕ್ತಿ ಅಳಿಸಿಹೋಗಿತ್ತು. ದೇವರಿದ್ದರೆ ಹೀಗೇಕೆ ಭಕ್ತಾಗ್ರಣಿಗಳನ್ನು ಪೀಡಿಸುತ್ತಲಿದ್ದ? "ನಂಬಿ ಕರೆದರೆ ಓ ಎನ್ನನೆ ಶಿವನು" ಎಂಬ ನುಡಿ ಪೊಳ್ಳುಡಿಯಾಗಿ ಪರಿಣಮಿಸಿತ್ತು ಮಾಧವರಾಯನಿಗೆ. ವಿಶ್ವನಾಥ, ರೇಣುಕ ಪ್ರಸಾದ, ತನಗೆ ಬಂದೊದಗಿದ್ದ ವಿಷಯ ಪರಿಸ್ಥಿತಿಗಳನ್ನು ನೆನೆದು, ದೇವರ ಬಗ್ಗೆ ಆ ನಿಷ್ಕಳಂಕ ಭಕ್ತಿ ಕಡಮೆಯಾಗಿ ಹೋಗಿದ್ದರಲ್ಲಿ ಆಶ್ಚರ್ಯವೇನಿರಲಿಲ್ಲ. ಆಗಾಗ ಮನಸ್ಸಿನಲ್ಲಿ ಅವನು ದೇವರನ್ನು ನಿಂದಿಸುತ್ತಿದ್ದ. ಹಲವರೊಡನೆ ದೇವರಿಲ್ಲವೆಂದು ಅವನು ವಾದಿಸುತ್ತಿದ್ದ. ಅವನ ಸ್ವಚ್ಛಂದ ಮನೋಪ್ರವೃತ್ತಿ ಬಡತನದ ಬಡಬಾಗ್ನಿಗೆ ಸಿಕ್ಕಿ ಮಂಕಾಗಿತ್ತು. ದೇವರಲ್ಲಿ ಅವನಂಬಿಕೆಯನ್ನುಂಟುಮಾಡಿತ್ತು.

ಮಾಧು ಪರೀಕ್ಷೆಗೆ ಕುಳಿತು ತನ್ನ ಕೈಲಾದಮಟ್ಟಿಗೆ ಉತ್ತಮವಾಗಿ ಉತ್ತರಗಳನ್ನು ಬರೆದ. ಮೊಮ್ಮಗ ಪರೀಕ್ಷೆಗೆ ಹೋದಂದಿನಿಂದ ರಾಧಮ್ಮನವರ ಮೈಯಲ್ಲಿ ವಾಸಿಯಾಗುತ್ತಾ ನಡೆದು, ಬರ ಬರುತ್ತ ಅವರು ಪೂರ್ಣ ಗುಣಮುಖರಾದರು. ಆದರೆ ಒಣಕೆಮ್ಮು ಮಾತ್ರ ಆಗಾಗ ಕೇಳುತ್ತಿತ್ತು. ವಯಸ್ಸು ಮೀರಿರುವುದರಿಂದ ಅದು ಪೂರ್ಣ ಹೋಗುವುದಿಲ್ಲವೆಂದು 'ಪಂಡಿತರತ್ನ' ನರಸಿಂಹಶಾಸ್ತ್ರಿಗಳು ಹೇಳಿಬಿಟ್ಟಿದ್ದರು.

ಪರೀಕ್ಷೆಗೆ ಹೋದಾಗ ಮಾಧವರಾಯನಿಗೆ ಭಕ್ತವತ್ಸಲರ ಮುಖಾವಲೋಕನ ಮಾಡಿದಾಗಲೆಲ್ಲಾ ಮೈಯುರಿಯುತ್ತಿತ್ತು. ಆದರೆ ಏನನ್ನೂ

ಮಾಡಲಾರದ ನಿಸ್ಸಹಾಯಕ ಅವನು.

"ಆ ದಿನ ಅದೇಕೆ ಮಂಕಾಗಿ ನಿಂತುಕೊಂಡಿದ್ದೆ. ಎರಡು ಮಾತುಗಳನ್ನಾಡಲು ಯಾರು ಮೂಗುದಾರ ಹಾಕಿದ್ದರು? ಕೊನೆಗೆ ಇನಿತಾದರೂ ಎನ್ನಲಾರದೆ ಹೋದೆನೆ: "ನೀವು ಕೈಲಾದರೆ ಮಾಡಿ. ಆದರೆ ಕರುಳು ಕುಯ್ಯುವ ಮಾತುಗಳನ್ನಾಡಬೇಡಿ. ನಾನು ಯಾವುದನ್ನು ಸಹಿಸಿದರೂ ಅಂತಹ ಕೂರಲಗಿನ ತಿವಿತದಂತಹ ಮಾತುಗಳನ್ನು ಸಹಿಸಲಾರೆ" ಎಂದು ಮುಖಭಂಗ ಮಾಡಿದ್ದರೆ ಚೆನ್ನಿತ್ತು. ಪರಂತು ಈ ಜಡಬುದ್ಧಿಗೆ ಹೊಳೆಯ ಬೇಕಾಗಿತ್ತಲ್ಲ "

"ಛೆ! ಗುರುಗಳು ಒಂದು ಮಾತೆಂದರೆ ಎನ್ನಿಸಿಕೊಳ್ಳಬಾರದೆ? ಅದಕ್ಕಾಗಿ ಏಕೆ ಇಂತಹ ಕ್ಷುಲ್ಲಕ ವಿಚಾರಗಳು ಹುಟ್ಟಬೇಕು? ಅದಕ್ಕಾಗಿ ಇನಿತು ಪ್ರತಿಕ್ರಿಯೆಯ ವಿಚಾರಾಂಶಗಳು ಉದ್ಭೂತವಾಗುವುದು ಒಳಿತೆ!?"—ಎಂದು ತನಗೆ ತಾನೆ ಪ್ರಶ್ನೆಹಾಕಿಕೊಳ್ಳುವನು. ಆಗ ಮಾತ್ರ ಅವನ ಹೃದಯ ಮಲ್ಲಿಗೆ ಹೂವಿಗಿಂತ ಹಗುರವಾಗುತ್ತಿತ್ತು; ವಿಲಕ್ಷಣವಾದ ಸನ್ನಿವೇಶದಿಂದ ತಪ್ಪಿಸಿಕೊಂಡು ಸುಳಿಗಾಳಿಗೆ ಮೈಯೊಡ್ಡಿದಂತಾಗುತ್ತಿತ್ತು

ಕಡೆಗೆ ಒಂದುದಿನ ಪರೀಕ್ಷೆಯ ಫಲಿತಾಂಶ ಹೊರಬಿತ್ತು. ಪ್ರಥಮ ಮತ್ತು ದ್ವಿತೀಯ ಭಾಗಗಳಲ್ಲಿ ಮಾತ್ರ ಅವನು ತೇರ್ಗಡೆಯಾಗಿದ್ದ. ಮತ್ತೊಂದು ಬಾರಿ ಅವರಜ್ಜಿ ಪರಿಕ್ಷೆ ಕಟ್ಟಲು ಅವನನ್ನು ಪ್ರೋತ್ಸಾಹಿಸಿದಳು; ಅವನು ಅದಕ್ಕೂ ಒಪ್ಪಿದ.

ಮಾಧವರಾವ್ ಈ ಬಾರಿ ಕಾರ್ಖಾನೆಯೊಂದರಲ್ಲಿ ಕೆಲಸಮಾಡುತ್ತ ಅಭ್ಯಾಸಮಾಡಿ ಪರೀಕ್ಷೆಗೆ ಹೋಗಿ ಬಂದ. ಈಗ ಹೊಟ್ಟೆಬಟ್ಟೆಗೆ ದೇವರು ಅನುವು ಮಾಡಿಕೊಟ್ಟಿದ್ದ. ಯಾವುದಕ್ಕೂ ಕೊರತೆ ಇರಲಿಲ್ಲ ಬಟ್ಟೆ, ಜಿನಸುಗಳು ಮಾಧವರಾಯನ ಹಣದಿಂದ ಬಂದಿಳಿದವು. ರಾಧಮ್ಮನ ಮನೆ ಈಗ ತುಂಬಿಕೊಂಡು ಬೆಳಗುತ್ತಿತ್ತು. ಮೊಮ್ಮಗನ ದುಡಿಮೆಯನ್ನು ಕಂಡು ರಾಧಮ್ಮ ಹಿರಿಹಿರಿ ಹಿಗ್ಗುತ್ತಿದ್ದಳು. ಆದರೆ ಮುದುಕಿಗೆ ದೂರದ ಆಸೆಯೊಂದಿತ್ತು; ಅದನ್ನು ಇಲ್ಲಿಯವರೆವಿಗೂ ಬಾಯಿ ಬಿಟ್ಟಿರಲಿಲ್ಲ. ಅವನು ಪರೀಕ್ಷೆಗೆ ಹೋಗಿ ಬಂದಮೇಲೆ ಆ ಮಾತನ್ನು ಮೆಲ್ಲನೆ ತೆಗೆದಳು.

"ಈ ಸಾರಿ ಹೇಗೆ ಮಾಡಿದೀಯೆ ಮಾಧು?"

"ಪರವಾ ಇಲ್ಲಜ್ಜಿ, ಪಾಸಾಗುತ್ತದೆ."

"ಎಲ್ಲಾ ಗಣಿತ ಸರಿ ಮಾಡಿದ್ದಿಯಾ?"

"ಹೂನಜ್ಜಿ ಮಾಡಿದೇನೆ ಈ ಸಾರಿ ಗ್ಯಾರಂಟಿ ಪಾಸಾಗುತ್ತದೆ."

"ಇರಲಿಬಿಡು. ವಾದಿರಾಜರು ಇದಾರೆ. ನಾನು ಬೇಡಿಕೊಂಡಿದೇನೆ."

ಮಾಧು ಯಾವುದನ್ನೋ ಕುರಿತು ಯೋಚಿಸುತ್ತಿದ್ದ. ಅವನ ಲಕ್ಷ್ಯ ಬೇರೆ ಕಡೆ ಹರಿದಿತ್ತು.

"ಮಾಧು! ಹೀಗೇಕೆ ಕೂತಿಯೊ? ಮೈಯಲ್ಲಿ ಚೆನ್ನಾಗಿಲ್ಲವೆ?"

"ಇದೆ ಅಜ್ಜಿ. ಇರದೇನು ಮಾಡುತ್ತೆ."

"ಮಾಧು, ನಿನ್ನಲಗ್ನ ಒಂದಾಗಿ ಬಿಟ್ಟರೆ, ಎಲ್ಲಾ ನೋಡಿದಹಾಗೆ ಆಗುತ್ತೆ. ನಿನ್ನ ತಲೆಮೇಲೆ ನಾಲ್ಕು ಕಾಳು ಅಕ್ಷತೆ ಬಿದ್ದರೆ ನನ್ನ ಕಡೆ ಭಾರ ಮುಗಿಯಿತು. ನಿನ್ನ ಅಪ್ಪ—ಅಮ್ಮನಿಗೆ ನಿನ್ನ ಕಲ್ಯಾಣ ನೋಡೋದು ಹಣೆಯಲ್ಲಿ ಬರೆದಿರಲಿಲ್ಲ. ಅದನ್ನ ನಾನಾದರೂ ನೋಡಿ ಹಾಯಾಗಿ ಒಂದುದಿನ ರಾಮ ರಾಮ ಎಂತ ಕಣ್ಣು ಮುಚ್ತೀನೆ" ಎಂದು ವಿವಾಹದ ಬಗ್ಗೆ ಆಕೆ ಪೀಠಿಕಾಪ್ರಕರಣವನ್ನು ಹಾಕಿದಳು.

ಮದುವೆಯ ಬಗ್ಗೆ ಉಪೋದ್ಘಾತ ಹಾಕಿದ್ದನ್ನು ಕೇಳಿ ಮಾಧು "ಈಗಲೇ ಯಾಕಜ್ಜಿ. ನನಗ್ಯಾವ ಅಂಥ ವಯಸ್ಸು ಮೀರಿದೆ. ಓದೆಲ್ಲಾ ಮುಗಿಯಲಿ" ಎಂದ. "ಓದು ನಾ ಬೇಡ ಎಂದನೆ? ಏನು ಕಾರಣ ಹೇಳುತ್ತೀಯೆ. ಈ ಹಿಂದೆ, ನಿಮ್ಮ ಮಾವ ಶಾಮಲೆ ತಂದುಕೊಂಡು ಬಿಡಕ್ಕ. ಸಂಬಂಧ ಇಲ್ಲಿಗೇ ಹರಿದು ಬಿಡಬಾರದು ಎಂತ ಹೇಳಿದ್ದನಪ್ಪ. ಅದಕ್ಕೆ, ಅಯ್ಯೋ. ಸೊಂಟ ಎಷ್ಟು ಹೊಡೆಯುತ್ತೆ ಮಾಧು. ಈಗ ಕಾಲು, ಈ ಮೊಣಕಾಲು ಹರೀತಿತ್ತು ಅರಿವಿ ಕಟ್ಟಿಕೊಂಡೆ ಹೂ...."

"ಅಜ್ಜೀ ...ಅಜ್ಜೀ, ಮೊನ್ನೆ ಪುರವಣಿ ಪರೀಕ್ಷೆಗೆ ಹೋಗಿದ್ದೆನಲ್ಲ. ಅಂದು ಏನಾಯಿತು ಗೊತ್ತೆ? ನಾನು ಅನಂತರಾಮು, ಕಿಟ್ಟಿ, ರಾಜ ಶೇಖರ ಎಂತ ಇನ್ನೊಬ್ಬನಿದಾನೆ ಅವನು, ಛತ್ರದಲ್ಲಿ ಇದ್ದೆವಲ್ಲ. ಒಂದು ದಿನ ಛತ್ರದಲ್ಲಿ ಒಬ್ಬ ದಕ್ಷಿಣ ದೇಶದ ಸಾಧು, ಸಾಯಿಬಾಬ ಫೋಟೋ ತಂದಿದ್ದ, ಆ...."

"ಹ್ಞಾಂ.... ಹೇಳು"

"ಯಾರೋ ಒಳ್ಳೇ ಸಾಧು ಕಣಜ್ಜಿ. ಪ್ರಶ್ನೆ ಎಷ್ಟೊಳ್ಳೆ ಚೆನ್ನಾಗಿ ಹೇಳುತ್ತಿದ್ದ. ನಮಗೆ ತಿಳಿದಷ್ಟು ದುಡ್ಡು ಡಬ್ಬಿಯಲ್ಲಿ ಹಾಕಿ, ಎಷ್ಟಾದರೂ ಪ್ರಶ್ನೆ ಕೇಳಬಹುದು."

"ಹೂ, ನಿನ್ನ ಪ್ರಶ್ನೆ ಸುಡಲಿ. ಏನು ಹೇಳೊ?"

"ಅವೊತ್ತು ಶಾಮಲಾ ಬಂದಿದ್ದಳು, ಸಾಯಿಬಾಬನ ಪೂಜೆಗೆ. ಆಕೆ ತರಗತಿ ಹುಡುಗಿಯರು ಯಾರೋ ಇದ್ದರಮ್ಮ."

"ಲೀಲಾ ಇರಬಹುದು. ಇನ್ಯಾರು ಭಟ್ಕಲ್ ಶಾರದಾನ ಜೊತೆಗೆ ಬಹಳ ಸ್ನೇಹ"

"ನನಗೆ ನೆನಪಿಲ್ಲ ಶೀನಣ್ಣನ ಲಗ್ನಕ್ಕೆ ಹೋಗಿದ್ದು ನೋಡು."

"ಅಲ್ಲೋ, ಮಾದ್ಯಾ ಮಾತನಾಡಿಸಿದೆಯೇನು?"

"ಅವರೆಲ್ಲಾ ಒಳಗಿದ್ದರಜ್ಜಿ. ಹೊರಗೆ ಆ ಎಸ್.ಎಸ್.ಎಲ್.ಸಿ. ಪರೀಕ್ಷೆಗೆಂತ ಹುಡುಗರು ಅವತ್ತೇ ಬಂದಿದ್ದರು. ಅವರೆಲ್ಲಾ ಮುಕ್ಕಿರಿದಿದ್ದರು.

"ಹೋಗಲಿ ಬಿಡು, ಅವರ ತಂದೆ ದೊಡ್ಡ ಹುದ್ದೆಯಲ್ಲಿದ್ದಾರೆ; ಇಂಜನಿಯರ್. ನಮ್ಮಂತ ಬಡವರಿಗೆ ಹೆಣ್ಣು ಹೇಗೆ ಧಾರೆಯೆರೆದಾರು...."

"ಅಜ್ಜಿ, ಅವರಣ್ಣ ಇಂಜಿನಿಯರೇನು!"

"ಹೌದು ಈಗ ಮೈಕೈ ಶಾಮಲಾ ತುಂಬಿಕೊಂಡಿರಬೇಕು, ಅಲ್ಲವೆ?"

"ಹೂ ..ಹೌದು. ಈಗ ತುಂಬಾ ಎತ್ತರವಾಗಿ ಬೆಳೆದಿದಾಳೆ. ಎಷ್ಟು ಎತ್ತರ ಬೆಳೆತಾಳೋ ಏನೋ? ."

ಶಾಮಲಾ ಮಾಧವರಾಯನಿಗೆ ಹೆಂಡತಿಯಾಗಬೇಕಾಗಿತ್ತು. ಮಾಧುವಿಗೆ ಶಾಮಲೆ ಕೊಟ್ಟು ಹಿಂದಿನ ಸಂಬಂಧ ಹತ್ತಿರವಾಗಿ ನೇಯ್ದು ಹೋಗಬೇಕೆಂದು, ಈ ವಿಷಯವನ್ನು ಮಾಧುವಿನ ತಂದೆ ವಾಸುದೇವಾಚಾರ್ಯರು ಇದ್ದಾಗ ಪ್ರಸ್ತಾಪಿಸಿದ್ದರು. ಆದರೀಗ ಕಾಲ ಬದಲಾಯಿಸಿತ್ತು. ಮಾಧು ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾಗಿದ್ದುದರಿಂದ, ಯಾರೂ ಹತ್ತಿರ ಸುಳಿಯುತ್ತಿದ್ದಿಲ್ಲ. ಇವರೂ ಸಹ ಇತ್ತೀಚೆಗೆ ಹೋಗಿ ಬಂದು ಮಾಡುತ್ತಿದ್ದಿಲ್ಲ. ನೆಂಟಸ್ತನದ ಒಂದೊಂದು ಎಳೆ ದಿನೇ ದಿನೇ ಬಿಚ್ಚಿಕೊಂಡಿತ್ತು.

ಮುನ್ನಾ ತಿಂಗಳು ಪರೀಕ್ಷೆಗೆಂದು ದಾವಣಗೆಗೆಗೆ ಹೋದಾಗ ಶಾಮ ಲೆಯನ್ನು ನೋಡುವ ಸುಸಂಧಿ ಮಾಧುವಿಗೆ ದೊರೆಕಿತ್ತು. ಈ ಹಿಂದೆ ನೋಡಿದ್ದಕ್ಕಿಂತಲೂ ಆಕೆ ಎತ್ತರವಾಗಿ ಬೆಳೆದಿದ್ದಳು.

ಆ ಎಸ್. ಎಸ್. ಎಲ್. ಸಿ. ಹುಡುಗರು ಹೊರಗಡೆ ನಿಂತಿದ್ದರು. ಒಳಗೆ ಸಾಯಿಬಾಬಾ ದೇವರ ಪೂಜೆ ನಡೆಯುತ್ತಿತ್ತು. ಶಾಮಲೆ, ಭಟ್ಕಲ್ ಶಾರದಾ, ಲೀಲಾರೊಂದಿಗೆ ತಾನೂ ಪೂಜೆಗೆ ಬಂದಿದ್ದಳು. ಹುಡುಗರ ಮಧ್ಯೆ ಮಾಧು ತಾನೂ ನಿಂತುಕೊಂಡು ದೇವರನ್ನೊಮ್ಮೆ ಇವಳನ್ನೊಮ್ಮೆ ನೋಡಿದ. ಗುಲಾಬಿ ಬಣ್ಣವನ್ನು ಅಣಿಕಿಸುವ ಕಪೋಲಗಳು, ತುಂಬು ಜೌವನದಿಂದ ಕೂಡಿದ ಆ ದೇಹ, ಚಿಕ್ಕ ನಡು, ಕೊಂಚ ಉದ್ದನೆಯ ಶರೀರ, ಇವು ಇವನನ್ನು ಆಯಸ್ಕಾಂತದಂತೆ ಅವಳಕಡೆ ಎಳೆದವು. ಪೂಜೆ ಮುಗಿಯುವದರೊಳಗಾಗಿ ಇವನು ಹೊರಗಡೆಗೆ ಮೆಟ್ಟಿಲು ಸಮೀಪ ದಲ್ಲಿ ಬಂದು ನಿಂತ. ಅವರು ಮೂವರೂ ಹೊರಟುಹೋದರು. ಅವ ರಿಬ್ಬರಿಗಿಂತ ಶಾಮಲೆಯ ನಡಿಗೆ ತುಂಬ ಆಕರ್ಷಣವಾಗಿತ್ತು. ಒಯ್ಯಾರ ದಿಂದ ನಡು ಬಳುಕಿಸುತ್ತ, ಕೊಂಚ ತಲೆಯನ್ನು ತಗ್ಗಿಸಿಕೊಂಡು ಆಕೆ ಹೋದ ದೃಶ್ಯ ಅವನನ್ನು ಮಂತ್ರ ಮುಗ್ಧನನ್ನಾಗಿ ಮಾಡಿತ್ತು. ಅವಳ ಸೀರೆಯ ರೇಷ್ಮೆದಡಿಯನ್ನು ನೋಡುತ್ತಾ ಹಾಗೆಯೇ ನಿಂತುಕೊಂಡು, ನೀಳವಾದ ಉಸಿರೊಂದನ್ನು ಬಿಟ್ಟು, ಮಾಧು ತನ್ನ ಕೊರಡಿಯತ್ತ ಹೋಗಿ ಕುಳಿತುಕೊಂಡ. ಆ ಹೆಣ್ಣು ತನಗಾಗಿ ಮೀಸಲಿರಿಸಿದೆಯೆಂದು ಅಜ್ಜಿ ಆಗಾಗ ಹೇಳುತ್ತಿದ್ದಳು. ನಿಜವಾಗಲೂ ಅದು ಸರ್ವದಾ ತನ್ನದೇ. ಆದರೆ...ಆಗ ನನ್ನಂತಹ ಸುಖಿ ಯಾರೂ ಇಲ್ಲ. ಈ ಭೂಮಿಯಲ್ಲಿ ಹುಟ್ಟಿದಕ್ಕೂ ಸಾರ್ಥಕವಾಯಿತು—ಎಂದು ಗಾಳಿಗೋಪುರವನ್ನು ಅವನು ಕಟ್ಟಿದ್ದ. ಈಗ ಮುದುಕಿ ರಾಧಮ್ಮ ಅದನ್ನು ಪ್ರಸ್ತಾಪಿಸಿದ್ದಳು.

"ನೀನು ಮಾತನಾಡಿಸಿದ್ದರೆ ಏನು ಗಂಟು ಹೋಗುತ್ತಿತ್ತೊ."

"ಹೋಗಲಿ, ಬಿಡಜ್ಜಿ. ಶಾಮಲಿ ಗೂಮಲಿ ..."

ಎಂದು ಮುಗುಳ್ನಗುತ್ತಾ ಹೇಳಿದ. ಹಾಗೆ ಹೇಳುವುದರಲ್ಲಿ ಅವನು ಅಪೂರ್ವವಾದ ರುಚಿಯನ್ನನುಭವಿಸಿದ. ಆ ಹೆಸರಿಗೆ ಇನ್ನೂ ವಿಶಿಷ್ಟ ವಾದ ಕಳೆಯುನ್ನಾಯ್ದಂತೆ ಅವನಿಗೆ ವೇದ್ಯವಾಯಿತು; ಅವನಿಗೆ ಅಪೂರ್ವ ವಾದ ಮಾಧುರ್ಯವನ್ನು ಅನುಭವಿಸಿದಹಾಗೆ ದೃಗ್ಗೋಚರವಾಯಿತು.

"ಯಾಕೆ ಬೇಸರ ಬಂತೆ? ಅವರಿಗೆ ಬೈಯಬಾರದಿತ್ತೇ.... ನೋಡಪ್ಪ ಮಾಮನ ಮೇಲೆಷ್ಟು ಪ್ರೇಮ."

"ಬೇಸರ ಬರದೇನು. ಅವಳು ನನ್ನ ನೋಡಲಿಲ್ಲ. ನಾನು ಮಾತ್ರ ನೋಡಿ ಗುರುತು ಹಿಡಿದೆ. ಆ ಹುಡುಗರ ಮಧ್ಯೆ ನಿಂತುಕೊಂಡು ನೋಡಿದೇಂತ ಆಗಲಿಂದ ಹೇಳುತ್ತಿದೇನೆ."

"ಯಾವುದೋ ಕಡೆಗೆ ನನ್ನ ಚಿತ್ತ," ಎಂದು ಅಜ್ಜಿ ಮಾತು ಮುಗಿಸಿ ಮೊಮ್ಮಗನಿಗೆ ಅರಳು ಹಿಟ್ಟುಕೊಟ್ಟು ಕಳುಹಿಸಿದಳು.

ಪುನಃ ಒಂದು ತಿಂಗಳು ಬೇಗ ಕಳೆದು ಹೋಯಿತು.

ಫಲಿತಾಂಶ ಹೊರಬಿದ್ದಿದ್ದು ಮಾಧು ತೃತೀಯ ಭಾಗದಲ್ಲಿ ತೇರ್ಗಡೆಯಾಗಿದ್ದ. ರಾಧಮ್ಮನಿಗೆ ಈಗ ಹಿಡಿಸಲಾರದ ಸಂತೋಷವಾಯಿತು. ಮೊಮ್ಮಗನು ತೇರ್ಗಡೆಯಾಗಿದ್ದಕ್ಕೆ ಶ್ರೀ ಸತ್ಯನಾರಾಯಣ ಪೂಜೆ ಮಾಡಿಸಿ, ಕೋಸುಂಬರಿ ಹಂಚಿಸಿದಳು. ಅಂದು ವಿಶ್ವನಾಥರಾವ್, ಗುರುಮೂರ್ತಿ, ಪ್ರೇಮಚಂದ್ರರು ಬಂದು ಆ ಉತ್ಸವದಲ್ಲಿ ಭಾಗವಹಿಸಿದ್ದರು. ಆ ವರ್ಷ ಮತ್ತು ಮುಂದಿನ ವರ್ಷ ಮಾಧು ದುಡಿದು, ಮುಂದಿನ ಅಭ್ಯಾಸವನ್ನು ಮುಂದುವರಿಸುವಂತೆ ಸೂಚಿಸಿದಳು ರಾಧಮ್ಮ.

## ೧೨

ರೇಣುಕಪ್ರಸಾದ ಜೈಲಿಗೆ ಹೋಗಿ ಆರುತಿಂಗಳಾಗಿವೆ. ಅಲ್ಲಿ ಅವನು ಜೀವನದ ವಿವಿಧ ಅನುಭವಗಳನ್ನು ಪಡೆಯುತ್ತಿದ್ದಾನೆ. ಅವನೊಬ್ಬನೇ ಅಲ್ಲಿರಲಿಲ್ಲ. ಅವನ ಸಂಗಡ ನೂರಾರು ಅಪರಾಧಿಗಳೂ ಇದ್ದಾರೆ. ಅದರಲ್ಲಿ ಹಲವರು ಕಳ್ಳರು, ದರೋಡೆಗಾರರು, ಕೊಲೆಗಾರರೂ ಇದ್ದಾರೆ. ಇನ್ನು ಹಲವರು ತಾಯಿಯನ್ನು ಕೊಲೆಮಾಡಿದವರೂ ಮಗಳನ್ನು ಪ್ರೀತಿಸಿದ ಆಪಾದನೆಯ ಸಂಗಡ ಹಲವು ಆಪಾದನೆಗಳಿಗೆ ಸಿಕ್ಕಿ ಕಠಿನ ಶಿಕ್ಷೆಗೆ ಗುರಿಯಾಗಿದ್ದಾರೆ.

—ತಾನು?

ತನ್ನ ಜೀವನದ ನೆನಪು ಬಂದಾಗ, ಇದರಲ್ಲಿ ನಿರಪರಾಧಿಗಳೇಕೆ ಇಲ್ಲದೆ ಹೋದಾರು; ಅವರೂ ಇದ್ದಾರೆ ಎಂದು ಮನನೊಂದುಕೊಳ್ಳುವನು. ಇತ್ತೀಚೆಗೆ ಅವನು ಅಲ್ಲಿ ಹಲವು ಪತ್ರಿಕೆಗಳನ್ನೂ ಕಥೆ ಕಾದಂಬರಿಗಳನ್ನೂ ಬಿಡುವಿದ್ದಾಗ ಓದುತ್ತಿದ್ದ. ಈಗ ರಾಜಕೀಯದಲ್ಲಿನ ಗಣ್ಯ ಸಂಘವೊಂದು ಇವನ ಮನಸ್ಸನ್ನು ಸೆಳೆದಿತ್ತು, ಅದು ಬಡವರಿಗಾಗಿ ಇದೆ ಎಂದು ಕೇಳಿದ್ದ. ಹಿಂದೆ ಅದರ ಪ್ರಚಾರ ಭಾಷಣಗಳನ್ನು ಕೇಳಿ ತಣಿದಿದ್ದ. ಆ ವ್ಯಾಖ್ಯಾನಗಳಲ್ಲಿಯ ಮರ್ಮವನ್ನು ಭೇದಿಸಿ ಅರ್ಥ ಗ್ರಹಿಸಿದ್ದನು. ಪರಂತು ಆಗ ಅದಷ್ಟು ಹಿಡಿಸಿರಲಿಲ್ಲ; ಈಗ ತಾನು ಸಹ 'ಕೆಂಪಾ'ಗಲು ಹವಣಿಸುತ್ತಿದ್ದ. ಆದರೆ ಅವನು ಪಂಜರಬದ್ಧನಾಗಿದ್ದ. ಅದನ್ನು ದಾಟಿ ತಾನು ಸ್ವತಂತ್ರ ಸಿಂಹನಾದಮೇಲೆ, ಆ ಬಗ್ಗೆ ಹೆಚ್ಚಿನ ಪುಸ್ತಕಗಳನ್ನು ಓದಬೇಕೆಂದು ನಿರ್ಧಾರಮಾಡಿದ.

ಆಗಾಗ 'ನಿರಂಜನ'ರ ಹೃದಯವಿದ್ರಾವಕ ಕಥೆಗಳು ಅವನ ಕಣ್ಣಿಗೆ ಬೀಳುತ್ತಿದ್ದವು, ಅಂತಹ ಕರುಣಾಮಯ ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸುವ ಕಥೆಗಳೆಂದರೆ ಈಗ ಇಲ್ಲದ ಅಭಿರುಚಿ ಅವನಿಗೆ.

ಜೈಲಿನಿಂದ ಅವನು ಆಗಾಗ ಊರಿಗೆ ಕಾಗಧಗಳನ್ನು ಬರೆಯುವ ರೂಢಿಯನ್ನಿಟ್ಟುಕೊಂಡಿದ್ದ. ಇತ್ತೀಚೆಗೆ ಬರವಣಿಗೆಯಲ್ಲೂ ಅವನ ಕೈ ಪಳಗಿತ್ತು. ಅವನ ಯಾವ ಕಾಗದವೇ ಆಗಲಿ ಮನೋಜ್ಞವಾಗಿ, ಉದ್ರೋ

ಥಕವಾಗಿರುತ್ತಿದ್ದವು. ಒಂದು ದಿನ ಗುರುಮೂರ್ತಿಗೆ ಕಾಗದ ಒಂದನ್ನು ಬರೆದ.

ತೀ. ರವರ ಪಾದಪದ್ಮಂಗಳಲ್ಲಿ ಚಿ. ರೇಣುಕನ ಶಿರಸಾಷ್ಟಾಂಗ ನಮುಸ್ಕಾರಗಳು

ತಮ್ಮ ಕ್ಷೇಮ ಸಮಾಚಾರಗಳಿಗೆ ಆಗಾಗ್ಗೆ ಪತ್ರ ಬರೆಸೋಣ ವಾಗುತ್ತಿರಬೇಕು. ನನ್ನ ಕ್ಷೇಮದ ಬಗ್ಗೆ ದೇವರು ನೋಡಿಕೊಳ್ಳುತ್ತಾನೆ. ಯೋಚನೆ ಬೇಡ.

—ಈಗ ಆರು ತಿಂಗಳಾಗಿದೆ ನಾನಿಲ್ಲಿಗೆ ಬಂದು ಅರ್ಧವರ್ಷ ವನ್ನು ಕಳೆದಿದ್ದೇನೆ. 'ಮನೆಯನ್ನು ನೋಡದೆ ಆರು ತಿಂಗಳಾಗಿದೆ. ಬೇಸರ ನಿನಗೆ ಬರುವುದಿಲ್ಲವೆ?' ಎಂದು ನೀವು ಯಾರಾದರೂ ಪ್ರಶ್ನೆ ಹಾಕಬಹುದು. ಅದಕ್ಕೆ ನನ್ನ ಉದ್ಗಾರವಿಷ್ಟೆ ಎಲ್ಲರೂ ಹೊರಗಣ ಪ್ರಪಂಚದಲ್ಲಿ ಗೇಯುವುದಿಲ್ಲವೆ? ಹಾಗೆ ನಾನು ನನ್ನದೇ ಆದ ಪ್ರಪಂಚ ದಲ್ಲಿ ಗೇಯುತ್ತಿದ್ದೇನೆ. ಒಮ್ಮೊಮ್ಮೆ ಹೀಗೂ ಎನಿಸುವುದು–ನನ್ನಂತಹ ನೂರಾರು ಅಪರಾಧಿಗಳು ನನ್ನ ಸಂಗಡವಿದ್ದಾರೆ. ಅವರಲ್ಲಿ ಅಪರಾಧ ಮಾಡಿದವರು ಇದ್ದರೂ ಇರಬಹುದು, ಇಲ್ಲದೆ ಇದ್ದರೂ ಇರಬಹುದು. ಅವರೆಲ್ಲ ನರಕಯಾತನೆಯನ್ನು ಅನುಭವಿಸುತ್ತಿದಾರೆ. ಏಕೋ ನನಗೂ ನರಕಯಾತನೆಯನ್ನು ಅನುಭವಿಸಿದ ಹಾಗೆ ಎನಿಸುತ್ತದೆ. ಅದಕ್ಕೆಂದೇ 'ನರಕಯಾತನೆ' ಎಂಬ ಶಬ್ದವನ್ನು ಬೇಕೆಂದು ಉಪಯೋಗಿಸಿದೆ.

ಸಹ ಖೈದಿಗಳಲ್ಲಿ ಹಲವರು ಒಳ್ಳೆಯವರಿದ್ದಾರೆ; ಹಲವರು ದುಷ್ಟರೂ ಕೂಡ. ಅವಶ್ಯಕ ಬಿದ್ದಾಗ ಅವರಿಗೆ ಸರಿಯಾದ ಬುದ್ಧಿ ಯನ್ನು ಹೇಳುತ್ತೇನೆ. ಅವರು ನನ್ನನ್ನು ಕಂಡರೆ ತುಂಬ ಪ್ರೀತಿಸುವರು. ನಾನು ಬಹಳ ಪುಸ್ತಕಗಳನ್ನು ಓದುತ್ತಿರುವನಂತೆ. ನಾನು ಒಳ್ಳೆಯ ಮನುಷ್ಯನಂತೆ ಆತಏವ ಅವರೆಲ್ಲರಿಗೆ ನನ್ನನ್ನು ಕಂಡರೆ ತುಂಬ ಪ್ರೀತಿ ಯಂತೆ—ಹೂ, ಇದೂ ಒಂದು ಪ್ರಪಂಚ!....ಕಾಲಚಕ್ರ ತಿರುಗಲಿ.

ಜಗನ್ನಾಥನನ್ನು ನೆನೆಸಿಕೊಂಡು ನೋಡಬೇಕೆಂಬ ಹಂಬಲ ಈ ಕಬ್ಬಿಣದ ಸಲಾಕಿಗಳನ್ನು ಕಿತ್ತುಹೋಗಲೇ ಎಂದೆನ್ನಿಸುತ್ತದೆ.

ಇತಿ ನಿಮ್ಮ ಪ್ರೀತಿಯ ಮಗ.

ರೇಣುಕ.

ಕಾಗದ ಶಿವಣ್ಣಯ್ಯನವರಿಗೆ ಸೇರಿತು. ಓದುತ್ತಿದ್ದಂತೆ ಅವರ ಕಣ್ಣೀರು ತಟತಟ ಬಿದ್ದು ಹರಿದುಹೋದವು. ಕಾಗದದ ಮಸಿ ಸ್ವಲ್ಪ ಕದಡಿದ ಹಾಗಾಯಿತು. ಪಂಚೆಯಿಂದ ಹಗುರಾಗಿ ಒತ್ತಿ ಅದನ್ನಲ್ಲಿ ಒಳಗಿಟ್ಟರು. ಪತ್ರವನ್ನು ಒಳಗಿಡಲು ಎದ್ದು ಹೊರಟಾಗ, ಹೊರಗಡೆ ಬಸವರಾಜ, ಉಮಾಪತಿ ಮಾತನಾಡುತ್ತ ಹೋಗುತ್ತಿದ್ದರು.

ಉಮಾಪತಿ ಮುನ್ನಾದಿನ ಬಂದು ಬಸವರಾಜನ ಮನೆಯಲ್ಲಿ ಉಪ್ಪವಣಿಸಿದ್ದ. ಮಾತುಗಳು ಒಂದೊಂದಾಗಿ ಕೇಳಿಬರುತ್ತಿದ್ದವು.

"ಇವರನ್ನು ಹಿಡಿದು ಹೊಡೆದರೆ ಯಾರೂ ಕೇಳೋಹಾಗಿಲ್ಲ."

ಬಸವರಾಜ ಬಿದ್ದು ಬಿದ್ದು ನಗುತ್ತಾ "ಹೌದೌದು. ನಿಜ" ಎನ್ನುತ್ತಿದ್ದ.

ಇನ್ನೂ ಏನನ್ನೊ ಮಾತನಾಡಿಕೊಳ್ಳುತ್ತ ಅವರು ಪೇಟೆಯ ಕಡೆ ಹೊರಟರು. ಗುರುಮೂರ್ತಿ ಬಸವರಾಜನೆದುರಾಗಿ ಬಂದ.

"ದಾವಣಗೆರೆಯಲ್ಲಿ ಹೇಮಗಿರಿಗೆ ಆಪರೇಷನ್ನೆಂತ ಬಂದಾಗ, ಇವನು ಹೆಂಡತಿ ಮನೆಗೆ ಬಂದಿದ್ದನಲ್ಲ, ಸ್ವಲ್ಪ ಕಂಡು ಮಾತನಾಡಿಸಿದ್ದರೆ; ಅದೂ ಹೋಗಲಿ, ಆಸ್ಪತ್ರೆಗೆ ಬಂದು ಆ ಹುಡುಗನನ್ನಾದರೂ...." ಏನನ್ನೊ ಗೊಣಗುಟ್ಟುತ್ತಾ ಹೋದ. ಗುರುಮೂರ್ತಿಗೆ ಕೇಳಿಸಿದ್ದಷ್ಟು. ದಾವಣಗೆರೆಗೆ ಬಂದು ತಾವು ತಂಗುವ ವೇಳೆಗೆ ಇತ್ತಂಡಗಳಲ್ಲಿ ಕಾಗದಗಳ ಬಡಿದಾಟವಾಗಿದೆ. ಆಸ್ಪತ್ರೆಗೆ ಬಂದಿರುವ ವಿಷಯ ಗುರುಮೂರ್ತಿಗೆ ಹೇಗೆ ಗೊತ್ತಾದೀತು—ಎಂಬ ಯೋಚನೆಯ ಪರಿವೆಯಿಲ್ಲದೆ ಉಮಾಪತಿ ಮಾತನಾಡಿದ್ದ.

ಗುರುಮೂರ್ತಿಗೆ ಉಮಾಪತಿ ಎಂದ ಮಾತು ಶಿವಣ್ಣಯ್ಯನವರಿಗೆ ತಿಳಿಯಿತು. ಗುರುಮೂರ್ತಿ ತಳಮಳಗೊಂಡು ಹೇಳಿಯೇ ಬಿಟ್ಟ: "ಆ ಹೊಸಳ್ಳಿ ರುದ್ರಪ್ಪನಿಗೆ ಹೇಳಿದರೆ, ಎರಡೇಟು ಯಾರಿಂದಲಾದರೂ ತೋರಿಸುತ್ತಾನೆ. ಕಾಗದ ಬರೆಯಲೆ?"

ಹೊಸಳ್ಳಿ ರುದ್ರಪ್ಪ ಓರ್ವ ಪುಢಾರಿ. ಪುಢಾರಿ ಎಂದರೆ ದುಷ್ಟ ಶಿಕ್ಷಕ; ಅಷ್ಟೆ. ಆತ ಸದಾಚಾರಸಂಪನ್ನ, ಮಾನವಂತರಿಗೆ ಅವನು ತಲೆ ಬಗ್ಗಿಸುತ್ತಿದ್ದ.

ಗುರುಮೂರ್ತಿಯ ಮಾತು ಕೇಳಿ ಶಿವಣ್ಣಯ್ಯ ಮುಖ ಕಿವಿಚಿ

ಕೊಂಡರು.

"ಯಾಕೆ ಗುರುಮೂರ್ತಿ, ಇತ್ತೀಚಿಗೆ ಹೀಗೆ ಮಂಕಾಗಿ ಮಾತಾಡು ತ್ತೀಯೆ? ಇಷ್ಟು ಸಹನೆ ಇಲ್ಲದಮೇಲೆ ಅದೆಂತಹ ಮನುಷ್ಯನೋ ನೀನು. ದೊಡ್ಡವರು ಏನು ಹೇಳಿದ್ದಾರೆ ಗೊತ್ತೆ?"

"ಏನು, ಏನು ಹೇಳಿದಾರೆ?"

"ಬೈಯುವವರು ಬೈಯಲಿ. ಅನ್ನಿಸಿಕೊಳ್ಳುವವರು ನಾವು ಅನ್ನಿಸಿ ಕೊಳ್ಳೋಣ. ಬೈಯುವವರಲ್ಲಿ ಬೈಗಳ ಸಂಗ್ರಹ ತುಂಬ ಇದೆ; ಅದು ನಮ್ಮಲ್ಲಿಲ್ಲ. ಆದಕ್ಕಾಗಿ ನಾವು ಇತರರನ್ನು ಬೈಯುವುದಿಲ್ಲ. ಅವರ ಬಳಿ ಅದರ ಸಂಗ್ರಹವಿದ್ದರೆ, ಅದನ್ನು ಉಪಯೋಗಿಸಿಕೊಳ್ಳಲಿ ಎಂದು."

"ನನಗೂ ಗೊತ್ತಿದೆ. ಕ್ಷಮೆ, ಸದಾಚಾರ, ಸಹನೆ, ನಮ್ರತೆ, ಅನು ಕಂಪೆ ಎಂದರೆ ಏನೂಂತ. ಯಾರಿಗಾದರೂ ಎಂತಹದೇ ಭೀಕರ ವಕ್ರ ದೃಷ್ಟಿಗಳನ್ನು ಸಹನೆಯಿಂದ ತಡೆಗಟ್ಟಲು ಸಾಧ್ಯ. ಎಲ್ಲಿಯ ವರೆವಿ ಗೇಂತ? ...ಅದಕ್ಕೂ ಒಂದು ಕಟ್ಟಿದೆ, ಆ ಕಟ್ಟನ್ನು ಮೀರಿದರೆ ಯಾರಿಗೂ ಸಾಧ್ಯವಿಲ್ಲ. ಈಗ ಮಾನಕ್ಕೆ ಚ್ಯುತಿ ಬರುವ ಸಂದರ್ಭದಲ್ಲೂ ವೇದಾಂತಿ ಯಾಗಿ ಕುಳಿತುಕೊಳ್ಳುವುದು ನನಗೆ ಹಿಡಿಸದು."

ಎಂದು ತುಂಬಾ ಗಂಭೀರವಾಗಿ ಗುರುಮೂರ್ತಿ ನುಡಿದ. ಅವರು ಇವನ ಮಾತಿಗೆ ಪ್ರತಿ ಉತ್ತರಿಸಲು ಸಾಧ್ಯವಾಗದಂತಾಯಿತು.

"ಏನೋ ಓದಿದ ಹುಡುಗರು. ನಾವೆಷ್ಟೇ ಆಗಲಿ ಹಳೆಯ ಜನ. ಸಂಬಂಧದಲ್ಲಿ ಇಂತಹ ಒರಟಾಟಗೆ ಬೇಡ ಎಂತಲೇ ಸುಧಾರಿಸುವುದು. ಆದರೆ ಅವನಿಗೆ ಅದು ತಿಳಿಯಬೇಕಲ್ಲ. ಒಟ್ಟಿನಲ್ಲಿ ನಮ್ಮ ಗ್ರಹಚಾರ. ವೃದ್ಧಾಪ್ಯದಲ್ಲಿ ದುಃಖ ಕಾಣಬೇಕಾಗಿತ್ತು, ಕಂಡೆ."

ಅನತಿ ಸಮಯ ಗುರುಮೂರ್ತಿ ಏನೂ ಮಾತನಾಡಲಿಲ್ಲ.' ಮೌನ ವ್ರತಧಾರಿಯಾಗಿದ್ದ. ಶಿವಣ್ಣಯ್ಯ ರೇಣುಕನ ಕಾಗದವನ್ನು ಅವನಿಗೆ ತೋರಲು ಹಾತೊರೆಯುತ್ತಿದ್ದರು. ಎಲ್ಲಿ ತೋರಿಸಿದರೆ ಊಟವನ್ನೇ ಬಿಡುವನೋ ಎಂದು ಯೋಚಿಸಿ—

"ಊಟಮಾಡು ಹೋಗು. ಆಗುವುದೆಲ್ಲ ಆಗಲಿ. ಯಾಕೋ ಶನಿ ತುಂಬ ಕಾಡುತ್ತಿದ್ದಾನೆ. ನವಗ್ರಹ ಶಾಂತಿನಾದರೂ ಮಾಡಿಸಿದರೆ ಒಳ್ಳೆಯದು.

ಅವನು ಊಟಮಾಡಿ ಬರುವವರೆವಿಗೂ ತಮ್ಮ ಸ್ಥಿತಿಯನ್ನು ನೆನೆದು ಅದರ ಬಗ್ಗೆ ಶಿವಣ್ಣಯ್ಯ ಆಳವಾಗಿ ಯೋಚಿಸುತ್ತ ದುಃಖಪಟ್ಟರು.

ಗುರುಮೂರ್ತಿ ಊಟಮಾಡಿ ಬಂದು, ಲುಂಗಿ ಪಂಚೆಯನ್ನು ತೆಗೆದು ಒಂದೆಡೆಗೆ ಹಾಕಿ ಪೈಜಾಮ ಧರಿಸಿಕೊಂಡ. ತದನಂತರ ತಂದೆ ಮಗನಿಗೆ ತಮ್ಮನ ಓಲೆಯನ್ನಿತ್ತರು. ತಮ್ಮನ ಓಲೆಯನ್ನು ನೋಡಿ ಗುರುಮೂರ್ತಿಯ ಎದೆ ಬಿರಿಯಿತು. ಈ ಪರಿಸ್ಥಿತಿ ಯಾರಿಂದ ಒದಗಿತು; ಇದಕ್ಕೆ ಮೂಲಕಾರಣರಾರು. ಅವನೇ ಆ ಪಟಿಂಗ ಶ್ರೀಮಂತ ದೊಡ್ಡಪ್ಪ. ಅವನ ಕೊಲೆ ಮಾಡಲೆ? ಬೇಡ, ಜೀವಂತವಾಗಿ ಸುಡಲಿ—ಎಂಬ ಯೋಚನೆ ಮನಸ್ಸಿನಲ್ಲಿ ಮಿಂಚಿತು. ಒಂದು ಕ್ಷಣ ಅವನು ಸ್ತಂಭೀಭೂತನಾಗಿದ್ದ. ಮಗನು ನೊಂದುಕೊಂಡನೆಂದು ತಿಳಿದು, ಶಿವಣ್ಣಯ್ಯ, ಪುತ್ರವಾತ್ಸಲ್ಯದಿಂದ ಹೇಳಿದರು. "ಸರಳಮ್ಮನ ಕರೆಯಲಿಕ್ಕೆ ಹೋಗು ಗುರು. ಮನೆಯಲ್ಲಿ ಆಕೆ ಎಷ್ಟು ದಿನ ಯಂತ್ರದಂತೆ ದುಡೀಬೇಕು."

ತನ್ನ ಮನಸ್ಸಿನಲ್ಲಿರುವ ಬೇಗುದಿಯನ್ನು ಹೊಡೆದೋಡಿಸಲು ಹೇಳಿದ ತಂದೆಯವರ ಮನಸ್ಸನ್ನು ಅರಿತುಕೊಂಡು ಗುರುಮೂರ್ತಿ ಹೇಳಿದ.

"ಯಾರಿಗೆ ಬೇಕು ಬಿಡಿ. ಆಕೆ ಬಂದರೇನು ಬಿಟ್ಟರೇನು. ರೇಣುಕ ಮನೆಗೆ ಬರುವವರೆವಿಗೂ ನಮಗೆ ಸಮಾಧಾನವಿಲ್ಲ."

"ಹೌದು, ಯಾರಿಗೆ ಸರಿಯಾಗಿ ಅನ್ನ ಸೇರುತ್ತೆ. ನನ್ನ ಕಂದ.... ಅಲ್ಲಿ....ಸಣಕಲಾಗ್ತಾ ಇದೆ. ಪಾಪ, ಏನೂ ಮಾಡದೆ ಇದ್ದ ಕಂದನಿಗೆ ಆ ಪೋಲಿಸರು ಕರುಣೆಯಿಲ್ಲದೆ ಹಿಡಿದೊಯ್ದರು."

ಗಂಗಮ್ಮನ ದೃಷ್ಟಿಯಲ್ಲಿ ಆ ಪೋಲಿಸಿನವರು ಕಠಿಣ ಹೃದಯಿಗಳಾಗಿ ಕಂಡರು. ಅವರಿಗೆ ಕರುಣೆ ಎಂಬುದು ಎಳ್ಳಷ್ಟೂ ಇಲ್ಲವೆಂದು ಅವಳ ತರ್ಕ. ಮತ್ತೆ ಅವಳೇ ನುಡಿದಳು :

"ಮಗ ಈ ರೀತಿ ಜೈಲಿನಲ್ಲಿ ಸಾಯುತ್ತಾ ಇದ್ದರೆ ಮಗಳಲ್ಲಿ....ನಾವು ಹಿಂದಿನ ಜನ್ಮದಲ್ಲಿ ಏನು ಪಾಪಮಾಡಿದ್ದೆವೊ !........"

"ಪಾಪ ಎಲ್ಲಿ ಬಂತು? ಅವರವರ ಹಣೆಬರಹದಲ್ಲಿ ಬರೆದಹಾಗೆ ಆಗುತ್ತೆ" ಎಂದರು ಮನೆಯ ಯಜಮಾನರು.

ಬಿಸಿನೆತ್ತರಿನ ತರುಣ ಗುರುಮೂರ್ತಿ ರೇಗಿ ಹೇಳಿದ!

"ಹಣೆಬರಹ. ...ಹಣೆಬರಹ!! ಮನುಷ್ಯನ ಪ್ರಯತ್ನಕ್ಕಿಂತ ಹೆಚ್ಚಿನದೇನು ಆ ಹಣೆಯ ಬರಹ "

ಹೀಗೆ ನುಡಿಯುವಾಗ ಅವನು ತನ್ನ ಮುಂಗೈಯನ್ನು ಪೂರ್ವದಿಕ್ಕಿನ ಕಡೆಗೆ ಎತ್ತಿ ಬೆರಳು ತೋರಿಸುತ್ತ ರೌದ್ರಾಕಾರವಾಗಿ ಹೇಳಿದ. ಕಣ್ಣು ಕಿಡಿಕಾರುತ್ತಿದ್ದವು. ಮುಖ ಕೆಂಪಗಾಗಿತ್ತು. ರಕ್ತದ ಒತ್ತಡ ಹೆಚ್ಚಿತ್ತು.

"ಹಾಗೆನ್ನಬಾರದು ಗುರು" ಎಂದಳು ಮುದುಕಿ.

"ಸಾಕು ಸುಮ್ಮನಿರು ನೀನೇ ಎಲ್ಲ ಮಾಡಿದ್ದು. ರಾತ್ರಿ ಅವನನ್ನು ಕುಳ್ಳಿರಿಸಿಕೊಂಡು ಸಲಿಗೆಯಿಂದ ಹಡೆದ ಮಗನಿಗಿಂತ ಹೆಚ್ಚು ಮಾಡಿ, ಮಾತನಾಡಿದ್ದಕ್ಕೆ ಮೇಲೇರಿದ ಸಲಿಗೆ ನಾಯಿ ತಲೆಗೇರಿದಂತೆ "

ಗುರುಮೂರ್ತಿಯ ಮಾತು ಕೇಳಿ ಗಂಗಮ್ಮನಿಗೆ ಅಳು ಕಟ್ಟೆಯೊಡೆದು ಬಂತು.

ಗಂಗಮ್ಮನ ಅಳು ನೋಡಿ ಶಿವಣ್ಣಯ್ಯ, ಗುರುಮೂರ್ತಿಗೆ ಬೈದು ಹೊರಗೆ ಕಳುಹಿಸಿ ಆಕೆಯನ್ನು ಸಮಾಧಾನ ಪಡಿಸಿದರು.

"ಹುಡುಗ ಮುಂದೇದು ಅದಕ್ಕೇನು ಗೊತ್ತಾದೀತು. ನಾವು ತುಂಬ ಯೋಚಿಸಿ ಕೊಡಬೇಕಿತ್ತು....ಹಾಗೆ ಮಾಡದೆ, ದುಡುಕಿದೆವು" ಎಂದು ಅವರು ಕೈಹಿಚುಕಿಕೊಂಡರು.

"ಅಲ್ಲ, ನೀವು ಬೇಡೆಂದು ಹಟ ಹಿಡಿದಿದ್ದರೆ, ನಾನು ಹೆಂಗಸು ಏನು ಮಾಡುತ್ತಿದ್ದೆ? ರಿಣದಲ್ಲಿ ಏನು ಬರೆದಿದೆಯೋ ಹಾಗಾಗುತ್ತ ನಡೆದಿದೆ. ಅದಕ್ಯಾಕೆ ಇವನು ಹಂಗಿನೋದು—ನೀನು ಮಾಡಿದೆ ನೀನು ಮಾಡಿದೆ ಎಂತ"

ಹೇಗೋ ಪರಿಸ್ಥಿತಿಯನ್ನು ಶಿವಣ್ಣಯ್ಯ ಹದಕ್ಕೆ ತಂದರು. ಇಂತಹ ಅನೇಕ ಜಗಳಗಳು ಈ ಹಿಂದೆ ನಡೆದು ಹೋಗಿದ್ದವು. ಇದು ನೂರೊಂದನೆಯದು. ಇದಾದಮೇಲೆ ಶಿವಣ್ಣಯ್ಯ ಪೇಟೆಯತ್ತ ಹೋದರು. ಆ ವೇಳೆಗೆ ಬೀದಿಮನೆ ನೀಲಮ್ಮ ಬಂದಳು.

"ಬನ್ನಿ, ನೀಲಮ್ಮ ಕೂತುಕೊ ಬನ್ನಿ. ಕೆಲಸಾತ?"

"ಹೂನ್ರಿ....ನಿಮದು?"

"ಇಲ್ಲ, ಕಣ್ರೆ ಇನ್ನೂ ಮುಗಿದಿಲ್ಲ."

"ಏನೋ ಗಲಾಟೆ ನಡೆದಿತ್ತಲ್ಲ. ನಿಮಗೂ ಗುರುಮೂರ್ತಿಗೂ

ಜಗಳ ಹತ್ತಿತ್ತಲ್ಲ. ಯಾಕೆ?"

"ಅದೇರಿ. ಮಾಡಬಾರದ್ದ ಮಾಡಿ ಕೂತೇನಿ. ನಮ್ಮ ಮಾಲಿನಿ ಆ ಮುಕ್ಕನಿಗೆ ಕೊಡಿಸಿ ಇವರನ್ನೆಲ್ಲಾ ಹಾಳುಮಾಡಿದೆನಂತೆ. ನಾನೇನರಿ ಅಂಥದು ಮಾಡಿರೋದು. ನಿಮ್ಮಂಥವರು ನಾಲ್ಕು ಜನ ಹೇನಬಾರದೆ?"

"ಹೇಳೋದಕ್ಕೇನು ಬಿಡಿ. ಅವರೇನು ಚಿಕ್ಕವರೇ, ಕೂಸೆ, ಒಳ್ಳೆ ಮಾತು. ನಮ್ಮ ಶಿವಣ್ಣಯ್ಯ ಊರಿಗೇ ಪಂಚಾಯಿತಿ ಹೇಳುತ್ತಾರೆ. ಅಂಥವರಿಗೆ ನಾವು...."

"ಅವರಲ್ಲ, ಆ ಗುರುಮೂರ್ತಿಗೆ."

"ಅವನೇ, ಓಹೊ! ಹೇಳೋಣಂತೆ ಬಿಡಿ. ಅದಕ್ಕೇನು ನ್ಯಾಯಕ್ಕೆ. ಅದೇನೋ ಹೇಳುತ್ತಾರಲ್ಲಾ .." ಐದು ನಿಮಿಷಗಳು ಕಳೆದನಂತರ ಅವರೇ ಮುಂದುವರಿದು "ರೇಣುಕನಿಂದ ಕಾಗದ ಬಂತೆ? ಹ್ಯಾಗಿದಾನಂತೆ" ಎಂದರು.

"ಕಾಗದಗಳೇನೋ ಬರುತ್ತವೆ. ಇವರೂ ಹಾಕುತ್ತಿರುತ್ತಾರೆ."

"ಹೂ, ದೇವರು ಯಾರ್‍ಯಾರಿಗೆ ಯಾವ್ಯಾವ ಕಾಲಕ್ಕೆ ಎಂಥ ಕಷ್ಟಗಳನ್ನು ತಂದೊಡ್ಡುತ್ತಾನೆಂತ ಹೇಳೋಕ್ಯಾರು. ಮಾಲಿನಿ ಕರಕೊಂಡು ಬರಲಿಕ್ಕೆ ಏನಾದರೂ ನಡೆಸಿದಾರೆಯೆ ?"

"ಹೇಗೆ ಕರೆದುಕೊಂಡು ಬರುತ್ತಾರೆ ನೀಲಮ್ಮ? ಇಬ್ಬರೂ ಕಾಗದಗಳನ್ನು ಹೊಟ್ಟೆಯುರಿ ಬೀಳೋ ಹಾಗೆ ಬರೆದುಕೊಂಡು ಕೂತಿದಾರೆ."

"ಏನೋಪ್ಪ, ನಮಗೆ ತಿಳಿಯೋದಿಲ್ಲ. ಸಂಬಂಧದಲ್ಲಿ ಇಂತಹವು ಅನೇಕ ನಡೆಯುತ್ತವೆ. ಮತ್ತೆ ಕೂಡುತ್ತಾರೆ. ಸಾಯುವ ತನಕ ಇದ್ದಿದ್ದೆ"

"ರೇಣುಕ ಪ್ರಸಾದ ಬಂದ ಮೇಲೆ ನಾನೂ ಸಾವಿತ್ರಮ್ಮ ಹೋಗಬೇಕೆಂದು ಮಾಡಿದ್ದೇವೆ. ಮತ್ತು ಬಿಳಿಸನೂರ ಶಿವಶಂಕರ ಪಾಟೀಲರು ಅವನಿಗೆ ಹೇಳಿ ಕರೆದುಕೊಂಡು ಬರಬೇಕೆಂತ ಮಾಡಿದ್ದಾರೆ."

"ಬಿಳಿಸನೂರಿನಲ್ಲಿ ಯಾರಿದಾರೆ ಅವರ ಪೈಕಿ ?"

"ಅವರ ಪೈಕಿ ಯಾರಿರಬೇಕ? ನಮ್ಮ ಶಿವಪ್ಪ ಶಾಲೆ ಓದಿಸುವಾಗ ಅಲ್ಲಿ ಇದ್ದ. ಅವನ ಕೈಯಲ್ಲಿ ಓದಿದವರಂತೆ. ಈ ರಂಪಾಟ ಎಲ್ಲಾ ಕೇಳಿ, ಬುದ್ಧಿ ಹೇಳಿ ಮಾಲಿನಿ ಕಳುಹುವಂತೆ ಮಾಡುತ್ತೇವೆ, ಬಿಡಿಸ್ವಾಮಿ. ಎಂದಿದಾರೆ ನೋಡಬೇಕು."

ಮುದುಕಿ ನೀಲಮ್ಮ ಎರಡು ಕೈಗಳನ್ನು ಎತ್ತಿ ಮುಖ ಸೊಟ್ಟ ಮಾಡಿ ಅಂದಳು : "ಬುದ್ಧಿಗೆ ಮಣಿಯೋ ಘಟ ಅಲ್ಲ ಅದು. ಆ ಮೂಳಗೆ ಲತ್ತಿ ಬೀಳಬೇಕು. ನಾನು ಲಗ್ನದಲ್ಲಿ ಅದರ ಬುದ್ಧಿ ನೋಡಿದೇನವ್ವ. ನನ್ನ ಮುಂದೆ ಯಾಕೆ ಹೇಳುತ್ತೀಯೆ ಬಿಡು."

"ಏನೋ ನೋಡೋದು, ನಾವಿನ್ನು ಸರಿಯಾದರೂ ಮೊದಲಿನ ಆ ಪ್ರೇಮ ಯಾಕೆ ಹುಟ್ಟಿತು ನೀಲಮ್ಮ. ಬನ್ನಿ ಪಾರ್ವತಮ್ಮ....ಈ ಕಡೆ ಈ.... ಕಡೆ ಬರ್‍ರಿ"

"ಕುಳಿತುಕೊಳ್ಳೋ ಹೊತ್ತಿಲ್ಲ, ಸ್ವಲ್ಪ ಖಾರದಪುಡಿ ಬೇಕಾಗಿತ್ತು."

"ಹೂ, ಕುಳಿತುಕೊಳ್ಳಿ ಕೊಡುತ್ತೇನೆ."

"ಇಲ್ಲ, ಹೋಗುವೆ. ಹಾಗೆ ಸ್ವಲ್ಪ ಮೆಣಸಿದ್ದರೆ ಕೊಟ್ಟುಬಿಡಿ."

ಒಳಕ್ಕೆ ಹೋಗಿ ಗಂಗಮ್ಮ ಖಾರದಪುಡಿ, ಮೆಣಸು ತಂದು ಕೊಟ್ಟಳು. ಆ ವೇಳೆಗೆ ಗುರುಮೂರ್ತಿ ಬಂದ. ಪಾರ್ವತಿಬಾಯಿ ಸೆರಗನ್ನೆಳೆದುಕೊಂಡು ಹೊರಟುಹೋದಳು.

"ಏನು ಗುರುಮೂರ್ತಿ, ಶಾಲೆ ಬಿಟ್ಟಿತೆ?" ಎಂದು ಪ್ರಶ್ನಿಸಿದಳು ನೀಲಮ್ಮ.

"ಹೂ ಅಜ್ಜಿ, ಈಗ ಬಿಟ್ಟಿತು. ದೂರ ಬಂದು ಬಿಟ್ಟಿದ್ದೆಯಲ್ಲ "

"ದೂರೇನು, ನಿತ್ಯ ಬರ್‍ತೇನೆ. ನೀನು ನನ್ನ ನೋಡಿದ್ದು ಇವತ್ತು, ಅಷ್ಟೆ."

"ಓಹೋ ಹಾಗೇನು! ..." ಎಂದು ಆಶ್ಚರ್ಯದ ದನಿಯಲ್ಲಿ ಹೇಳಿ.

"ಗಂಗಕ್ಕ ಎಲ್ಲಿ? ಕಾಫಿಗಿಟ್ಟಿದ್ದರೆ ಚೆನ್ನಾಗಿತ್ತು" ಎಂದ.

"ಇದೇ ತಾನೆ ಒಳಗಡೆಗೆ ಹೋದಳು. ನೀನು ಬರುವ ಹೊತ್ತಾಗಿ ದೇಂತ ಕಾಫಿಗಿಡುತ್ತೇನೆ ಎಂದಳು ಆಕೆ."

"ಏನು ಗುರುಮೂರ್ತಿ ಯಾಕಪ್ಪ, ಆ ಮುದುಕಿ ಕಂಡರೆ ಹಾಗೆ ಆಡುತ್ತೀ?"

"ನಾನೇನು ಆಡಿದೆನಂತಮ್ಮಾ?" ಎಂದು ರೇಗಿ ರೇಗಿ ನುಡಿದ.

"ಹಾಗೆ ಸಿಟ್ಟಾಗಬೇಡ. ನಾನು ನಿನ್ನ ಸಣ್ಣನಿದ್ದಾಗಿನಿಂದ ಬಲ್ಲೆ. ಎತ್ತಿ ಆಡಿಸಿದೇನೆ; ಕರುಳು ಕೊರೀತಿದೆ; ಅದಕ್ಕೇ ನಾಲ್ಕು ಮಾತು ಹೇಳುವ ಹಕ್ಕು ನನಗಿದೆ.... ಯಾರು ಬಿಡಿಸುತ್ತಾರೊ ಬಿಡಿಸಲಿ."

"ನೀನೇನೂ ಅಂದಿಲ್ಲ, ಸರಿ. ನೀನು ಮುನಿಸಿಕೊಳ್ಳೋದಿಲ್ಲಾಂದರೆ ನಾನೊಂದು ಮಾತು ಹೇಳಬೇಕೂಂತ ಮಾಡಿದ್ದೇನೆ, ಹೇಳಲೆ?"

"ಹೇಳು. ಅದೇನಜ್ಜಿ"

"ಬೆಳಗ್ಗೆ ನೀನು—ನಮ್ಮನ್ನೆಲ್ಲಾ ಹಾಳುಮಾಡಿದೇಂತ ಯಾಕಪ್ಪಾ ಅನ್ನಬೇಕು? ಆಕೆ ನಿಮ್ಮನ್ನೆಲ್ಲಾ ಸಾಕಿನಲುಹಿ ವಿದ್ಯಾಭ್ಯಾಸ ಮಾಡಿಸಿದ್ದಾಳೆ. ಆಕೆ ಮನಸ್ಸು ನೋಯಿಸಿದರೆ, ದೇವರು ಒಂದು ತುತ್ತು ಅನ್ನ ಕೊಡುವುದಿಲ್ಲ."

"ಅಜ್ಜಿ, ಸಿಟ್ಟಿನಲ್ಲಿ ಏನಾದರೂ ಒಂದು ಮಾತು ಅಪ್ಪಿದಪ್ಪಿ ಅಂದಿದ್ದರೆ, ಯಜಮಾನರು ಸುಧಾರಿಸಿಕೊಳ್ಳಬೇಕು."

ಗಂಗಮ್ಮ ಕಾಫಿ ತಂದಿಟ್ಟು ಕುಡಿಯಲು ಹೇಳಿದಳು. ಬೆಳಗಿನ ಸಿಟ್ಟು ಆಕೆಗೆ ಈಗ ಪೂರ್ಣವಾಗಿ ಮಾಯವಾಗಿತ್ತು ಏನಿದ್ದರೂ ಆ ಕ್ಷಣದಲ್ಲಿಯೇ ಅಲ್ಲಿಗೇ ಅದನ್ನು ಆಕೆ ಕೈಬಿಡುತ್ತಿದ್ದಳು. ಗುರುಮೂರ್ತಿ ಕಾಫಿ ಗುಟುಗರಿಸಲಿಕ್ಕೆ ಹತ್ತಿದ.

ಅಷ್ಟರಲ್ಲೇ ಶಿವಣ್ಣಯ್ಯ 'ಹೊಂಬೆಳಕು' ಪತ್ರಿಕೆಯನ್ನು ಹಿಡಿದುಕೊಂಡು ಒಳಗೆ ಬಂದರು. ಗಂಗಮ್ಮ ಅವರಿಗೂ ಕಾಫಿ ತಂದಿಟ್ಟಳು.

"ಇಂದಿನದೇ ಪತ್ರಿಕೆ?"

"ಹೂ. ಅಂದಹಾಗೆ ಮರೆತಿದ್ದೆ. ರೇಣುಕನ ಕವನವೊಂದು ಇದರಲ್ಲಿ ಪ್ರಕಟವಾಗಿದೆ ನೋಡು."

"ಎಲ್ಲೀ ಎಲ್ಲೀ....ಯಾವುದೆಲ್ಲಿ?" ಎಂದು ಚಿಕ್ಕಮಕ್ಕಳ ಹಾಗೆ ಹಾರಾಡುತ್ತ ಗುರುಮೂರ್ತಿ ವಾರಪತ್ರಿಕೆ 'ಹೊಂಬೆಳ'ಗಿನ ಪ್ರತಿ ಹಾಳೆಗಳನ್ನು ಮಗುಚಿ ಹಾಕಿದ. ಆದರೆ ಕವನ ಸಿಕ್ಕಲಿಲ್ಲ.

"ಎಲ್ಲಿದೆ? ಸಿಕ್ಕಲಿಲ್ಲ"

"ಮೊದಲಿನ ಪುಟದಲ್ಲಿ ಮೇಲ್ಗಡೆ ಇದೆ ನೋಡು. 'ಪುಷ್ಪ' ಎಂತ"

ಮೊದಲಿನ ಪುಟದ ಮೇಲ್ಗಡೆ 'ಪುಷ್ಪ' ಸಿಕ್ಕಿತು. ಗುಲಾಬಿ ಪುಷ್ಪವನ್ನು ಕಂಡಂತಾಯಿತು. 'ಪುಷ್ಪ' ಬಣ್ಣದ ಅಕ್ಷರಗಳಿಂದ ಅಚ್ಚಾಗಿತ್ತು. ಸುತ್ತಲೂ ಹೂವಿನ ಕಟ್ಟೆನೋಪಾದಿಯ ಗೆರೆಗಳಿದ್ದವು.

ಆ ಕವನವನ್ನೋದಿ ಗುರುಮೂರ್ತಿಯ ಮುಖ ಅರಳಿತು.

# ೧೩

ಪಕ್ಕದ ಮೇಜಿನ ಮೇಲಿದ್ದ ರೇಡಿಯೋ ಒಂದನ್ನು ತಿರುಗಿಸುತ್ತ ಬಸವಂತರಾಯರು ಮಗನೊಂದಿಗೆ ಮಾತು ಬೆಳೆಸಿದರು.

"ವಿಶ್ವ, ಈಗ ಮತ್ತೂ ಒಂದು ವರ್ಷ ಕಳೆದು ಹೋಯಿತು. ಬಾಬು ರಾಯರು ಎಷ್ಟು ದಿನ ಎಂತ ಪ್ರೇಮಳನ್ನು ಮನೆಯಲ್ಲಿಟ್ಟುಕೊಂಡಾರು. ನೀನು ಒಪ್ಪಿದರೆ ಒಂದು ದಿನ ಬಂದು ನಿಶ್ಚಯ ಮಾಡುತ್ತಾರೆ. ಏನಂತೀಯೆ? ."

"ಮದುವೆ!" ತನಗೆ ಜನ್ಮದಲ್ಲಿಯೇ ಬೇಡವಾದ ಮದುವೆಯ ಪ್ರಶ್ನೆ!

"ಅಪ್ಪಾ, ನಾನು ಅವೊತ್ತೇ ಹೇಳಲಿಲ್ಲೆ ಒಲ್ಲೇಂತ. ಸುಮ್ಮನೆ ನನ್ನ ಯಾಕೆ ಹೀಗೆ ಪೀಡಿಸುತ್ತೀರಿ?"

"ಏನೋ ಗಂಡಸಾದವನೇಕೆ ಲಗ್ನ ಒಲ್ಲೆ ಅಂತಾರೆಯೆ? ಛೆ! ಹುಚ್ಚ. ನಿನಗ್ಯಾರು ಈ ಸನ್ಯಾಸಿ ಗೀಳು ಊದಿದಾರೆ? ಹಾಗೆಲ್ಲಾ ಮಾಡಬಾರದು. ನಮಗೇನು ಕಮ್ಮಿಯಾಗಿದೆ. ರಾಜಾರೋಷ್ ವಿಜೃಂಭಣೆಯಿಂದ ಮಾಡಿ ಬಿಡೋಣ."

"ಕೆಲಸ ಬಿಟ್ಟು ಪಾರ್ವತಿಬಾಯಿ ಮೊನ್ನೆ ಹೊಳೆಯಲ್ಲಿ ಏನು ಅಂದರು ಗೊತ್ತೇಂಪ್ರೆ ನಿನಗೆ ."

"ಇರಲಿ ಹೋಗು ಸಾಕು. ನಿಮ್ಮ ಹೆಂಗಸರ ಕಿತಾಪತಿ ಇದ್ದೇ ಇದೆ."

ಕಣಕ್ಕೆ ಬಂದ ಕತ್ತೆಯನ್ನು ಹೊಡೆದೋಡಿಸುವಂತೆ ಕಿರಿಚಿದ ವಿಶ್ವನಾಥರಾವ್.

"ಅಗೋ ನೋಡಿ! ಮಾತುಮಾತಿಗೆ ಸಿಟ್ಟು ಮಾಡಿಕೊಳ್ಳುತ್ತಾನೆ. ಇಷ್ಟು ಉರಿಯಬಾರದು ವಿಶ್ವನಾಥ. ದೇವರು ಒಳ್ಳೆಯದು ಮಾಡುವುದಿಲ್ಲ. ಆ ರೇಣುಕ, ಮಾಧು ನೋಡಿದರೆ ಹೃದಯ ಕರಗಿ ನೀರಾಗುತ್ತೆ. ನೀನೋ ಸುಖವಾಗಿದ್ದರೂ ಇಂಥ ನಡತೆ."

ರೇಣುಕಪ್ರಸಾದನಿಗೆ ಬಂದೊದಗಿದ್ದ ಆಕಸ್ಮಾತ್ ಘಟನೆಗಾಗಿ ವಿಶ್ವನಾಥ ಬಹಳ ನೊಂದಿದ್ದ. ಆದರೆ ಈಗ ಕೋಪದ ಬಲೆಯಲ್ಲಿದ್ದುದ

ರಿಂದ "ಹಾಗಿದ್ದಕ್ಕೇನೆ ಅವನಿಗೆ ಜೈಲಾಯಿತು. ಸೊಕ್ಕು ಯಾರದು?"

"ಸಾಕು ದೊಡ್ಡಮನುಷ್ಯ ಎಂದರು ಬಿಡು" ಎಂದು ಚಿಕ್ಕ ಮುಖ ಮಾಡಿಕೊಂಡು ಪಾರ್ವತಮ್ಮ ಕುಳಿತಳು.

ಬಸವ್ವಬಾಯಿಯೂ ಕೂಡ ಊಟಮಾಡಿ ಹೊರಗೆ ಬಂದರು.

"ವಿಶ್ವನಾಥೂ, ಬಾಬು ಕಾಗದ ಹಾಕಿದಾನೋ. ಆಗಲಪ್ಪ, ಮನೆಗೆ ನಿನ್ನ ಹೆಂಡತಿ ಬಂದು ಸುಖವಾಗಿದ್ದರೆ ಸಾಕು."

"ಅವನು ಲಗ್ನವೇ ಒಲ್ಲೆ ಅಂತಾನೆ ಸರ್ದಾರ ಮಗ ನಾವೆಲ್ಲಾ ಹುಡುಗರಿದ್ದಾಗ ಹೀಗೆ ಮಾಡುತ್ತಿದ್ದಿಲ್ಲ."

"ನಾನು ಎಷ್ಟು 'ವೀಕ್' ಇದೇನೆಂತ ನಿಮಗೇನಾದರೂ ಗೊತ್ತೆ?"

"ವೀಕ್ ವೀಕ್, ಅದೆಷ್ಟು ಟಾನಿಕ್ ಕೊಡಿಸಿದ್ದೇವೆ. ಇನ್ನು ದೇಶದೊಳಗಿನ ಔಷಧಿಗಳೆಲ್ಲ ತೀರಿ ಹೋದವು" ,ಎಂದರು ಅವರಮ್ಮ.

"ಇನ್ನೂ ತೊಗೊಳ್ಳಮ್ಮ ನನ್ನ ಮೊಮ್ಮಗ. ಮೈ ಕೈ ತುಂಬಿಕೊಂಡು ಸಂತೋಷದಿಂದ ಆಡ್ಯಾಡಿದರೆ ಸಾಕು."

"ಆಗಲಿ, ಇನ್ನೂ ತೆಗೆದುಕೊಳ್ಳಲಿ. ಯಾರು ಬೇಡಾಂದರು." ಎಂದರು ಬಸವಂತರಾವ್.

"ಈಗ ಹೇಗೆ? ನಿನಗೆ ಸರಿಯಾಗಿ ಔಷಧ ಕೊಡಿಸಿ ಆರೋಗ್ಯವಂತ ನನ್ನಾಗಿ ಮಾಡುತ್ತೇವೆ. ಈ ಲಗ್ನಕ್ಕೆ ಹೇಗೆ? ನೀನೀಗ ಒಪ್ಪಿದರೂ ಒಂದು ವರ್ಷದ ನಂತರವೇ ಲಗ್ನ."

ವಿಶ್ವನಾಥ ಇವರ ಗುಂಪಿನಿಂದ ಎದ್ದುಹೋಗಲು ಹವಣಿಸಿದ. ಪಾರ್ವತಿಬಾಯಿ ಹಿಡಿದು ಕೂರಿಸಿ,

"ಅದೇನು ಹೇಳು. ಎಷ್ಟು ದಿವಸದಿಂದ ಸತಾಯಿಸ್ತಾ ಇದೀಯೆ. ಇವತ್ತೇನಿದ್ದರೂ ನಿರ್ಧಾರವಾಗಿ ಬಿಡಬೇಕು" ಎಂದು ಹೇಳಿದಳು ಕೊಂಚ ರೇಗಿ.

ವಿಶ್ವನಾಥರಾವ್ ಬೇರೆ ಏನನ್ನೂ ಯೋಚಿಸದೆ ಲಗ್ನಕ್ಕೆ ಒಪ್ಪ ಬೇಕಾಯಿತು. ಅವನು ತನ್ನ ಇಪ್ಪತ್ತನೆಯ ವರ್ಷದಲ್ಲಿಯೇ ಸಕಲ ಕಷ್ಟಸುಖಗಳನ್ನು ವೈಯಕ್ತಿಕವಾಗಿ ಅನುಭವಿಸಿದ್ದ. ಇನ್ನುಳಿದ ಕಾಲವನ್ನು ಹಾಯಾಗಿ ಒಬ್ಬೊಂಟಿಗನಾಗಿ ಕಳೆಯಲು ಯೋಚಿಸಿದ್ದ. ಪರಂತು ಮನೆ ಯವರು ಅದಕ್ಕೆ ಅಡ್ಡ ಬರುತ್ತಿದ್ದು, ಇಂದು ಸರಿಯಾಗಿ ಪಟ್ಟು ಹಿಡಿದಿ

ದ್ದರು.

"ಹ್ಞೂ ಆಗಲಿ. ನಾನು ಪ್ರೇಮುಳನ್ನು ಮಾಡಿಕೊಳ್ಳಲಿಕ್ಕೆ ಒಪ್ಪು ತ್ತೇನೆ. ಆದರೆ ಈಗಲೇ ಲಗ್ನ ಬೇಡ...."

ಮನೆಯವರಿಗೆ ಅವನ ಮಾತನ್ನು ಕೇಳಿ ಅತುಲನೀಯವಾದ ಆನಂದ ವುಂಟಾಯಿತು. ಲಗ್ನಮಾಡಿಕೊಳ್ಳಲ್ಲಾಂದರೂ ಒಪ್ಪಿದನಲ್ಲಾ ಎಂದು ಅವರ ಹೃದಯ ಅರಳಿತು.

"ಹಾಗೆ ಮಾಡು· ಈಗಲೇ ಲಗ್ನ ಆಗೆಂದು ಯಾರು ಪೀಡಿಸಿದರು" ಎಂದು ಬಸವಂತರಾಯರು ಹೇಳಿದರು.

"ಅಂತೂ ಒಪ್ಪಿದನಲ್ಲ, ಆ ಮಲ್ಲಿಕಾರ್ಜುನನರ ಆಶೀರ್ವಾದದಿಂದ. ಆತನಿಗೆ ನಾನು ಬೇಡಿಕೊಂಡಿದ್ದೆ. ಈ ಬಾರಿ ಜಾತ್ರೆಗೆ ಹೋಗಿ ಜಂಗ ಮರ ಆರಾಧನೆ ಮಾಡಿನೋಣಂತೆ" ಎಂದು ಪಾರ್ವತಿಬಾಯಿ ರೀವಿಯಿಂದ ಹೇಳಿದಳು.

ತನಗಿನ್ನು ಈ ಲೋಕದಲ್ಲಿ ಸ್ಥಾನವಿಲ್ಲವೆಂದು ಅರಿತಿದ್ದ ವಿಶ್ವನಾಥ ರಾಯನಿಗೆ ಮದುವೆಯೊಂದು ದೊಡ್ಡ ಕಂಟಕ ಪ್ರಾಯವಾಗಿ ಪರಿಣಮಿ ಸಿತು. ಇವರ ಕೂಡ ಆ ಹೆಣ್ಣನ್ನು ಗೋಳಿಡುವುದಕ್ಕಿಂತ ಎಲ್ಲಿಗಾದರೂ ಹೊರಟು ಹೊಗುವುದುಚಿತವೆಂದು ಅವನು ನಿರ್ಧರಿಸಿದ.

ಆದರೆ ಮತ್ತೆ ಅವನೇ ಯೋಚಿಸಿದ: 'ಹಾಗೆ ತಲೆಮರೆಸಿಕೊಂಡು ಓಡಿಹೋಗಿ ಪಡಬಾರದ ಕಷ್ಟಗಳನ್ನು ಅನುಭವಿಸಿದ್ದಾಗಿದೆ. ಅದರಿಂದ ಸುಖವಿಲ್ಲ. ಮತ್ತಾವದರಿಂದ ಸುಖ ? .ಈ ಲೋಕದಿಂದ ನಿರ್ಲಿಪ್ತನಾ ಗುವದರಿಂದ ಹೆಚ್ಚಿನ ಅಗಾಧ ಸುಖವಿದೆ! ಪ್ರಾಣಹತ್ಯದಿಂದ ನರಕವಾ ದರೂ ಸಿಕ್ಕುತ್ತದೆ. ಅಂತೂ ಈ ಲೋಕವನ್ನಾದರೂ ಬಿಡಬಹುದು. ದೈಹಿಕವಾಗಿಯೂ ಮಾನಸಿಕವಾಗಿಯೂ ಯಾವ ಯಾತನೆಗಳನ್ನೂ ಅನುಭವಿಸುವಂತಿಲ್ಲ.'

"ಹೌದು· ಹಾಗೆ ಮಾಡುವುದರಿಂದ ತಂದೆ ತಾಯಿಗಳಿಗೆ ಅದೆಷ್ಟು ದುಃಖವಾಗಬೇಡ? ಅವರೆಷ್ಟು ವಿರಹವೇದನೆಯಿಂದ ಬೆಂದಾರು?

ಅದು ಅವರ ಪಾಲಿಗೆ ಬಂದ ಪಂಚಾಮೃತ· ಯಾರು ಯಾರಿಗೆ ಸಹಾನುಭೂತಿಯನ್ನು ಎಷ್ಟು ದಿನಗಳು ತೋರಿಸಲು ಶಕ್ಯ? ಒಂದೇ ಬಾರಿಗೆ ಜೀವ ಹೋದರೆ, ಈ ನರಕಯಾತನೆಯಿಂದ ತಪ್ಪಿಸಿಕೊಳ್ಳ

ಬಹುದು” ಯಾವರೀತಿ ಪ್ರಾಣಹತ್ಯ ಮಾಡಿಕೊಳ್ಳುವುದೆಂದು ಯೋಚಿಸಿ, ತಂದೆಯ ಹೆಸರಿನಲ್ಲಿ ಅವನು ಕಾಗದ ಒಂದನ್ನು ಬರೆದಿಟ್ಟ. ಪ್ರಾಣಹತ್ಯ ಮಾಡಿಕೊಳ್ಳುವ ದಿನವನ್ನು ನಿರ್ಧಾರಮಾಡಿದ. ಆ ಕೆಟ್ಟ ಅಭ್ಯಾಸದಿಂದ ಸದಾ ಸಮಯ ತಪ್ಪಿಸಿಕೊಳ್ಳುವ ಮಾರ್ಗ ಇದೊಂದೇ ಎಂದು ಅವನಿಗೆ ನಿರ್ಧಾರವಾಗಿತ್ತು. ಆ ಚೀಟಿಯಲ್ಲಿ.

“ನಾನು ಇಂದು ನಿಮ್ಮನ್ನಗಲಿ ಬಹುದೂರ—ದೂರ ಹೋಗುತ್ತಿದ್ದೇನೆ. ನನ್ನ ಅಗಲುವಿಕೆಯಿಂದ ನೀವು ತುಂಬಾ ನಿರಾಶರಾಗುತ್ತೀರಿ, ಅದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಇದು ದೈವಲೀಲೆ ಎಂದೆನ್ನಿಸುತ್ತದೆ ನನಗೆ. ಆ ದೇವರಲ್ಲಿ ಅಚಲವಾದ ಭಕ್ತಿಯನ್ನಿಟ್ಟಿದ್ದೇನೆ—ಎಂಬುದು ನಿಮಗೆ ತಿಳಿಯದೇ ಇಲ್ಲ. ಆದರೂ ನನ್ನ ಪಾಲಿಗೆ ದೇವರ ಕೃಪಾಕಟಾಕ್ಷ ಬೀಳಲಿಲ್ಲ.

—ಈಗ ಪ್ರೇಮಳನ್ನು ಗಂಟುಹಾಕಿ, ನನ್ನ ಜೀವನದ ಜೊತೆಗೆ ಅವಳ ಜೀವನವನ್ನೂ ಹಾಳುಮಾಡಲು ಯತ್ನಿಸುತ್ತಿದ್ದೀರಿ. ಆದರಿಂದ ಪಾರಾಗಲು ನನ್ನ ದೃಷ್ಟಿಯಲ್ಲಿ ಈ ಮಾರ್ಗದ ವಿನಾ ಬೇರೆ ಏನೂ ತೋಚಲೊಲ್ಲದು

ದೇವರು ನನ್ನನ್ನು ತುಂಬಾ ಪೀಡಿಸಿದ್ದಾನೆ. ಬೆಂದ ಅನ್ನದಂತೆ ನನ್ನ ಶರೀರವಾಗಿ ಹೋಗಿದೆ. ಈಗಲಾದರೂ ಆತನ ಆಶೀರ್ವಾದದ ಬಲ ಪೊಂದಿದ್ದರೆ, ನಾನು ಮೂರ್ತಿವಂತ ಮಾನವನಾಗುತ್ತಿದ್ದೆ. ಮೊದಲಿನ ಅಕ್ಕಿ ಕಾಳಿನ ಹಾಗೆ ಮಾರ್ಪಡದಿದ್ದರೂ ಸರಿಯೆ, ಒಣಗಿದ ಅಗಳಿನಂತಾದರೂ ಸಂಶಯವಿಲ್ಲದೆ ಆಗುತ್ತಿದ್ದೆ. ಈಗ ದೇವರ ಮೇಲೆ ನಿಷ್ಕಲಭಕ್ತಿ ಕಡಮೆಯಾಗುತ್ತಿದೆ. ದೇವರೇನಾದರೂ ಇದ್ದು, ನನಗೆ ಬೇರೆ ಲೋಕವಲ್ಲಿ ದರ್ಶನವಾದರೆ, ಈ ಬಗ್ಗೆ ಮುನಿಸಿನಿಂದ ಮಾತನಾಡಬೇಕೆನ್ನಿಸುತ್ತದೆ. ದೇವರು ಅಕಸ್ಮಾತ್ ಮೇರೆ ತಪ್ಪಿ ಮಾತನಾಡಿದರೆ, ಕಂಕುಳದಲ್ಲಿನ ಚೂರಿಯನ್ನು ತೆಗೆದುಕೊಂಡು ಅಲ್ಲಿಂದಲೇ ಎಸೆಯಲೋ ಎನ್ನುವ ಹಾಗೆ ಆಗಿದೆ.

—ಏನೊ ಹುಚ್ಚನ ಹಾಗೆ ಬರೆದಿದ್ದಾನೆ ಎಂದು ಆಡಿಕೊಳ್ಳಬಹುದು. ಬಾಳಿನಲ್ಲಿ ನೊಂದ ಜೀವಿಗೆ ಹಾಗಾಗುತ್ತದೆ. ದೇವರು ಮಾತ್ರ ತನ್ನಷ್ಟಕ್ಕೆ ತಾನು ಸುಖವಾಗಿದ್ದು, ತಾನು ಸೃಜಿಸಿರುವ ಭಕ್ತರಿಗೆ

ಕಾಳನಮನೆಯಲ್ಲಿ ಜೀವಿಸುತ್ತಿರುವುದು ಯಾರಿಗೆ ತಾನೆ ಪ್ರೇರಣೆಯಾದೀತು?!

ಇತಿ ನಿಮ್ಮ
ವಿಶ್ವನಾಥ

ಆ ದಿನ ಮಂಗಳವಾರ ಪ್ರಾತಃಕಾಲ ಎದ್ದು ಶುಚಿರ್ಭೂತನಾಗಿ ಸ್ನಾನಮಾಡಿ, ನದಿಯಿಂದ ಮಡಿಯುಟ್ಟುಕೊಂಡು ಬಂದು ನಿತ್ಯವಿಧಿಗಳನ್ನು ಅವನು ತೀರಿಸಿದ. ತನ್ನ ಆ ದೇಹ ಕಡೆಯದಾಗಿ ನದಿಯಲ್ಲಿ ಮಿಂದಿತ್ತು. ಸ್ನಾನವಾದನಂತರ ಮನೆಗೆ ಹಿಂತಿರುಗುವ ವೇಳೆಯಲ್ಲಿ, ಒಮ್ಮೆ ಆ ತುಂಗಭದ್ರಾನದಿಯನ್ನು ನೋಡಲು ಅವನು ಮರೆಯಲಿಲ್ಲ. ಅವಳು ತನ್ನ ಕೆಲಸದ ಮೇಲೆ ನಿರತಳಾಗಿದ್ದಳು. ಅವನ ದುರಂತ ಜೀವನಕ್ಕಾಗಿ ಅವಳ ಸಹಾನುಭೂತಿಪರದೃಷ್ಟಿಯನ್ನೂ ಅವನು ಬೀರಲಿಲ್ಲ.

ಮಧ್ಯಾಹ್ನದ ಊಟವಾದನಂತರ ವಿಶ್ವನಾಥ ಮನೆಯವರ ಸಂಗಡ ಪ್ರತಿದಿನಕ್ಕಿಂತ ಹೆಚ್ಚಿಗೆ ಮಾತನಾಡಿದ. ಅವನ ಕಣ್ಣುಗಳು ಯಾವುದೋ ಅವ್ಯಕ್ತವಾದ ವ್ಯಥೆಯ ಮಂದ ಹೊಳಪನ್ನು ತೋರಿಸುತ್ತಿದ್ದವು. ಕಣ್ಣಿನ ಸುತ್ತಲೂ ವರ್ತುಲಾಕಾರವಾಗಿ ಕಪ್ಪುಕಟ್ಟಿತ್ತು. ಸಕಲ ವೈಭವಗಳನ್ನು ದೇವರು ಕೊಟ್ಟಿದ್ದರೂ ಉಣ್ಣುವ ಹಾಗಿರಲಿಲ್ಲ. ಕೈಕೊಟ್ಟು ಹಗ್ಗ ಕಟ್ಟಿಸಿಕೊಂಡಂತಾಗಿತ್ತು. ಆ ಕೆಟ್ಟ ಸ್ನೇಹ ಅವನನ್ನು ಆ ರೀತಿಗೆಳೆದಿತ್ತು. ಅವನನ್ನು ಆ ಮಾರ್ಗಕ್ಕೆ ಎಳೆದು, ಕಲ್ಲುಮುಳ್ಳುಗಳನ್ನು ತುಳಿಸಿ ಹಾಳು ಮಾಡಿದ್ದ, ಮೊದಲಿನ ಸ್ನೇಹಿತನ ಪ್ರತಿ ಸೇಡುತೀರಿಸಿಕೊಳ್ಳಲು ಜೀವ ಕಾಂಕ್ಷಿಸುತ್ತಿತ್ತು, ಆದರೆ ಅವನು ಏನೂ ಮಾಡದ ಹೇಡಿಯಾಗಿದ್ದ.

ಆ ದಿನ ಸಂಜೆಗೆ ವಿಶ್ವನಾಥ ಮನೆಯನ್ನು ಬಿಟ್ಟ. ಆಗ ಬಸವಂತರಾಯರು ಮನೆಯಲ್ಲಿರಲಿಲ್ಲ. ಮನೆ ಬಿಡುವುದಕ್ಕೆ ಮೊದಲು ಕೋಣೆಯ ಬೀರುವಿನಲ್ಲಿ ಅವನು ತನ್ನ ಕೊನೆಯ ಕಾಗದವನ್ನಿಟ್ಟಿದ್ದ. ಮನೆಯನ್ನೊಮ್ಮೆ ಜಡದೃಷ್ಟಿಯಿಂದ ನೋಡಿದ. ಎದೆಯಲ್ಲಿ ಭಾರಿ ಕೋಲಾಹಲವೆದ್ದಿತ್ತು. ಎದೆ ಜಾಗಟೆಯಂತೆ ಹೊಡೆಯುತ್ತಿತ್ತು. ತನ್ನ ಪಂಚಭೌತಿಕ ದೇಹವನ್ನು ಅವನು ಧೂಮಶಕಟದ ಬಾಯಲ್ಲಿಡಬೇಕಾಗಿತ್ತು. ಊರಿನಿಂದ ವಿಹಾರಾರ್ಥವಾಗಿ ಹೊರಡುವವನಂತೆ ಹೊರಟ. ಒಂದನೆಯ ರೈಲು ಗೇಟ್ ಕಳೆಯಿತು. ಎರಡನೆಯ ರೈಲು ಗೇಟೂ ಸಮೀಪಿಸುತ್ತಿತ್ತು.

ಇಲ್ಲದ ವಿಚಾರಗಳು ಮನಸ್ಸಿನಲ್ಲಿ ಒಂದೊಂದಾಗಿ ಬರುತ್ತಿದ್ದವು. ಅವನಿಗೆ ತನ್ನ ಬಾಲ್ಯದ ನೆನಪು ಬಂತು. ತಾನು ಹುಡುಗರೊಂದಿಗೆ ಜಗಳಕಾದು ಮನೆಗೆ ಓಡಿ ಬಂದಾಗ, ಮನೆಯವರು ಅವನಿಗೆ ತುಂಟ ಹುಡುಗನೆಂದೆನ್ನುತ್ತಿದುದು, ಮಾಧು, ರೇಣುಕರೊಂದಿಗೆ ಮರಳಿನಲ್ಲಿ ಚಿಕ್ಕ ಮನೆಗಳನ್ನು ಕಟ್ಟಿ ಆಟವಾಡುತ್ತಿದ್ದುದು–ಎಲ್ಲವೂ ಅವನ ಸ್ಮೃತಿ ಪಟಲದಲ್ಲಿ ಹಾಯ್ದು ಹೋದವು.

ಬಾಲ್ಯಾವಸ್ಥೆ ಕಳೆದು ತಾರುಣ್ಯಾವಸ್ಥೆಯ ಮೆಟ್ಟಲಿನಲ್ಲಿ ಕಾಲಿಡುತ್ತಿದ್ದಾಗ, ಗಿರಿರಾಜನ ಸ್ನೇಹದಿಂದ ಅಡ್ಡದಾರಿಗೆ ಬಿದ್ದು, ಅದರಲ್ಲಿ ತಲ್ಲೀನನಾಗಿ ಹಾಳಾದ. ಆ ದುರಭ್ಯಾಸ ಪುಷ್ಟಿತವಾಗಿ ಹೋಗಿದ್ದ ಕಾರಣ ಅದರಿಂದ ನಿರ್ಲಿಪ್ತನಾಗದೇ ಹೋದ ಆತ್ಮ ಸಂಯಮದಿಂದ ಅವನು ಬಿಡುಗಡೆ ಹೊಂದಬಹುದಾಗಿದ್ದರೂ, ಅದು ಅವನಿಂದ ಸಾಧ್ಯವಾಗದ ಮಾತಾಯಿತು. ರಕ್ತದ ಪ್ರತಿ ಕಣಕಣಗಳಲ್ಲೂ ಅದರ ಪ್ರಭಾವ ಸಮಾವೇಶಗೊಂಡಿತ್ತು. ಆ ಹೊಲಸು ಕೃತ್ಯವನ್ನು ಎಸಗಬಾರದು—ಬಾರದು ಎನ್ನುತ್ತಿದ್ದಂತೆಯೇ, ಅದರ ಉರಿ ಮಡಲಿನಲ್ಲಿ ಬಿದ್ದು ಗಾಳಕ್ಕೆ ಮಾರು ಹೋಗಿ ಸಿಕ್ಕಿಕೊಳ್ಳುವ ಮೀನಿನಂತಾಗುವುದು—ಇವೆಲ್ಲವೂ ಪುನಃ ಅವನ ನೆನಪಿಗೆ ಬಂದವು.

ಈ ಹೊತ್ತಿಗಾಗಲೇ ಅವನು ಎರಡನೆಯ ಗೇಟನ್ನು ದಾಟಿದ್ದರೂ ಅದರ ಪರಿವೆ ಅವನಿಗಿರಲಿಲ್ಲ. ತನ್ನದೇ ಆದ ಬೇರೆ ಲೋಕದಲ್ಲಿ ಅವನು ಸುತ್ತಾಡುತ್ತಿದ್ದ.

ಒಬ್ಬೊಬ್ಬರ ಜೀವನ ಒಂದೊಂದು ತೆರನಾಗಿ ಪರಿಣಮಿಸಿದೆ ಎಂದು ಅವನಿಗೂ ಅರಿವಾಯಿತು. ಮಾಧವರಾಯ, ರೇಣುಕಪ್ರಸಾದ ಬಡತನದ ಭೂತಕ್ಕೆ ಒಳಗಾಗಿದ್ದರೆ, ತಾನು ದುಷ್ಚಟದ ಬಲೆಯಲ್ಲಿ ಸಿಕ್ಕಿದಾನೆ. ತಮ್ಮದನ್ನು ತಾವು ಮಾಡಿಕೊಂಡು ಸುಖವಾಗಿರೋಣವೆಂದರೆ ದೊಡ್ಡಪ್ಪನವರಂತಹ ಶ್ರೀಮಂತರಿಂದ ಎದೆಬಿರಿಯುವ ಪ್ರಕರಣಗಳು ಬೇರೆ. ತನಗಾದಂತೆಯೇ ರೇಣುಕನ ಎದೆಯೂ ವಜ್ರದಂತೆ ಕಠೋರವಾಗಿದೆಯೆಂದು ಆ ದಿನ ಬೆಳಗ್ಗೆ ಅವನ ಇನ್ನೊಂದು ಕಾಗದವನ್ನು ಓದಿ ತಿಳಿದು ತಿಳಿದುಕೊಂಡಿದ್ದ. ಆ ಓಲೆಯ ಪೂರ್ತಿ ಪಾಠ ನೆನಪಿಗೆ ಬಂತು.

'ಅಣ್ಣಾ, ನಾನು ಜೈಲಿನಿಂದ ಬಿಡುಗಡೆಯಾಗುವ ದಿನ ಹತ್ತಿರ–

ಹತ್ತಿರ ಬರುತ್ತಲಿದೆ. ನನ್ನ ಮಹತ್ವಪೂರ್ಣ ಕಾಗದಗಳಲ್ಲಿದೊಂದು.

....ನನ್ನ ಈ ವಯಸ್ಸಿಗೆ ಪಡಬಾರದ ಕಷ್ಟಗಳನ್ನು ನಾನು ಅನುಭವಿಸಿದೆ. ಹೊರಗಿನವರೇ ನಮ್ಮ ಆಪ್ತ ಬಂಧುಗಳೇ ವಿನಾ—ಸಂಬಂಧಿಕರು, ನೆಂಟರು ಎಂಬುವರು ಆಗದ ಜನಗಳು. ನಮ್ಮನ್ನು ಕೆಡಹಬಾರದ ತಗ್ಗಿನಲ್ಲಿ ಎರಡೂ ಕಣ್ಣುಗಳಿಂದ ಸಂಪ್ರೀತರಾಗಿ ನೋಡುತ್ತಾರೆ. ಅವರು ಕೊಲೆಮಾಡಲಿಕ್ಕೂ ವಿಷಕೊಟ್ಟು ಸಾಯಿಸುವುದಕ್ಕೂ ಹೇಸರು!

ನಾನು ಏನೋ ತಿಳಿದಾಗ ಕವನಗಳನ್ನು ಬರೆಯುತ್ತೇನೆಯೇ ವಿನಾ ಅದೊಂದು ನಿತ್ಯದ ಕೆಲಸವಲ್ಲ ನನ್ನ ಇತ್ತೀಚಿನ ಕವನ 'ಹೆಣ್ಣಿನ ಬಾಳು ಕಣ್ಣೀರು' ಎಂಬುದು ಹೊಂಬೆಳಗಿನಲ್ಲಿ ಅಚ್ಚಾಗಿದ್ದುದು ಉಮಾಪತಿಗೂ ತಿಳಿದು, ಅದು ತಮ್ಮನ್ನು ಕುರಿತಾಗಿ ಬರೆದಿದೆಯೆಂದು ತಪ್ಪು ಕಲ್ಪನೆ ಮಾಡಿಕೊಂಡು ಕಾಗದ ಒಂದನ್ನು ಸಿಕ್ಕಾಪಟ್ಟೆ ಬರೆದಿದ್ದಾನೆ....ಎಂತಹ ಕ್ಷುಲ್ಲಕ ಮನೋಪ್ರವೃತ್ತಿಯವರು ಇರುತ್ತಾರೆಂದು ಮೊನ್ನೆ ತಿಳಿಯಿತು ನನಗೆ! ಅದರಲ್ಲಿ ಹೀಗೆ ಬರೆದಿದಾನೆ. 'ನಮ್ಮೂರ ದನ ಕಾಯುವವನಿಂದ ಇಂತಹ ಕವನಗಳನ್ನು ಬರೆಸಲೆ? ನಿಮ್ಮ ಬುದ್ಧಿವಂತಿಕೆಯನ್ನು ಇಂಥ ಚಟುವಟಿಕೆಗಳಲ್ಲಿ ಉಪಯೋಗಿಸಿಕೊಳ್ಳಬೇಡಿ. ಈಗ ತಾವು ಅನುಭವಿಸುತ್ತಿರುವುದು ತಮ್ಮ ಗರ್ವದ ಪರಮಾವಧಿಯ ಪರಿಣಾಮ.

ನಾನದುಕ್ಕುತ್ತರವಾಗಿ

'ಸಾಹಿತ್ಯಸೇವೆ ಒಂದು ಜನಾಂಗದ ಸೊತ್ತಲ್ಲ. ದನ ಕಾಯುವವನು ಯಾವುದೋ ಅಡಚಣೆಗಳಿಂದ ವಿದ್ಯಾಭ್ಯಾಸ ಮಾಡದೇ ಇರಬಹುದು. ಅವನಿಗೂ ಕವನ ಬರೆಯುವ ಸ್ಫೂರ್ತಿ ಇದ್ದರೆ ಅವಶ್ಯ ಬರೆಯಲಿ. ಅಂತಹ ವ್ಯಕ್ತಿಗಳಿಗೆ ನಾನು ಸುಸ್ವಾಗತ ಬಯಸುತ್ತೇನೆ. ತಾವು ಬೇಕಾದರೂ ಬರೆಯಿರಿ. ಯಾಕೆ, ನಿಮ್ಮ ಸಹೋದರರಿಗೂ ಬರೆಯುವಂತೆ ಪ್ರೋತ್ಸಾಹಿಸಿ. ಮೊದಮೊದಲು ಉತ್ತಮವಾದ ಕೃತಿಗಳು ಸೃಜನವಾಗದಿದ್ದರೂ ಕೈಪಳಗುತ್ತ ಹೋದಂತೆಲ್ಲಾ ಭಾವಾವಿಷ್ಟದ ಲೇಖಗಳನ್ನು ಬರೆಯಬಹುದು'ಎಂದು ಬರೆದಿದ್ದೇನೆ. ತಥಾಸ್ತು.

ನನ್ನ ಪ್ರೀತಿಯ ಅಣ್ಣಾ! ದಾಯಾದಿ ಮತ್ಸರವೆಂಬುದು ಕಾಳು ಸರ್ಪನ ವಿಷದ ಹಾಗೆ; ಅದರಿಂದ ಕೌರವರು ಹಾಳಾದರು. ಆ ದಾಯಾದಿ

ಮತ್ಸರದಿಂದ ಅನೇಕ ರಾಜ್ಯಗಳೂ ಮಕುಟಗಳೂ ಹೇಳಹೆಸರಿಲ್ಲದ ಹಾಗೆ ಭಸ್ಮವಾಗಿವೆ ಅದರ ಅನುಭವ ನಮಗೂ ವ್ಯಕ್ತವಾಗಿರಲಿಕ್ಕೆ ಸಾಕು. ನಾವು ಇದಕ್ಕಾಗಿ ಎದೆಗುಂದುವುದು ಬೇಡ. ದೊಡ್ಡ ಆಶಾವಾದಿಗಳಾಗಿ ಬಾಳನ್ನು ಎದುರಿಸೋಣ! ಹಿಂದಿನ ಆ ಮಹಾವ್ಯಕ್ತಿಗಳಿಗೇನೆ ತೊಂದರೆಕೊಟ್ಟ ದಾಯಾದಿಗಳು ನಮ್ಮಂತಹವರನ್ನು ಕಾಡುತ್ತಿರುವಲ್ಲಿ ಆಶ್ಚರ್ಯವೇನೂ ಇಲ್ಲ. ಆದರೊಂದು ಮಾತಣ್ಣ: ನಾವಿಬ್ಬರೂ ಲೋಕಕ್ಕೆ ಆದರ್ಶರಂತೆ ನಡೆದುಕೊಳ್ಳಬೇಕು. ಅಂತಹ ಮನೋಪ್ರವೃತ್ತಿಯನ್ನು ನಮ್ಮ ಮಕ್ಕಳಾದ ಜಗನ್ನಾಥ, ಇಂದುಧರ ಮುಂತಾದವರಿಗೆ ಬೆಳೆಸಲು ಸರ್ವ ಪ್ರಯತ್ನಮಾಡಬೇಕು. ದಾಯಾದಿ ಮತ್ಸರದ ವಿಷಬೀಜ ನಮ್ಮಲ್ಲಿಯೂ ನಮ್ಮ ಮಕ್ಕಳಲ್ಲಿಯೂ ಅಂಕುರಿತವಾಗದಂತೆ ಮುಂಜಾಗ್ರತೆ ತೆಗೆದುಕೊಳ್ಳೋಣ, ಇದಿಷ್ಟನ್ನು ನಡೆಯಿಸಿಕೊಡಬೇಕು ..

ನಾನೀಗ ಜೈಲಿನ ಕೈದೋಟ ಒಂದರಲ್ಲಿ ಕುಳಿತುಕೊಂಡು ತೆಂಗಿನ ಮರದಲ್ಲಿನ ಎಳೆಗಾಯನ್ನು ನೋಡುತ್ತ ಈ ಪತ್ರ ಬರೆಯುತ್ತಿದ್ದೇನೆ. ಎಳೆಗಾಯಲ್ಲಿನ ಸಿಹಿ ನೀರಿನಂತೆ ನಮ್ಮ ಪ್ರೇಮ ಸದಾ ಸರ್ವದಾ ಸಿಹಿಯಾಗಿರಬೇಕು. ನಾನು ಈ ವೇಳೆಯಲ್ಲಿ ಉಮಾಪತಿಯ ಕಾಗದದ ಕೊನೆಯ 'ಪ್ಯಾರಾ' ವನ್ನು ಉದ್ಧೃತಮಾಡಿ, ವಿಮರ್ಶಿಸಿ ನನ್ನೀ ಓಲೆಯನ್ನು ಮುಗಿಸುತ್ತೇನೆ.

"ನನ್ನ ನೆರವಿರದಿದ್ದರೆ ಈ ಒಳಗಾಗಿ ಎಂದೋ ದುರವಸ್ಥೆಗೆ ಗುರಿಯಾಗುತ್ತಿದ್ದಿ. ಯಾರ ಭೀತಿಯಿಂದ ಅನುಕೂಲ ವಾತಾವರಣವು ನಿನಗುಂಟಾಗಿದೆಯೆಂದು ಆಲೋಚಿಸುತ್ತಾ ಸ್ಮರಿಸುತ್ತಿರು. ನಾವು ಬರೆದಿರುವ ಎಲ್ಲಾ ವಿಷಯುಗಳನ್ನು ಸಂಪೂರ್ಣ ಮನವರಿಕೆ ಮಾಡಿಕೊ."

ಅವನು ಹಾಗೆ ಬರೆದಿರುವಲ್ಲಿ ಖಂಡಿತ ಸತ್ಯಾಂಶವಿದೆ. ಆ ಪರಮ ಶತ್ರು ದಾಯಾದಿ ಬಸವರಾಜನು ಏನೋ ಕ್ಷುಲ್ಲಕ ವಿಚಾರವನ್ನು ಮಾಡಿ ನಮ್ಮನ್ನು ಹಾಳು ಮಾಡುವುದಕ್ಕೆ ಪ್ರಸ್ತಾಪಿಸಿರಬಹುದು. ಅದನ್ನೂ ಬರೆದಿದ್ದಾನೆ.

ಎಂತಹ ಭೀಕರ ಪರಿಸ್ಥಿತಿಗಳು ಬಂದರೂ ಸಹ ಅವುಗಳನ್ನು ನಮ್ಮಿಬ್ಬರ ಸಂಯುಕ್ತ ಶಕ್ತಿಯಿಂದ ಬಿರುಗಾಳಿಯಂತೆ ಎದುರಿಸೋಣ.

ನಮ್ಮಿಬ್ಬರ ಹೃದಯ ಯಾವಾಗಲೂ ಒಂದಾಗಿರುವುದಕ್ಕೆ ಯತ್ನಿಸೋಣ. ನಾವು ನಮ್ಮ ಸಾತ್ವಿಕ ಆದರ್ಶತೆಯನ್ನು ಪ್ರಚಲಿತಗೊಳಿಸಲು ಹಿಮಾಲಯ ಪರ್ವತದಂತ ಅಚಲರಾಗಿರೋಣ!"

ಓಹ್! ಎಂತಹ ಹೃದಯವಿದ್ರಾವಕ ಪತ್ರ! ಬರುವ ಕಷ್ಟಗಳನ್ನು ಬಿರುಗಾಳಿಯಂತೆ ಎದುರಿಸೋಣ ಎಂದು ಜನತೆಗೆ ಹೊಸ ಸಂದೇಶವನ್ನು ಸಾರಿದಾನೆ. ತಾನು ಏನನ್ನೂ ಎದುರಿಸಲಾರದ ಹೇಡಿ. ಹೆಂಗಸಿನಂತೆ ಜೀವ ಬಿಡಲು ಊರು ಬಿಟ್ಟು, ಇಳಿಜಾರಾದ ಪ್ರದೇಶದಲ್ಲಿ ಗಾಡಿ ಬರುವಾಗ ಕಲ್ಲು ಬೀಳುವ ಹಾಗೆ ಬಿದ್ದು ರೈಲಿಗೆ ಆಹುತಿಯಾಗಬೇಕಾಗಿದೆ. ಅವರು ಕಷ್ಟಕಾರ್ಪಣ್ಯಗಳನ್ನು ಎದುರಿಸಿದರೆ ತಾನು ಇಂದ್ರಿಯ ನಿಗ್ರಹವನ್ನೂ ಮಾಡಲಾರ ಅವೆಷ್ಟು ದೇವರಲ್ಲಿ ಆಣೆಗಳನ್ನಿಟ್ಟಿದ್ದ, ಇನ್ನು ಮುಂದೆ ಇದನ್ನೂ ತ್ಯಜಿಸುವೆನೆಂದು.

ದೂರದಲ್ಲಿ ಪ್ಯಾಸಿಂಜರ್ ಗಾಡಿಯ ಬೆಳಕು ಕಾಣಿಸಿತು! ಇನ್ನು ಈ ಬಗ್ಗೆ ಹೆಚ್ಚು ಯೋಚಿಸಲು ಅವನಿಗೆ ಸಮಯವಿಲ್ಲ. ಕಣ್ಮುಚ್ಚಿ ತೆಗೆಯುವುದರೊಳಗಾಗಿ ಗಾಡಿ ಬಂದೇ ಬಿಡುತ್ತದೆ; ಅದು ಮಾತ್ರ ಶತಸ್ಸಿದ್ಧ. ಹಾಗಾದರೆ ಈಗೇನು ಮಾಡುವುದು? ಯಂತ್ರದ ಬಾಯಿಗೆ ಬೀಳುವುದೋ ಅಥವಾ ಬೇಡವೋ? ಹ್ಞು; ಬೇಗ ನಿರ್ಧಾರವಾಗಲಿ. ಅದೋ, ಗಾಡಿ ಬಂದೇ ಬಿಟ್ಟಿತು!

ಛೆ! ಅವೆಷ್ಟು ದಿನ ಈ ಬಾಳಿನಲ್ಲಿ ಬೇಯುವುದು? ಅದರಿಂದ ನಿರ್ಲಿಪ್ತನಾದರೂ ಮುಂದೆ ತಾನು ಯಾವ ಸುಖ ಪಡೆಯಬಹುದೆಂಬ ಭರವಸೆಯಿದೆ? ಸಾಯುವುದೇ ತುಂಬ ಉತ್ತಮ.

ಪ್ಯಾಸಿಂಜರ್ ಬಂಡಿ ಬಂದೇ ಬಿಟ್ಟಿತು!

ವಿಶ್ವನಾಥನ ಎದೆ ಜೋರಾಗಿ ಹೊಡೆಯುತ್ತಿತ್ತು. ಇನ್ನು ಎರಡು ಸೆಕೆಂಡ್‌ಗಳಲ್ಲಿ ಅವನ ಜೀವ ಹಾರಿಹೋಗುತ್ತದೆ. ಒಳಗಿನ ಹೃದಯ ಅಲ್ಲಿನ ಬಿರುಗಾಳಿಗೆ ಕರಗಿ ನೀರಾದಂತೆ ಪರಿಣಮಿಸಿತು. ಮೈಯೆಲ್ಲಾ ಬೆವರಿತು. ಬಾಳನ್ನು ಪ್ರಚಂಡ ಆಶಾವಾದಿಯಾಗಿ ಎದುರಿಸೆಂದು ಆ ಮುಂದಿನ ಇಂಜಿನ್ ಉದ್ಘೋಷಿಸಿ ಹೇಳಿದಂತಾಯಿತು. "ಬಾಳನ್ನು ಬಿರುಗಾಳಿಯಂತೆ ಎದುರಿಸೋಣ. ನಾವು ಹಿಮಾಲಯ ಪರ್ವತದಂತೆ ಅಚಲರಾಗಿರೋಣ" ಎಂಬ ರೇಣುಕಪ್ರಸಾದನ ಮಾತುಗಳೂ ಮನಸ್ಸಿ

ನಲ್ಲಿ ಹೊಳೆದುವು. ಹಾಗೆಯೇ ಅವನು ಮುನ್ನುಗ್ಗದೇ ನಿಂತ. ಇಂಜಿನ್ ಅವನ ಮುಂದೆ ಹಾಯ್ದು ಹೋಯಿತು ಒಂದೊಂದಾಗಿ ಹಿಂದಿನ ಗಾಡಿಗಳು ಅನುಸರಿಸಿ ಹೋದುವು. ಗಾಡಿಯಲ್ಲಿನ ಪ್ರಯಾಣಿಕನೊಬ್ಬ ಇವನನ್ನು ತನ್ನ ಕರವಸ್ತ್ರದಿಂದ ಕೈಬೀಸಿ ಕರೆಯುತ್ತಿದ್ದ. ಇವನು ಮಾತ್ರ ಅಲ್ಲಾಡದೆ ನಿಂತಲ್ಲಿಯೇ ನಿಂತಿದ್ದ. ಯಾರೋ ಹೊರಗಡೆ ಉಗುಳಿದಾಗ, ಅದು ಇವನ ಮುಖದ ಮೇಲೆ ಸಿಡಿದು ಬಿದ್ದುಹೋಯಿತು. ಆದರೇನು, ಗಾಡಿ ತನ್ನಷ್ಟಕ್ಕೆ ತಾನು ಕಾರ್ಯೋನ್ಮುಖವಾಗಿತ್ತು.

—ಇನ್ನು ಆ ಇರುಳಿನಲ್ಲಿ ಬಂದದಾರಿಗೆ ಸುಂಕವಿಲ್ಲವೆಂಬುವಂತೆ ಅವನು ಮನೆಯತ್ತ ಹಿಂದಿರುಗಬೇಕಾಯಿತು. ಆ ಅಂಧಕಾರದಲ್ಲಿ ವಿಶ್ವನಾಥ ಮೆಲ್ಲಸೆ ಹೆಜ್ಜೆಗಳನ್ನಿಡುತ್ತಾ ಹೊರಟ.

ಅಂದಿಗೆ ಹದಿನೈದು ದಿನಗಳ ಹಿಂದೆ 'ಸೆಲೂನ್'ಗೆ ಹೋದಾಗ ಮುಖವನ್ನು ಅವನಿಗೆ ನೋಡಿಕೊಳ್ಳುವ ಧೈರ್ಯವಾಗಿದ್ದಿಲ್ಲ. ಇತ್ತೀಚಿನಿಂದ ಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳುವ ಅಭ್ಯಾಸವನ್ನು ಅವನು ಬಿಟ್ಟುಬಿಟ್ಟಿದ್ದ. ಕೂದಲುಗಳನ್ನು ಹಿಕ್ಕಿಕೊಂಡರೆ ಅದೇ ಪುಣ್ಯ.

ನಿರ್ಜನ ಪ್ರದೇಶದಲ್ಲಿ ಅವನೊಬ್ಬನೇ ಬರುತ್ತಿದ್ದ. ಹರಿಹರ—ದಾವಣಗೆರೆ ರಸ್ತೆಯಾಗಿದ್ದರೆ ಹೆದರಬೇಕಾಗಿರಲಿಲ್ಲ, ರೈಲು ದಾರಿಯಾಗಿದ್ದರಿಂದ ಒಡೆದು ಹೋಗಿತ್ತು. ಅವನ ಕಣ್ಣೆದುರಿಗೆ ಕಾಣುವ ದೃಶ್ಯ, ಆ ಅಂಧಕಾರ ಒಂದೇ! ಪಕ್ಕದ ನೀರಿನ ಕೊಳಗಳಲ್ಲಿನ ಜೀರುಂಪೆಗಳು 'ಝೀ' ಗುಟ್ಟುತ್ತಿದ್ದು ಸನ್ನಿವೇಶವನ್ನು ಇನ್ನೂ ಭೀಕರಗೊಳಿಸಿದ್ದವು. ನರಿಗಳು ಗಂಟಲು ಹರಿಯುವವರೆವಿಗೆ ಕೂಗುತ್ತಿದ್ದವು. ಸಮೀಪದ ಡೊಗ್ಗಳ್ಳಿಯಲ್ಲಿನ ನಾಯಿಗಳ ಬೊಗಳುವಿಕೆ ಆ ಭೀಕರತೆಗೆ ಪುಷ್ಟಿಕೊಟ್ಟಿತ್ತು. ಸಮೀಪದ ಹೊಲದಲ್ಲಿನ ಮರ ಒಂದನ್ನು ನೋಡಿ ಅವನು ಹೆದರಿ ಬಿಟ್ಟ. ಅವನ ಜೀವನದಲ್ಲಿನ ಶಕ್ತಿ ಆವಿಯಾದಂತೆ ಭಾಸವಾಯಿತು, ಆದರೂ ಸರ್ವ ಪ್ರಯತ್ನಮಾಡಿ ಅವನು ಓಡಲಿಕ್ಕೆ ಮೊದಲುಮಾಡಿದ. ಕೊನೆಗೆ ಹೇಗೋ ರಸ್ತೆಗೆ ಬಂದು ಬಿದ್ದ. ಬಂಡಿಯೊಂದು ಹರಿಹರದ ಕಡೆಗೆ ಹೋಗುತ್ತಿತ್ತು. ಆ ಬಂಡಿಯ ಮುಂದೆ ಇನ್ನೊಂದು ಬಂಡಿಯೂ ಇತ್ತು. ಉಡುಗಿ ಹೋದ ಜೀವ ಬಂದಂತಾಯಿತು ಅವನಿಗೆ. ಬೆವೆತ ಮುಖವನ್ನು ಒರೆಸಿಕೊಂಡು ದೈನ್ಯ ಸ್ವರದಲ್ಲಿ ಬಂಡಿಯವನೊಂದಿಗೆ ಬೇಡಿದ.

"ಏನ್ರಿ ನಾನು ಹತ್ತಲೆ?...."

"ಯಾವೂರವರು ? ಗಾಡಿ ಹರಿಹರಕ್ಕೆ ಹೋಗ್ತೈತಿ."

"ನಾವೂ ಹರಿಹರದವರೇ."

"ಹೂ, ಹತ್ತಪ್ಪ. ಅದಕೇನಂತೆ" ಎಂದ ಬಂಡಿಯವನು.

"ಇಷ್ಟೊತ್ತಿನಾಗ ಯಾವೂರ್ಗ್ಹೋಗಿದ್ರಿ?"

"ಡೊಗ್ಗಳ್ಳಿಗೆ. ನಮ್ಮ ರೈತ ಜೋಳ ಕೊಡಬೇಕಿತ್ತು. ಅವನು ಊರಿನಲ್ಲಿದ್ದಿಲ್ಲ.

ವಿಶ್ವನಾಥ ಒಂದರ ಮೇಲೊಂದು ಸರಬುರುಡಿಗೆ ವೊದಲು ಮಾಡಿದ.

"ಅಲ್ಯಾರ ಮನಿಯಾಗೆ ?" ಬಂಡಿಯವನೆಂದ.

ವಿಶ್ವನಾಥ ಗಾಬರಿಯಾದ. ಜೀವ ಉಳಿಸಿಕೊಳ್ಳುವುದಕ್ಕೆ ಸುಳ್ಳು ಹೇಳಿದ್ದ. ಒಳ್ಳೆಯ ಪೀಕಲಾಟಕ್ಕೆ ಇಟ್ಟುಕೊಂಡಿತಲ್ಲಾ ಎಂದುಕೊಂಡು,

"ಬಾವಿಕಟ್ಟೆ ಹತ್ತಿರ ಒಬ್ಬರ ಮನೆ ಇದೆಯಲ್ಲಾ ಅದು."

"ಓಹೋ, ಅವ್ರೇ, ಬಾವಿಕಟ್ಟೆ ಇರಸಂಗಪ್ಪಾರು. ಗೊತ್ತಾತು ಬಿಡು, ಏ ಗೊತ್ತಾತು" ಎಂದು ತಲೆಯಲ್ಲಾಡಿಸಿದ ಬಂಡಿಯ ರೈತ.

ವಿಶ್ವನಾಥನಿಗೆ ಹೋದುಸಿರು ತಿರುಗಿತು. ಹೊತ್ತಾಗಿ ಹೋದರೂ ಪರವಾ ಇಲ್ಲ, ಊರಮುಖ ನೋಡುತ್ತೇನೆಂದು ಸಂತೋಷವಾಯಿತು. ಈಗ ವೊದಲ ಬಾರಿ ಅರಿವಾಗಿತ್ತು , ಮನುಷ್ಯ ಜೀವದ ಮೇಲೆ ಎಷ್ಟು ಆಸೆಯನ್ನಿಟ್ಟುಕೊಂಡಿರುತ್ತಾನೆ ಎಂದು ಕಷ್ಟಗಳನ್ನು ಹೇಗೆ ಹೇಳ ಹೆಸರಿಲ್ಲದ ಹಾಗೆ ಕಿತ್ತೊಗೆಯುತ್ತಾನೆ. ಮತ್ತು ತಾನು ಸಂಯಮಮಾಡಲು ಸರ್ವ ಪ್ರಯತ್ನಮಾಡಿ, ಬಾಳನ್ನು ಹಸನಾಗಿ ಮಾಡಿಕೊಳ್ಳಲು ಯತ್ನಿಸಬೇಕು. ಅಕಸ್ಮಾತ್ ಸಾಧ್ಯವಾಗದಿದ್ದರೆ ದಿನದಿನಕ್ಕೂ ಇಳಿದಿಳಿದು ಕ್ಷಯದಿಂದ ಸತ್ತರೂ ಉತ್ತಮ. ಪ್ರಾಣಹತ್ಯ ಮಾಡಿಕೊಳ್ಳಲು ಕೈಹಾಕಬಾರದೆಂದು ಅವರು ನಿರ್ಧರಿಸಿದ. ಒಂದು ಜೀವದ ಬೆಲೆ ಎಷ್ಟೆಂದು ಇಂದಿನ ಘಟನೆಯಿಂದ ಅವನಿಗೆ ತಿಳಿದಿತ್ತು. ಆ ವೇಳೆಗೆ ಊರು ಬಂತು. ಚಲನಚಿತ್ರ ಮಂದಿರದ ಬಳಿ ಬಂಡಿ ಬಂದಾಗ "ನಾನು ಹೋಗುವೆ ಅಜ್ಜ. ರಾತ್ರಿ ನಾನೊಬ್ಬನೇ ನಡೆದು ಬರಬೇಕಿತ್ತು. ಎಷ್ಟು ಉಪಕಾರ ಆಯಿತು...." ಎಂದು ಕೃತಜ್ಞತಾಪೂರ್ವಕ ದೃಷ್ಟಿಯಿಂದ ಹೇಳಿದ.

ಗಾಡಿಯವನು ಬೀಡಿ ಸೇದುತ್ತ "ಹೋಗೋ ಹುಚ್ಚ! ನಾನೇನು ಉಪ್ಕಾರ ಮಾಡ್ದೆ. ಗಾಡಿ ಬರ್ತಿತ್ತು ಕೂತ್ಕೊಂಡೆ, ಬಂದೆ. ನಿನಗೇಂತ ಏನರ ಗಾಡಿ ಬಂತೇನು. ಇದ್ಕೆಲ್ಲಾ ಉಪ್ಕಾರ ಅಂದ್ರೆ ದೇವ್ರು ಮೆಚ್ಚಾಕಿಲ್ಲ" ಎಂದು ಔಪಚಾರಿಕೆವಾಗಿ ಹೇಳಿದ.

ಗಾಡಿಯವನ ಔದಾರ್ಯವನ್ನು ಕುರಿತಾಗಿ ಯೋಚಿಸುತ್ತ ವಿಶ್ವನಾಥ ಮನೆ ಸೇರಿದನು. ಅವನು ಮನೆ ಸೇರಿದಾಗ ರಾತ್ರಿ ಹತ್ತು ಘಂಟೆಯಾಗಿತ್ತು. ಇವನಿಗಾಗಿ ಮನೆಯವರೆಲ್ಲಾ ಕಾದು ಕುಳಿತುಕೊಂಡಿದ್ದರು.

"ಎಷ್ಟು ಹೊತ್ತು ವೀಶು, ನಾವು ಎಷ್ಟು ಹೊತ್ತು ಕುಳಿತುಕೊಳ್ಳೋಣ. ಊಟಮಾಡು ಹೋಗು" ಎಂದು ವಿಷಾದದಿಂದ ಬಸವಂತರಾಯರು ಹೇಳಿದರು.

"ನಮ್ಮ ಸ್ನೇಹಿತರು ಸಿನಿಮಾಕ್ಕೆ ಕರೆದರು ; ಹೋಗಿದ್ದೆ "

"ಮನೆಯಲ್ಲಿ ಹೋಗ್ತೇನೀಂತ ಹೇಳಿಬಿಟ್ಟು ಹೋಗಬೇಕು"

ಎಂದು ಅವರಮ್ಮ ಬಾಯಿ ಹಾಕಿದರು ನಿತ್ಯ ಇದಿಷ್ಟೇ ಮಾತು ಸಾಕಿತ್ತು ಅವನಿಗೆ ಕೋಪಮಾಡಿಕೊಳ್ಳಲು. ಆದರೆ ಈದಿನ ತನ್ನ ತಪ್ಪು ಪೂರ್ಣವಿದ್ದುದರಿಂದ ಅವನು ಕೋಪವನ್ನು ತಡೆದುಕೊಂಡ. ಊಟಮಾಡಿ ಆದಿನ ನಡೆದ ಪ್ರತಿಯೊಂದು ಘಟನೆಗಳನ್ನೂ ಅವನು ಧೇನಿಸಿದ. ಅಂದಿನ ದಿನ ನಡೆದ ಕೃತಿಗಳು ಮಾತ್ರ ದಾರದ ಕಂಡಿಕೆಯಂತೆ ಮನಸ್ಸಿನಲ್ಲಿ ಸುಳಿದವು. ತನ್ನ ಸ್ಥಿತಿ ಅಲ್ಲಿಯವರೆವಿಗೂ ಬಂತೇ? .......ಹಾಗಾದರೆ ಭವಿಷತ್ತಿನ ಜೀವನ ಸುಖಮಯವಾಗುವುದಾದರೂ ಹೇಗೆ? ಬಸವಂತರಾಯರ ಏಕಮಾತ್ರ ಪುತ್ರ ವಿಶ್ವನಾಥರಾಯ ಕ್ಷಯರೋಗದಿಂದ ತೀರಿದ ಎನ್ನುವವರೆವಿಗೆ ಪರಿಸ್ಥಿತಿ ಬರಬಾರದು. ದೇವರ ಮೇಲೆ ಭಾರಹಾಕಿ ಆದರಿಂಡ ಪೂರ್ಣ ಬಂಧವಿಮುಕ್ತರಾಗುವ—ಎಂದು ಯೋಚಿಸಿದ. ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿದು ಬಂದು, ಆ ಎಣ್ಣೆಗಟ್ಟಿದ ತಲೆದಿಂಬಿನಿಂದ ಉರುಳುರುಳಿ ಕೆಳಕ್ಕೆ ಬಿದ್ದು ಹಾಸಿಗೆಯಲ್ಲಿ ಇಂಗುತ್ತಿದ್ದವು.

೧೪

ಇತ್ತ ಮಾಲಿನಿ ಗಂಡನ ಮನೆಯಲ್ಲಿ ಕಣ್ಣೀರಿನಲ್ಲಿ ಕೈತೊಳೆಯು ತ್ತಿದ್ದಳು. ತನ್ನ ಅಣ್ಣನ ಪರಿಸ್ಥಿತಿಯ ನೆನಪು ಬಂದು ಆಕೆ ಆಗಾಗ ದುಃಖಿಸುವಳು. ಆಕೆಗೆ ಸರಿಯಾಗಿ ಊಟ ಸೇರುತ್ತಿದ್ದಿಲ್ಲ ಈಗ ಹಲವು ದಿನಗಳಿಂದ ಛಳಿಜ್ವರ ಬೇರೆ ಬರುತ್ತಿತ್ತು. ಅವಳಿಗೆ ಔಷಧಕೊಡಿಸುವ ರಾದರೂ ಯಾರು ಬರಬೇಕು? ಗಂಡನು ಆಯುರ್ವೇದದಲ್ಲಿ ಮಾಹಿತಿ ಯನ್ನು ಅಲ್ಪಸ್ವಲ್ಪ ಹೊಂದಿದ್ದವನಾದರೂ ತನ್ನ ಹೆಂಡತಿಯ ಆರೋಗ್ಯದ ಬಗ್ಗೆ ಆಸ್ಥೆವಹಿಸಿರಲಿಲ್ಲ. ಮಾತುಮಾತಿಗೆ ಶಿವಣ್ಣಯ್ಯನವರನ್ನು ಹಂಗಿ ಸುವುದು; ಅವರನ್ನೂ ಅವರ ಮಕ್ಕಳನ್ನೂ ಸಿಕ್ಕಾಪಟ್ಟೆ ಹಂಗಿಸೋಣ ವಾಗುವುದು—ಇತ್ಯಾದಿ ಏನಾದರೂ ನಡದೇ ಇರುತ್ತಿದ್ದವು. ಆ ಒಂದು ದಿನ ಹೊಕ್ಕುತುಂಬುವ ಬಾವಿಯ ಬಳಿ ಹೆಣ ಒಂದನ್ನು ಹೆಚ್ಚು ಹೊತ್ತು ನೋಡುತ್ತ ನಿಂತಿದ್ದು ದೊಡ್ಡ ಪ್ರಮಾದವಾಯಿತು.

ಅವಳೊಬ್ಬ ದುರ್ದೈವಿ ಹೆಣ್ಣು. ಅತ್ತೆಯ ಕಾಟ ತಡೆಯಲಾರದೆ ಬಾವಿಗೆ ಬಿದ್ದಿದ್ದಳು. ಆಕೆ ಬಾವಿಯಲ್ಲಿ ಬಿದ್ದಾಗಲಾದರೂ ಆ ವಜ್ರ ಹೃದಯದ ಅತ್ತೆಗೆ ಎಳ್ಳಷ್ಟೂ ಕನಿಕರ ಉಂಟಾಗಲಿಲ್ಲ. ಇನ್ನೊರ್ವ ಹೆಣ್ಣು ತಂದು ಲಗ್ನಮಾಡುತ್ತೇನೆಂದು ಆ ನೆರೆದ ಜನಗಳೆದುರೇ ಡಂಗುರ ಸಾರುತ್ತಿದ್ದಳು. ಮಾಲಿನಿ ಆ ದುರ್ದೈವಿ ಹೆಣ್ಣನ್ನು ನೋಡಿ ಭೂತಾನು ಕಂಪೆಯಿಂದ ತೃಪ್ತಿಯಾಗುವವರೆವಿಗೂ ಅತ್ತು, ಮನೆಗೆ ಸೇರಿದ್ದಳು.

ಅವರತ್ತೆ ಅವಡುಗಚ್ಚಿಕೊಂಡು "ಎಲ್ಲಿ ಹೋಗಿದ್ದೇ ಕೆಟ್ಟಶನಿಯೇ. ನೀನೆಲ್ಲಿಂದ ಮೂಲಾದೆ" ಎಂದಳು. ದುರ್ದೈವವಶಾತ್ ಅಂದು ಹೇಮಗಿರಿ, ಉಮಾಪತಿ, ಇಬ್ಬರೂ ಅವಳೆಂದುದಕ್ಕೆ ಪುಷ್ಟಿಕೊಟ್ಟು ಮಾತಾಡಿದರು.

"ಅವರಪ್ಪ ದೊಡ್ಡ ಸಾಹುಕಾರ, ಒಂದಾಳು ತಂದಿಡುತ್ತಾರೆ. ಯಾಕೆ ಹೋಗಲಿ, ಬಿಡಿ. ಬೇಕಾದರೆ ಇನ್ನೊಬ್ಬರ ಮನೆಯಲ್ಲೂ ಇರ ಬಹುದು" ಎಂದ ಉಮಾಪತಿ.

ಅಣ್ಣನ ಮಾತಿಗೆ ಹೇಮಗಿರಿ ಪ್ರತಿಷ್ಠೆಮಾಡಿ ಹೇಳಿದ:

"ಅವರಣ್ಣ ಕವಿ. 'ಹೆಣ್ಣಿನ ಬಾಳು ಕಣ್ಣೀರು' ಬರೆದಿರುವ. ಅದನ್ನು ನೋಡಲಿಕ್ಕೆ ಹೋಗಿದ್ದಳೇನೋ."

"ಇಲ್ಲತ್ತೆ, ಚನ್ನಕ್ಕನೂ ಹೋಗಿದ್ದಳು. ಹಾಗೆ ನಾನು ..."

"ಯಾವಕ್ಕರ ಹೋಗಲಿ, ಮಾಲಕ್ಕನ್ದು ಏನಿತ್ತಲ್ಲಿ? ಈಗ ನೆಗೆದು ಹೋಗಿರೋ ನಿಂಗಿ ಚನ್ನಿ ನೆಂಟರು ಅದಕ್ಕೆ ಹೋಗಿರಬಹುದು. ಇದೇ ನೇನು ನಿಮ್ಮ ಗಂಗವ್ವ ಕಲಿಸಿರೋದು. ಒಮ್ಮೆ ಹೋಗಲಿಲ್ಲ, ಬರಲಿಲ್ಲ. ಎಲ್ಲಾ ನಿಮ್ಮದು ಒಣ ಒಣ ಸಂಬಂಧವಾಯ್ತು."

"ಏ! ಅವರಪ್ಪ ಹತ್ತುವರ್ಷ ದುಡಿಯದೆ ತಿನ್ನುವಷ್ಟು ಮುಯ್ಯಿ ಮಾಡಿದಾರೆ. ಮತ್ತೇನಾಗಬೇಕು?" ಎಂದು ಉಮಾಪತಿ ರೇಗಿ ಹೇಳಿ "ನೀನು ನಮ್ಮನ್ನಾಗಲಿ ಅಥವಾ ಅವ್ವನ್ನಾಗಲಿ ಕೇಳದಹಾಗೆ ಹೋದರೆ ಕಾಲು ಮುರಿದಿಡುತ್ತೇನೆ, ಹುಷಾರ್?!" ಎಂದು ಗದರಿಸಿದ.

ಉಮಾಪತಿಯ ಕೋಪದ ಮುಖವನ್ನೊಮ್ಮೆ ಮಾಲಿನಿ ನೋಡಿದಳು. ಶುದ್ಧ ಕಟುಗನ ಮುಖದ ಹಾಗೆ ಗೋಚರವಾಯಿತು. ಅದು ಆ ಕಟುಗನ ಮುಖದಲ್ಲೀಗ ದುಮುದುಮು ತಾಳಬೇರೆ ನಡೆದಿವೆ.

"ನೀನು ನಮ್ಮಂತೆ ಮಾತನಾಡದಿದ್ದರೆ, ನಾವು ಹೇಳಿದ್ದಕ್ಕೆಲ್ಲಾ 'ಹೂ' ಗುಟ್ಟದಿದ್ದರೆ ವಿಷದ ಇಂಜಕ್ಷನ್ ಕೊಡಿಸಿಬಿಡುವೆ, ನೋಡು. ನೆನಪಿನಲ್ಲಿಟ್ಟುಕೊಂಡಿರು" ಎಂದು ಈ ಮೊದಲೆ ಗಂಭೀರವಾಗಿ ಉಮಾಪತಿ ಒದರಿ, ಅವಳಲ್ಲಿ ಹೆದರಿಕೆಯ ಬೀಜ ಬೆಳೆಯುವಂತೆ ಮಾಡಿದ್ದ.

ಆ ಮಂಜುಳ ದೇಹ ಇಂತಹ ಕಠಿನ ಸನ್ನಿವೇಶದಲ್ಲಿ ಬೆಳೆದಿರಲಿಲ್ಲ. ಹೀಗೆ ಮಾತನಾಡುವವರನ್ನೇನೊ ಆಕೆ ಅನೇಕ ಬಾರಿ ನೋಡಿದ್ದಳು. ಅವರು ವಿದ್ಯೆ ಇಲ್ಲದ ಅವಿದ್ಯಾವಂತರಾಗಿದ್ದರಿಂದ, ಹಾಗೆ ಮಾತಾಡುವುದು ಆಶ್ಚರ್ಯವಾಗಿದ್ದಿಲ್ಲ. ತಾನು ಯಾವ ಮಾತನಾಡಲು ಸ್ವಲ್ಪ ಬಾಯಿ ಹಾಕಿದರೂ ಮಂಗಸಿಗೆ ನಾಯಿಗಳು ಬೆನ್ನು ಹತ್ತುವಂತೆ ಇವರು ಜಗಳಕಾಯುವದಕ್ಕೆ ಬರುತ್ತಿದ್ದರು. ಈ ವಿಷಮ ವಾತಾವರಣದಿಂದ ನಾಲ್ಕೈದು ದಿನಗಳೂ ಬೇರೆಯಾಗುವಂತಿದ್ದಿಲ್ಲ. ದಿನವೂ ಇಂತಹ ಕರುಳು ಕೊಯ್ಯುವ ನುಡಿಗಳಿಂದ ಅವಳ ದೇಹ ಕಂದುತ್ತಿತ್ತು.

ಒಂದು ದಿನ ಮುದೇನೂರು ಕೊಟ್ರಪ್ಪನವರು ಕೆಲಸದ ನಿಮಿತ್ತವಾಗಿ ಹೊಸಳ್ಳಿಗೆ ಹೋಗಿದ್ದರು. ಕೊಟ್ರಪ್ಪ ಮುದೇನೂರಿನಲ್ಲಿಯ ಗಣ್ಯವ್ಯಕ್ತಿ

ಗಳು. ಶಿವಣ್ಣಯ್ಯನವರ ಮಗಳ ವಿಚಾರ ಅವರಿಗೂ ತಿಳಿದು ದುಃಖ ಪಟ್ಟುಕೊಂಡಿದ್ದರು. ಮನೆಗೆ ಹೋದಾಗ ಮನೆಯಲ್ಲಿ ಯಾರೂ ಇರಲಿಲ್ಲ. ಮಾಲಿನಿ ಒಬ್ಬಳೇ ಒಳಗಿದ್ದಳು.

"ತಾಯಿ ತಾಯಿ" ಎನ್ನುತ್ತ ಅವರು ಒಳಗೆ ನಡೆದರು.

ಮಾಲಿನಿ ನೀರು ತಂದುಕೊಟ್ಟು "ಯಾವಾಗ ಬಂದಿದ್ದಿರಣ್ಣ ?" ಎಂದಳು ತಲೆ ಬಗ್ಗಿಸಿಕೊಂಡು.

"ಈಗ ತಾಯಿ. ಇನ್ನೂ ಇದೇ."

"ಊರತ್ತ ಎಲ್ಲರೂ ಚೆನ್ನಾಗಿದಾರೆಯೆ ?"

"ಹೂನವ್ವ. ಈ ವರ್ಷ ಮರುಳಸಿದ್ಧಮ್ಮನ ಲಗ್ನ ಉಂಟು. ಬೀಗರ ಕರೆಯಲಿಕ್ಕೆ ಬಂದಿದ್ದೆ. ಏನು ತಾಯಿ ಎಲ್ಲಾ ಸುಖತಾನೆ. ಯಾಕೋ ಕೃಶಳಾಗಿದೀಯೆ."

"ಈಗ ಸ್ವಲ್ಪ ದಿವಸಗಳಿಂದ ಛಳಿಜ್ವರ ಬರುತ್ತಿತ್ತು."

"ಅಲ್ಲ, ಬೇರೆ ಏನಾದರೂ...."

"ಛೆ! ಛೆ! ಹಾಗೇನೂ ಇಲ್ಲ. ಎಲ್ಲಾ ಸುಖವಾಗಿಟ್ಟಿದ್ದಾರೆ"

"ಏನುತಾಯಿ, ಕಾಗದಗಳು ತುಂಬಾ ಓಡಾಡಿವೆ ಎಂತ ಕೇಳಿದ್ದೆ."

"ನಾನು ನನ್ನ ತಂದೆಗೆ ಕಾಗದವೊಂದನ್ನು ಬರೆದಿದ್ದೆ. ಅವರು ತಿರುಗಿ ಹಾಗೆ ಯಾಕೆ ಬರೆಯಬೇಕು ಹೇಳಣ್ಣ?"

ಎಂದು ತನ್ನ ತಂದೆಯವರ ಮೇಲೆಯೇ ಮಾಲಿನಿ ತಪ್ಪು ಹೋರಿಸಿದಳು. ಗಂಡನ ಮನೆಯವರಿಗೆ ವಿರುದ್ಧವಾದ ವಿಚಾರಗಳನ್ನು ಕನಸು ಮನಸಿನಲ್ಲಿಯೂ ಆಕೆ ತೆಗೆಯುವಂತಿದ್ದಿಲ್ಲ. ಅವರು ಎಂತಹ ವಿಚಿತ್ರ ಹಿಂಸೆಗಳನ್ನು ಕೊಡಲಿ ಒಳಗೊಳಗೆ ಪಿಟಕ್ಕೆನ್ನದೆ ಮಾಲಿನಿ ಸಹಿಸಬೇಕಾಗಿತ್ತು.

ಹೊಸಳ್ಳಿಗೆ ಹೋಗಿ ಬಂದವರಿಂದ ಅಲ್ಪಸ್ವಲ್ಪ ವಿಚಾರಗಳು ಶಿವಣ್ಣಯ್ಯನವರಿಗೆ ತಿಳಿಯುತ್ತಿದ್ದವು. ಮಗಳು ಸುಖವಾಗಿದ್ದಾಳೆಂದು ಕೇಳಿದರೆ ಸಾಕು, ಅವರ ಜೀವ ಮಲ್ಲಿಗೆ ಹೂವಿನಂತೆ ಹಗುರವಾಗುತ್ತಿತ್ತು. ಆ ಜೀವಕ್ಕೆ ಹೊಸ ಜೀವ ತುಂಬಿ ಉಕ್ಕಿ ಬರುತ್ತಿತ್ತು.

ಒಂದೊಂದು ಬಾರಿ ಶಿವಣ್ಣಯ್ಯ ಪಾಟೀಲರ ಸಂಗಡ ಅಲ್ಲಿಗೆ ಹೋಗಿ ಬರಬೇಕೆಂದು ನಿರ್ಧರಮಾಡುವರು. ಇನ್ನೊಮ್ಮೆ ಆ ವಿಚಾರವನ್ನು ಅಲ್ಲಿಗೇ ಕೈಬಿಡುವರು. ಬಿಳಿಸನೂರಿನ ಶಿವಶಂಕರ ಪಾಟೀಲರು ಹೊಸಳ್ಳಿಗೆ

ಹೋಗುವ ಕೆಲಸ ಒಂದಿದೆಯೆಂದೂ, ಹೋದಾಗ ಗುರುಮೂರ್ತಿಯೊಂದಿಗೆ ಹೋಗಿ ಪಂಚಾಯಿತಿ ಹಾಕಿಸಿ ಸರಿಮಾಡಿಸುವೆವು—ಎಂದು ಗುರುಗಳಿಗೆ ಭರವಸೆ ಕೊಟ್ಟಿದ್ದರು.

ಆದರೆ ಈ ಮಧ್ಯೆ ಶಿವಣ್ಣಯ್ಯನವರ ಅಕ್ಕ ಅವರಗೊಳ್ಳದ ಸಾವಿತ್ರಮ್ಮ ಹರಿಹರಕ್ಕೆ ಬಂದಿದ್ದಳು. ಆಕೆಗೂ ಸೊಸೆಯನ್ನು ನೋಡಬೇಕೆಂಬ ಹಂಬಲ ಪೀಡಿಸುತ್ತಿತ್ತು. ಕಾಗದಗಳ ಓಡಾಟವಾದನಂತರ ಯಾರೂ ಅಲ್ಲಿಗೆ ಹೋಗಿರಲಿಲ್ಲ. ಒಮ್ಮೆ ಹರಿಹರದಿಂದ ಯಾರಾದರೂ ಹೋಗಿಬಂದರೆ ಮನಸ್ಸು ಒಂದಾಗಲು ಮಾರ್ಗವಾಗುತ್ತದೆ, ಎಂದು ಎಲ್ಲರೂ ತರ್ಕಿಸಿದ್ದರು. ಈನಿರ್ಧಾರಕ್ಕೆ ಶಿವಣ್ಣಯ್ಯನವರೂ ಒಪ್ಪಿದ್ದರು. ಹೊಸಳ್ಳಿಗೆ ಹೋಗಿ ಉಮಾಪತಿಯ ಚಿಕ್ಕಪ್ಪನವರ ಮನೆಯಲ್ಲಿ ತಂಗಿದ್ದು, ಅನಂತರ ಹೋಗಲು ಶಿವಣ್ಣಯ್ಯ ಸೂಚಿಸಿದ್ದರು. ಆ ಸೂಚನೆಯ ಪ್ರಕಾರ ಇವರೆಲ್ಲ ಒಂದುದಿನ ಪ್ರಯಾಣ ಬೆಳೆಸಿದರು.

ಮೊದಲು ಅವರ ಚಿಕ್ಕಪ್ಪನ ಮನೆಗೆ ಹೋಗಿ, ನೀರು ತೆಗೆದುಕೊಂಡಾದ ಮೇಲೆ ಉಮಾಪತಿಯ ಮನೆಗೆ ಸಾವಿತ್ರಮ್ಮ, ಗಂಗಮ್ಮ ಹೋದರು. ಬಾಗಿಲ ಬಳಿಯಲ್ಲಿಯೇ ಕುಳಿತಿದ್ದ ಹೇಮಗಿರಿಯ ಮನಸ್ಸು ಭುಗಿಲೆಂದಿತು

"ಯಾರು ? ನಮ್ಮನೆಯೊಳಗೆ ಯಾರೂ ಬರಬಾರದು. ಏ ಅವ್ವಾ ! ಕರೆದುಕೊಂಡೀ ನೋಡು. ಈಗಲೇ ಹೇಳಿ ಬಿಡುತ್ತೇನೆ."

ಸಾವಿತ್ರಮ್ಮನಿಗೆ ಈ ಮನೆಗೆ ಯಾಕಾದರೂ ಬಂದೆನೋ ಎನ್ನಿಸಿತು. ಆ ಹೊತ್ತಿಗೆ ನೋಡಿ ನೋಡಿಯೂ ಪಕ್ಕದ ಮುರುಕು ಮನೆಗೆ ಹೋಗಿದ್ದ ಉಮಾಪತಿ ಹೊರಗೆ ಬಂದು ಆಶ್ಚರ್ಯದಿಂದ ಕೇಳಿದ:

"ಯಾವಾಗ ಬಂದಿರಿ ...ನೀರು ತಗೊಂಡಿರಾ?"

"ಇನ್ನೂ ಇಲ್ಲಪ್ಪ" ಗಂಗಮ್ಮ ಅಂದಳು. ಇಷ್ಟೆಲ್ಲಾ ನಡೆಯುವವರೆವಿಗೆ ಮಾಲಿನಿ ಸುಮ್ಮನೆ ನೋಡುತ್ತ ನಿಂತಿದ್ದವಳು ಜಗ್ಗನೆದ್ದು ತೌರು ಮನೆಯವರಿಗೆ ನೀರು ತಂದುಕೊಡುವ ಸಲಿಗೆಯಿರಲಿಲ್ಲ. ಪುನಃ ಹೇಮಗಿರಿ ಅವರ ಬಳಿ ಬಂದು

"ಏನು ? ಯಾಕಾಗಿ ಬಂದಿರಿ ? ಎಲ್ಲಾ ದೊಡ್ಡಮನುಷ್ಯರು ನೀವು. ಯಾಕೆ ಬಂದಿರಿಲ್ಲಿಗೆ ?" ಎಂದನು.

ಗಂಗಮ್ಮನ ಎದೆಯೊಡೆಯಿತು. ನೆಗ್ಗಲು ಮುಳ್ಳುಗಳಿಂದ ಅಂಗಾಂಗದ ಪ್ರತಿಯೊಂದು ಭಾಗಗಳಿಗೂ ಆಕೆಗೆ ಚುಚ್ಚಿದಂತಾಯಿತು. ತಾಪತಪ್ತ ಹೃದಯಕ್ಕೆ ಕಬ್ಬಿಣದ ರಸವನ್ನು ಸುರಿಸಿದಂತಾಯಿತು ಸಿದ್ಧಮ್ಮನಿಗೆ ಮನೆಯವರು ಮಾಡುತ್ತಿರುವುದು ಸರಿಬೀಳಲಿಲ್ಲ. ಇನ್ನೊಬ್ಬರು ಹೇಗೆಯೆ ಇರಲಿ, ಮನೆಯ ಬಾಗಿಲಿನವರೆವಿಗೆ ಬಂದಿರುವವರಿಗೆ ಅವಮರ್ಯಾದೆ ಮಾಡುವುದು ಸ್ವೈರಾಚಾರವೆಂದು ಆಕೆ ಬಗೆದಳು.

"ಇರಲಿ ಬಿಡೋ ಹೇಮಗಿರಿ. ಯಾಕೆ ಹಾಗೆ ಮಾಡುತೀಯೆ. ಸುಮ್ಮನಿರೋ, ನಾನು ಮನೆಯಲ್ಲಿರುವಾಗ ಹಾಗೇಕೆ ಮುನ್ನುಗ್ಗಿ ಮಾತಾಡುತ್ತೀ ?"

"ಏನೂ ತಿಳಿದುಕೊಳ್ಳಬೇಡ ಗಂಗಕ್ಕ, ಆದದ್ದಾಯಿತು. ನಾನೂ ನೀನು ಯಾಕೆ ಒಣ ಸಿಟ್ಟಾಗಬೇಕು. ಅವರು ನನಗೆ ಪರಮವೈರಿಗಳಾಗಿದಾರೆ. ಅವರ ಸುದ್ದಿ ನನಗೆ ಬೇಡ. ಇಲ್ಲಿ ನೋಡು, ನಿನಗಿಷ್ಟ ಬಂದಾಗ ಬಂದು ನೋಡಿಕೊಂಡು ಹೋಗು" ಎಂದ ಉಮಾಪತಿ. ಇದರಿಂದ ಸಾವಿತ್ರಮ್ಮ—ಗಂಗಮ್ಮರ ಜೀವಕ್ಕೆ ತುಸು ಸಮಾಧಾನವಾಯಿತು. ಕುಳಿತುಕೊಳ್ಳಲು ಸ್ಥಳ ಸಿಕ್ಕಹಾಗಾಯಿತು ಸಿದ್ಧಮ್ಮ ಬೇಗ ಹೋಗಿ ಅಡುಗೆ ತಯಾರುಮಾಡಲು ಸೊಸೆಗೆ ಹೇಳಿ ಬಂದು ಮಾತು ತೆಗೆದಳು.

"ಏನವ್ವ, ಹರಿಹರದ ಶಿವಪ್ಪ ಏನು ಕಂತ್ರಾಟ ನಡೆಸಿಬಿಟ್ಟನ"

"ಏನು ಕಂತ್ರಾಟ? ಹುಡುಗಿ ಕೈಲಿ ಹೊಟ್ಟೆಯುರಿವಂತೆ, ಸಾವ ತನಕ ಕೊರಗಿ ಸಾಯುವಂತೆ ಕಾಗದ ಬರೆಸಿದ್ದಿರಿ. ನಾವಂಥ ಅಸಹ್ಯ ಕೆಲಸ ಮಾಡಿದ್ದಾದರೂ ಏನು? ಪರದೇಶಿ ಮಗ ಎಂದು ಹೆಣ್ಣುಕೊಟ್ಟು ಮನೆಮುಂದೆ ಲಗ್ನ ಮಾಡಿದ್ದಕ್ಕೆ ರಿಣ ತೀರಿಸುತ್ತೀರಿ—ಈ ರೀತಿ ಧೂರ್ತ್" ಎಂದು ಸಾವಿತ್ರಮ್ಮ ಬಿರುಸಾಗಿ ನುಡಿದಳು.

ಹೊರಗಡೆ ಕುಳಿತುಕೊಂಡಿದ್ದ ಹೇಮಗಿರಿ ಏನೇನೋ ಬಾಯಿಗೆ ಬಂದ ಹಾಗೆ ಬೈಯುತ್ತಿದ್ದ. ಸಾವಿತ್ರಮ್ಮನಿಗೆ ಸಿಟ್ಟು ಮತ್ತೆ ಭುಗಿಲೆಂದು ಎದ್ದಿತು.

"ಬಾಯಿ ಹಿಡಿದು ಮಾತಾಡೋ, ಅವರ ವಂಶದ ಸುದ್ದಿ ನಿನಗ್ಯಾಕೆ?"

ಉಮಾಪತಿಯೂ ಕೂಡ ಆ ವೇಳೆಗೆ ಬಂದು ಕಳ್ಳನಂತೆ ಮಾತು

ಗಳನ್ನು ಕೇಳುತ್ತ ನಿಂತಿದ್ದ.

"ಈಗ ಇಷ್ಟೇ ಸಾಕು, ಸುಮ್ಮನಿರು ಹೇಮಗಿರಿ. ಮುಂದೆ ಮುಂದೆ ಮಾತನಾಡುತ್ತೀಯೆ" ಎಂದ ಉಮಾಪತಿ.

ಸಿದ್ದಮ್ಮನೂ ಮಧ್ಯೆ ಭಾಗವಹಿಸಿ ಆ ಮಾತನ್ನು ತಣ್ಣಗೆ ಮಾಡಿದಳು. ಮಾಲಿನಿಯ ಅತ್ತೆ ಉಪ್ಪು ತರಲು ಮನೆಗೆ ಹೋದಳು. ಪಕ್ಕದ ಮುರುಕು ಮನೆಯಲ್ಲಿ ಅಣ್ಣತಮ್ಮಂದಿರಿಬ್ಬರೂ ಹರಟೆ ಹೊಡೆಯುತ್ತಿದ್ದರು.

"ತಾಯಿ, ನಿನಗೆ ಏನಾದರೂ ಕಷ್ಟ ಇದ್ದರೆ ಹೇಳು. ಯಾರಾದರೂ ಮನೆಯೊಳಗೆ ಕಾಟ ಕೊಡುತ್ತಾರೆಯೆ? ಹಾಗಿದ್ದರೆ ಹೇಳು. ನಾನೆಲ್ಲಾ ಹೇಳುತ್ತೇನೆ" ಎಂದು ಗಂಗಮ್ಮ ವಿಷಾದದಿಂದ ನುಡಿದಳು.

ಉಮಾಪತಿ ಮಾಲಿನಿಯ ಬಾಯಿಗೆ ಸರಿಯಾದ ಬೇಡಿ ಹಾಕಿದ್ದ. ಮೂಗುದಾರದ ಹುರಿ ಸರಿಯಾಗಿ ಬಿಗಿಯುತ್ತಿತ್ತು. ಒಂದು ಸಮಯ ತಮ್ಮ ವಿರುದ್ಧ ಮಾತಾಡಿದರೆ "ವಿಷದ ಇಂಜೆಕ್ಷನ್ ಕೊಡಿಸುವೆ" ಎಂದು ಹೆದರಿಸಿದ್ದ.

"ಇಲ್ಲ ಗಂಗಕ್ಕ, ಹಾಗೇನೂ ಇಲ್ಲ" ಎಂದಳು.

"ಇರದೇನು ಮಾಡುತ್ತದೆ. ಹೆದರಿ ನಡಗ್ತಾಳೆ ಎಲ್ಲಿಯಾದರೂ...." ಎಂದು ಗಟ್ಟಿಯಾಗಿ ಹೇಳಿದಳು ಸಾವಿತ್ರಮ್ಮ.

"ಮೆಲ್ಲಗೆ ಮಾತಾಡೆ, ಬಂದಾರು" ಎಂದಳು ಗಂಗಮ್ಮ.

"ಇರಲಿ ಬಿಡೆ. ಅವರದೇನು ಹಂಗಣೆ. ನನ್ನ ತಮ್ಮನಿಗೆ ಅವನ ವಂಶಕ್ಕೆ ಹೇಗೆ ಬೇಕೊ ಹಾಗೇನೆ ಮಾತಾಡ್ತಾನಲ್ಲ ಆ ನನ್ನ ಸವತಿ ಮಗ"

"ಹಾಗೇನು ಇಲ್ಲ ಗಂಗಕ್ಕ, ನನ್ನ ನಸೀಬು ಉತ್ತಮವಿಲ್ಲ. ದೇವರು ಇಟ್ಟದ್ದಾಗುತ್ತದೆ. ಏನೋ....ನಾನು ಹಿಂದಿನ ಜನ್ಮದಲ್ಲಿ ಯಾರಿಗೆ ಉಸೂರೆನ್ನಿಸಿದ್ದೆನೊ! ಪ್ರಪಂಚ ಬಹಳ ವಿಚಿತ್ರ. ಆ ದೇವರು ನಿಷ್ಕರುಣಿ...." ಎಂದು ಆಳವಾದ ನಿಟ್ಟುಸಿರೆಳೆದಳು ಮಾಲಿನಿ.

ಇವರಿಗೆ ಮಾಲಿನಿಯ ಜೀವನದ ಬಗ್ಗೆ ಸೂಕ್ಷ್ಮವಾದ ವಿಚಾರಗಳು ತಿಳಿದರೂ, ಕೂಲಂಕಷವಾಗಿ ಯಾವುದೂ ತಿಳಿಯಲಿಲ್ಲ. ಅವಳ ಜೀವನ ಒಂದುದುರಂತ ಜೀವನ ಎಂದು ಇಬ್ಬರಿಗೂ ಅರ್ಥವಾಯಿತು. ಊಟ ಮಾಡುತ್ತಿದ್ದಾಗಲೂ ಕುಳಿತಿರುವಾಗಲೂ ಹರಿಹರದ ನೆಂಟರ ಬಗ್ಗೆ

ಟೀಕೆಗಳೂ ಬೈಗಳೂ ಸುರಿಮಳೆಯಾಗುತ್ತಿದ್ದವು. ಒಂದು ದಿನ ಒಂದು ವರ್ಷ ಕಳೆದ ಹಾಗಾಯಿತು. ಮಾರನೆಯ ದಿನ ಗಂಗಮ್ಮ-ಸಾವಿತ್ರಮ್ಮ ಕಾಲಿಗೆ ಬುದ್ಧಿ ಹೇಳಬೇಕಾಯಿತು.

ಗಂಗಮ್ಮನಿಂದ ಮಗಳ ವಿಷಮ ಪರಿಸ್ಥಿತಿಯನ್ನು ಕೇಳಿದ ಶಿವಣ್ಣಯ್ಯನವರಿಗೆ ಎದೆ ಜರ್ಝರಿತವಾಯಿತು. ತಾವಿನ್ನು ಮಗಳನ್ನು ಒಂದು ಬಾರಿಯಾದರೂ ಕಾಣಲಸಾಧ್ಯವೆಂದು ತಿಳಿದುಕೊಂಡು ಅವರು ತುಂಬಾ ವೇದನೆಪಡುವರು. ಮಲ್ಲಿಕಾರ್ಜುನ ಪಾಟೀಲರು ಇದನ್ನೆಲ್ಲ ಸರಿಮಾಡುತ್ತೇವೆಂದು ಭರವಸೆಕೊಟ್ಟಿದ್ದುದು ನೆನಪಿಗೆ ಬಂದು, ಅವರಿಗೆ ಕೊಂಚ ಸಮಾಧಾನವಾಗುತ್ತಿತ್ತು. ಆದರೂ ಅವರಿಗೆ ಸಮಾಧಾನವಿಲ್ಲ, ಶಾಂತಿಯಿಲ್ಲ. ಯಾವಾಗ ನೋಡಿದರೂ ಏನಾದರೊಂದು ಯೋಚನೆಯಲ್ಲಿರುತ್ತಿದ್ದರು. ಹೊಟ್ಟೆಯಲ್ಲಿ ಬೆಂಕಿಯ ಕೆಂಡಗಳು ಬಿದ್ದಿರುವಂತೆ ಅನ್ನಿಸುತ್ತಿತ್ತು ಅವರಿಗೆ. ಹೀಗೆ ಮಗಳ ವಿಚಾರವೊಂದೇ ಪೀಡಿಸುತ್ತಿದ್ದರೆ ಅಷ್ಟು ನೊಂದುಕೊಳ್ಳಬೇಕಾಗಿರಲಿಲ್ಲ. ಅವರ ಆರ್ಥಿಕ ಪರಿಸ್ಥಿತಿಯೂ ಹದಗೆಟ್ಟಿತ್ತು. ಅಲ್ಲದೆ ಚಿಕ್ಕ ಮಗನೊಬ್ಬ ಬಂದಿಖಾನೆಯಲ್ಲಿ ಸಿಕ್ಕಿ ವಿಲಿವಿಲಿ ಒದ್ದಾಡುತ್ತಿದ್ದ. ನಿರಪರಾಧಿಗೆ ಕಠಿನ ಶಿಕ್ಷೆಯಾಗಿತ್ತು—ಇಂತಹ ಅನಂತ ಯೋಚನೆಗಳು ಗಂಟುಬಿದ್ದು ಅವರ ದೇಹವನ್ನು ಕೊರೆಯುತ್ತಿದ್ದವು. ಇದರಿಂದ ಯಾವಾಗ ಬಿಡುಗಡೆ? ..ಯಾವಾಗಲೂ ಇಲ್ಲ....ತಮ್ಮ ಅಳಿಯ ಒಳ್ಳೆಯ ಮಾರ್ಗಕ್ಕೆ ಬಂದರೆ ಮಾತ್ರ ಸಾಧ್ಯ. ಈ ವೇಳೆಗೆ ಅವರಿಗೆ ಜೀವನ ಸಾಕಾಗಿತ್ತು. ಇದೊಂದು ಸಂತೆ. ಜೀವನ ಶೂನ್ಯ. ಇವೆಲ್ಲಾ ನಾಲ್ಕು ದಿನಗಳ ಥಳಕು. ಯಾವ ಪುರುಷಾರ್ಥಕ್ಕಾಗಿಯೋ ಈ ಸಂಗ್ರಾಮ ನಡೆಯುತ್ತಿದೆ. ಇದರಿಂದ ಆದಷ್ಟು ಬೇಗ ಹೋಗಬೇಕೆಂಬ ವಾದ ಸರಣಿಯೂ ಆಗಾಗ ಅವರಲ್ಲಿ ಉತ್ಪನ್ನವಾಗುವುದು.

ಇನ್ನು ಹದಿನೈದು ದಿನಗಳಲ್ಲಿ ರೇಣುಕಪ್ರಸಾದ ಜೈಲಿನಿಂದ ಬಿಡುಗಡೆಯಾಗುವೆನೆಂದು ಬರೆದಿದ್ದ. ಅವನ ಬರವನ್ನು ಮನೆಯವರೆಲ್ಲ ಕಾಯುತ್ತಿದ್ದರು. ಕರು ಕಳೆದುಕೊಂಡ ಹಸುವಿನಂತಾಗಿತ್ತು ತಂದೆಯ ಸ್ಥಿತಿ. ಯಾವಾಗ ನೋಡಿದರೂ ಮಗನ ಚಿತ್ರ ನೆನಪಿನಲ್ಲಿ ಬಂದು ಹೃದಯವನ್ನು ಹಿಂಡಿ ಹಿಪ್ಪಡಿ ಮಾಡುತ್ತಿತ್ತು.

ಮಗ ಜೈಲಿನಿಂದ ಬರುವ ದಿನವೂ ಬಂತು. ಸೋಮವಾರ ಸಾಯಂ

ಕಾಲ ಪ್ಯಾಸಿಂಜರ್ ಗಾಡಿಗೆ ಬರುತ್ತೇನೆಂದು ರೇಣುಕ ಕಾಗದ ಬರೆದಿದ್ದ.

ರಾತ್ರಿ ಅವನನ್ನು ಕರೆದುಕೊಂಡು ಬರುವುದಕ್ಕಾಗಿ ಗುರುಮೂರ್ತಿ ರೈಲ್ವೆಸ್ಟೇಷನ್ನಿಗೆ ಹೋಗಿದ್ದ. ದಾರಿಯಲ್ಲಿ ಅಣ್ಣತಮ್ಮಂದಿರು ಹೆಚ್ಚಿಗೆ ಏನೂ ಮಾತನಾಡಲಿಲ್ಲ. ಮನೆಯ ಬಾಗಿಲಿನಲ್ಲಿ ಕಾಲಿಡುತ್ತಲೇ ಶಿವಣ್ಣಯ್ಯ 'ರೇಣುಕಾ' ಎಂದು ಮಗನನ್ನು ಆಲಿಂಗನ ಮಾಡಿದರು. ಗಂಗಮ್ಮ ಬಿಕ್ಕಿ ಬಿಕ್ಕಿ ಅಳಲಿಕ್ಕೆ ಪ್ರಾರಂಭಿಸಿದಳು. "ಯಾಕೆ? ಮನೆಗೆ ಬಂದರೂ ಯಾಕೆ?" ಎಂದು ಶಿವಣ್ಣಯ್ಯ ಆಕೆಯನ್ನು ಸಮಾಧಾನಪಡಿಸಿದರು

ರೇಣುಕಪ್ರಸಾದ ಬಂಧನ ವಿಮುಕ್ತನಾದಂದಿನಿಂದ ನಿರುದ್ಯೋಗಿ ಯಾಗಿದ್ದ. ವಿಶ್ವನಾಥ, ಮಾಧು ಆಗಾಗ ಅವನನ್ನು ಕಂಡು ಮಾತಾಡು ತ್ತಿದ್ದರು. ತಂಗಿಯ ಯೋಚನೆ ಬೇರೆ ಈಗ ಅವನಿಗೆ ಗಂಟುಬಿದ್ದಿತ್ತು. ಒಮ್ಮೆಯಾದರೂ ಈ ಜೀವನದಲ್ಲಿ ದೂರದಿಂದಲಾದರೂ ಆಕೆಯನ್ನು ನೋಡಬೇಕೆಂಬ ಹಂಬಲ ಅವನಲ್ಲಿ ತುಂಬ ಒತ್ತರಿಸಿಕೊಂಡು ಬರುತ್ತಿತ್ತು.

ಒಂದು ದಿನ ಹರಿಹರಕ್ಕೆ ಉಮಾಪತಿ ಬಂದ ವಿಷಯ ರೇಣುಕನಿಗೆ ತಿಳಿಯಿತು. ಮನೆಯವರೂ ಹೋಗಿ ಅವನನ್ನು ಕಂಡು ಮಾತನಾಡಿಸ ಲಿಕ್ಕೆ ರೇಣುಕನಿಗೆ ಹೇಳಿದರು. ವಿಶ್ವನಾಥ, ಮಾಧವರಾಯರೊಂದಿಗೆ ರೇಣುಕ ಉಮಾಪತಿಯನ್ನು ಹುಡುಕಲು ಹೊರಟ. ಊರ ಹೊರಗೆ ಶಿವಕುಮಾರರೊಂದಿಗೆ ಮಾತನಾಡುತ್ತ ಉಮಾಪತಿ ನಿಂತಿದ್ದ ಬೀಸ ನೂರು ಶಿವಶಂಕರ ಪಾಟೀಲರ ಮಗ ಶಿವಕುಮಾರ ಮೈಸೂರು ವಿಶ್ವ ವಿದ್ಯಾನಿಲಯದ ಪದವೀಧರ; ಉತ್ತಮ ವ್ಯಾಖ್ಯಾನಕಾರ ಹಾಗೂ ನಾಟಕಕಾರ. ಶಿವಣ್ಣಯ್ಯನವರ ಸಂಬಂಧದ ವಿಷಯವಾಗಿ ಅವರು ವಿವೇಚಿಸುತ್ತ ನಿಂತಿದ್ದರು. ರೇಣುಕ ಹೋಗಿ ಮಾವನ ಕೈ ಹಿಡಿದು, ಹೇಳಿದ "ಮನೆಗೆ ಹೋಗೋಣ ಬನ್ನಿ. ಮಾವ. ಇಲ್ಲಿ ಯಾಕೆ ನಿಂತು ಕೊಂಡಿರಿ" "ಹೂ ಹೂ ಇರಲಿ. ನಿಧಾನ ...ಬರುತ್ತಾರೆ ಅವಸರಮಾಡ ಬೇಡಿ" ಶಿವಕುಮಾರ ಹೇಳಿದರು.

ವಿಶ್ವನಾಥ ಗಂಗಮ್ಮನನ್ನು ಕರೆಯಲಿಕ್ಕೆ ಮನೆಗೆ ಹೋಗಿದ್ದ. ರೇಣುಕಪ್ರಸಾದನೊಂದಿಗೆ ಮಾಧವರಾವ್ ಒಬ್ಬನೇ ಇದ್ದ. ಉಮಾಪತಿ 'ಮಿತ್ರ ಸಮಾಜಕ್ಕೆ' ಹೊರಟ. ಅವನನ್ನು ಅವಶ್ಯ ಕರೆದುಕೊಂಡು ಹೋಗಬೇಕಾದ್ದರಿಂದ ರೇಣುಕ ಹಿಂಬಾಲಿಸಿದ. ದಾರಿಯಲ್ಲಿ ಹೋಟೆಲ್

ನಲ್ಲಿ ಉಮಾಪತಿ ತಿಂಡಿಗೆ ಹೇಳಿದ. ಕಾಫಿ ಕುಡಿಯುವವರೆವಿಗೂ ಶಿವಕುಮಾರರು ಏನನ್ನೋ ಹರಟೆ ಹೊಡೆಯುತ್ತಿದ್ದರು ಉಮಾಪತಿ ಹಣಕೊಟ್ಟು ಬೀಡಾ ಕೊಂಡು ಶಿವಕುಮಾರರ ಕೈಯಲ್ಲಿ ಕೊಟ್ಟನು. ಶಿವಕುಮಾರರು ರೇಣುಕನಿಗೊಂದು ಕೊಟ್ಟರು. ಅವನಿಗೆ ಸ್ವಯಂ ಬೀಡಾ ಕೊಡುವುದೂ ತನ್ನ ಮಾನಕ್ಕೆ ಚ್ಯುತಿ ಎಂದಿಟ್ಟುಕೊಂಡಿದ್ದ. ನಾಲ್ವರೂ ದಲ್ಲಾಳಿ ಅಂಗಡಿಯೊಂದರಲ್ಲಿ ಹೋಗಿ ಕುಳಿತುಕೊಂಡರು. ಶಿವಕುಮಾರರು 'ಬೇಗ ಬರುವೆ' ಎಂದು ಎಲ್ಲಿಗೋ ಹೊರಟು ಹೋದರು. ಈಗ ಮೂವರು ಮಂದಿ ಮಾತ್ರ ಇದ್ದರು. ಮೆಲ್ಲಗೆ ರೇಣುಕಪ್ರಸಾದ ಮಾತು ಬೆಳಸಿದ.

"ಬನ್ನಿ ಮಾವ, ಮನೆಗೆ ಹೋಗೋಣ."

"ಯಾಕೆ ಬರಬೇಕು? ನಮಗೂ ನಿಮಗೂ ಏನು ಸಂಬಂಧ ಉಳಿದಿದೆ" ಎಂದು ಗೊಗ್ಗರು ಧ್ವನಿಯಲ್ಲಿ ಹೇಳಿದ ಉಮಾಪತಿ.

"ತಂಗಿ ಕೊಟ್ಟರೋದೆ ಸಂಬಂಧಕ್ಕೆ ಸಜೀವ ಸಾಕ್ಷಿ. ಇವಕ್ಕಿಂತ ಬೇರೆ ಸಾಕ್ಷಿ ಬೇಕೆ?"

"ನೋಡು, ಶಿವಕುಮಾರರು ಇದ್ದರು. ಇಲ್ಲದಿದ್ದರೆ ನಿನ್ನ ಜೀವ ಉಳಿಯುತ್ತಿದ್ದಿಲ್ಲ" ಎಂದ ಉಮಾಪತಿ. ರೇಣುಕನ ಮನಸ್ಸು ಕೆರಳಿತು. ಜೊತೆಗೆ ದುಃಖವೂ ಆಯಿತು ಉದ್ವಿಗ್ನನಾಗಿ ಹೇಳಿದ "ಏನಾಗುತ್ತಿತ್ತು? ಇಬ್ಬರೂ ಜಗಳ ಕಾದು ಯಾರಾದರೂ ಒಬ್ಬರು ಸಾಯುತ್ತಿದ್ದೆವು; ಅಷ್ಟೆ. ಅದಕ್ಕಿಂತ ಹೆಚ್ಚು ಬೇರೆ ಆಗುತ್ತಿದ್ದಿಲ್ಲ."

"ಹೂ ಇರಲಿ. ನೀನು ಜೈಲಿನಿಂದ ಕಾಗದ ಯಾಕೆ ಬರೆದೆ?"

"ನೀವು ನಾನು ಕವನ ಬರೆದಿದ್ದಕ್ಕೆ ಹೊಟ್ಟೆಕಿಚ್ಚು ಪಟ್ಟುಕೊಂಡು ಏನೇನೋ ಹಾಳುತರಳೆ ಬರೆದಿದ್ದಿರಲ್ಲಾ, ಅದಕ್ಕೆ...." ಎಂದನು. ಉಮಾಪತಿಯ ಬಾಯಿ ಕಟ್ಟಿತು. ರೇಣುಕ ಉಮಾಪತಿಯ ಪ್ರಶ್ನೆಗೆ ಸರಿಯಾದ ಉತ್ತರ ಕೊಡುತ್ತಿದ್ದ. ಉಮಾಪತಿ ಕುರಿ—ತೋಳದ ಜಗಳ ತೆಗೆದ.

"ಆ ಕಳ್ಳ ಆಕೇನ ತನ್ನ ಹೆಂಡತಿ ಮನೆಗೆ ದಾವಣಗೆರೆಗೆ ಯಾಕೆ ಕರೆದೊಯ್ದಿದ್ದ"

"ನೀನು, ಮಾಲಿನಿ ಎಷ್ಟೋ ಸಾರಿ ಅದೇ ನೆಂಟರ ಮನೆಗೆ

ಹೋಗಿದ್ದಿರಲ್ಲ. ಆಗ ಯಾವ ತೆರಹೆಯ ಹೇವರಿಕೆ ಇರಲಿಲ್ಲ. ನಿನ್ನ ಕೇಳದೆ ಒಳ್ಳೆಯ ಮನೆತನದವರು ಅದರಲ್ಲೂ ಸಂಬಂಧಿಕರಾದವರ ಮನೆಗೆ ಕರೆದುಕೊಂಡು ಹೋಗಿದ್ದು ಮಹಾ ಪ್ರಮಾದವಾಯಿತೇನು?

"ನಾವು ಕೆಟ್ಟವರು. ಬಂದರೆ ನಿಮ್ಮಸೆ ಹಾಳಾದೀತು."

"ಹಾಳಾಗುವಂತಿದ್ದರೆ ನಾನೇಕೆ ದೈನ್ಯದಿಂದ ಬೇಡುತ್ತಿದ್ದೆ. ಬಾಪ್ಪ ..." ಅನ್ನುತ್ತ ರೇಣುಕ ಉಮಾಪತಿಯ ಕೈಯಲ್ಲಿನ ಚೀಲವನ್ನು ಕಿತ್ತಿಕೊಳ್ಳಲು ಹೋದ.

"ಏ! ಅದನ್ನು ಮಾತ್ರ ಮುಟ್ಟಬೇಡ. ನಾನೀಗ ಏನು ಮಾಡಿದರೂ ಬರುವುದಿಲ್ಲ," ಎನ್ನುತ್ತಾ ಉಮಾಪತಿಗೆ ಶಿವಕುಮಾರರೊಂದಿಗೆ ಹೊರಟ. ದಾರಿಯಲ್ಲಿ ಯಾರೂ ಮಾತನಾಡಲಿಲ್ಲ. ಮಾಧವರಾಯನಿಗೆ ಉಮಾಪತಿಯ ವ್ಯಕ್ತಿತ್ವ ಯಾವ ಮಟ್ಟದಲ್ಲಿದೆಯೆಂದು ಗೊತ್ತಾಯಿತು. ಸ್ಟೇಷನ್ ಹತ್ತಿರ ವಿಶ್ವನಾಥ ಗಂಗವ್ವನನ್ನು ಕರೆದುಕೊಂಡು ಬಂದಿದ್ದನು.

"ಏನು ಉಮಣ್ಣಾ, ಬಡವರ ಮೇಲೆ ಯಾಕಿಷ್ಟು ಸಿಟ್ಟು? ಊರಿಗೆ ಅವೊತ್ತು ಬಂದಾಗಲೂ ಬರಲಿಲ್ಲ. ಈಗಲಾಗದರೂ ಬಾರಪ್ಪ...."

"ಅದೊಂದು ಬಿಟ್ಟು ಏನಾದರೂ ಹೇಳು. ಮನಸ್ಸು ಕೆಟ್ಟು ಬಿಟ್ಟಿದೆ. ಗಂಗಕ್ಕ ನೀನು ಬಾ; ಬೇಡಾಂದರೆ-ಕೇಳು" ಎಂದು ಹೊರಡಲನುವಾದ.

"ನಿಂತಿಕೋ ಮಹರಾಯ ...ಬಾರಪ್ಪಾ ಹೋಗೋಣ" ಎಂದು ಅಳುತ್ತ ಹೇಳಿದಳು.

"ನಾನು ಆಗಲಿಂದ ಕರೆದು ಸಾಕಾಯಿತು. ಬರವೊಲ್ಲರು" ಎಂದ ರೇಣುಕ.

"ಈಗ ಇಷ್ಟಕ್ಕಿರಲಿ, ಮುಂದೆ ನೋಡೋಣಂತೆ. ಮತ್ತೆ ಬರುತ್ತಾರೆ. ಇಂದು ಬ್ಯಾಡಿಗಿಗೆ ಅವಶ್ಯ ಕೆಲಸದಮೇಲೆ ಹೋಗುತ್ತಲಿದ್ದಾರೆ. ಇನ್ನೊಮ್ಮೆ ಬಂದಾಗ ನಾನು ಹೇಳಿ ಬರಲಿಕ್ಕೆ ಅನುವು ಮಾಡುತ್ತೇನೆ" ಎಂದು ಶಿವಕುಮಾರರು ಹೇಳಿದರು.

ಉಮಾಪತಿ ಹೊರಟುಹೋದ. ಪ್ಯಾಸಿಂಜರ್ ಬಂಡಿಯಿಂದ ಜನಗಳು ಇಳಿದು ಹೊರಬರುತ್ತಿದ್ದರು. ಆ ಗುಂಪನ್ನು ನೋಡುತ ನಿಂತಿದ್ದ ಯಾರೋ ಹೆಣ್ಣು ಮಗಳು ಬಂದಳು. ರೇಣುಕಪ್ರಸಾದ ಆಕ್ತೆ

ಯನ್ನು ನೋಡುತ್ತ ಕಣ್ಣೀರು ಸುರಿಸಿದ. ಅವಳ ರೂಪ ತನ್ನ ತಂಗಿಯ ರೂಪವನ್ನು ಹೊರುತ್ತಿತ್ತು. ಅದೇ ಛಾಯೆ, ಅದೇ ನಿಲವು, ಅದೇ ಬಣ್ಣ—ಎಲ್ಲವೂ ಅವಳನ್ನೇ ಅಣಕಿಸುತ್ತಿದ್ದವು. ಅದೆಷ್ಟು ಹೊತ್ತು ಯೋಚನೆಯಲ್ಲಿ ಮಗ್ನನಾಗಿದ್ದನೊ ತಿಳಿಯಲಿಲ್ಲ. ಗೆಳೆಯರು ಹೋಗ ಲಿಕ್ಕೆ ಬೆನ್ನುಮೇಲೆ ಹೊಡೆದೆಚ್ಚರಿಸಿದರು ತೀರಲಾರದ, ಹೋಗಲಾರದ ಯೋಚನೆಮಾಡುತ್ತ ಮೆಲ್ಲಮೆಲ್ಲಗೆ ಅವನು ಹೆಜ್ಜೆಗಳನ್ನಿಡ ಹತ್ತಿದ.

# ೧೫

ಮುದುಕಿ ರಾಧಮ್ಮನಿಗೆ ದಿನದಿನಕ್ಕೂ ಕೆಮ್ಮು ಹೆಚ್ಚಾಗುತ್ತಿತ್ತು. ಈಗ ಆಕೆ ರೈಲಿನಲ್ಲಿ ಭಿಕ್ಷೆಗೆ ತಿರುಗಾಡದೆ ಇರುತ್ತಿದ್ದುದರಿಂದ ಆಯಾಸ ಹೆಚ್ಚಿಗೆ ಆಗುತ್ತಿರಲಿಲ್ಲ. ಮನೆಗೆ ಸಾಕಷ್ಟು ಖರ್ಚುಮಾಡಿ ಮಾಧು ದುಡ್ಡು ಉಳಿಸುತ್ತಿದ್ದ. ಅವನ ಲಗ್ನಕ್ಕೆಂದು ಇನ್ನೂ ಹೆಚ್ಚಾಗಿ ಮಿಗಿಸಲು ಮುದುಕಿ ಮೊಮ್ಮಗನಿಗೆ ಹೇಳುತ್ತಿದ್ದಳು.

"ಅಜ್ಜಿ ! ಯಾರು ದುಡಿದು ಎಂಥ ಅರಮನೆ ಕಟ್ಟಿಸಿದಾರೆ? ನಾಲ್ಕು ದಿನ ಇರೋವರೆವಿಗೂ ಸುಖವಾಗಿದ್ದು ಹೋಗೋಣಂತೆ" ಎಂದು ಅಜ್ಜಿಗೆ ಮಾಧು ಉತ್ತರ ಕೊಡುತ್ತಿದ್ದ.

"ನಿನ್ನ ಇಂಥ ಬುದ್ಧಿವಂತಿಕೆ ಬೇಡ ಮಗು....ಅಯ್ಯೋ ! ಢ್ಹಕ್ ಢ್ಹಕ್....ಏನು ಹಾಳು ಕೆಮ್ಮು ಇದು... ನನ್ನ ಜೀವ ತಿನ್ನಲಿಕ್ಕೆ ಬಂದಿದೆ."

"ಅಂದಹಾಗೆ ಮರೆತಿದ್ದೆ. ಇಕೋ ಪಂಡಿತರಿಂದ ಗುಳಿಗೆ ತಂದಿದೇನೆ. ನಾಗುಂದಿಯ ಮೇಲೆ ಇದೆ. ತೆಗೆದುಕೊಳ್ಳಜ್ಜಿ."

"ಅಪ್ಪಾ, ನಾನಿದರಲ್ಲೇ ಒಂದು ದಿನ ಹೋಗ್ತೇನೆ. ಯಾವ ಮದ್ದೂ ಬೇಡ. ಏನೂ ಬೇಡ ಹೋಗು....ಯಾರೋ ಕರೀತಿದಾರೆ ಹೊರಗಡೆ"

"ರೇಣುಕ ! ಬಾಪ್ಪ ಒಳಗೆ" ಎಂದ ಮಾಧು.

"ಇವತ್ತೆಲ್ಲಾ ತಿರುತಿರುಗಿ ಸಾಕಾಯಿತು. ರೇಂಜ್ ಆಫೀಸಿಗೂ ಹೋಗಿದ್ದೆ. ನಾಡಿದ್ದು ಬಾ ಎಂತ ಹೇಳಿದಾರೆ. ಎಂಥ ಕೆಲಸವಾದರೂ ಸಿಕ್ಕಲಿ, ಮರ್ಯಾದೆಯಿಂದ ಮಾಡಿಕೊಂಡು ಹೋಗುವುದಿರಬೇಕು. ಅಲ್ಲವೆ ?"

"ರೇಣುಕ! ಎಷ್ಟು ಸಣ್ಣಕಲಾಗಿದೀಯೆ ನೀನು" ಎಂದು ಮುದುಕಿ ಕರುಣಾರ್ದ್ರ ದೃಷ್ಟಿಯಿಂದ ಅವನಲ್ಲಿ ಹೇಳಿದಳು.

"ಮಾಧು, ಅಂದಹಾಗೆ ಇವತ್ತು ಆ ದುಷ್ಟ ದೊಡ್ಡಪ್ಪ ಎದುರಿಗೆ ಬರುತ್ತಿದ್ದ."

"ಹೋಗಲಿ ಬಿಡು, ರೇಣುಕ. ಅವರ ಪಾಪ ಅವರ ಹಿಂದೆ ಇರುತ್ತದೆ. ದೇವರು ಇಂಥ ಜನಗಳಿಗೆ ಸರಿಯಾದ ಶಿಕ್ಷೆ ಇಟ್ಟಿರುತ್ತಾನೆ"

"ನಿಜ. ಆದರೆ ಯಾವಾಗ ಬಂದೆ ಎಂತಲಾದರೂ ಎರಡು ಮಾತು ಸಹಾನುಭೂತಿ ಪರವಾಗಿ ಮಾತನಾಡಲಿಕ್ಕೇನು ಗಂಟು ಹೋಗೋದು. ಧೂತ್ ಈ ಶ್ರೀಮಂತರೆಲ್ಲ ಹೀಗೆ?"

"ಹಾಗೆನ್ನಬೇಡ. ಅದೊಂದು ಮಾತನ್ನು ಕೇಳಿದರೆ ನನಗೆ ಸರಿ ಬೀಳಲ್ಲ. ಶ್ರೀಮಂತರಲ್ಲಿ ಎಷ್ಟು ಜನ ಕರುಣಾಶಾಲಿಗಳು, ಆಚಾರವಂತರು ವಿಶಾಲ ಭಾವನೆಯುಳ್ಳವರಿಲ್ಲ? ಏನಾಡುತ್ತೀ ರೇಣು?"

"ಹೂ ಇದಾರೆ. ನಿಜ, ಬಹು ಕಡಿಮೆ"

"ರೇಣುಕ, ಮಾಲಿನಿ ಕರಕೊಂಡು ಬಂದಿರಾ?"

"ಇಲ್ಲ. ಅವನ ವಂಶ ಹಾಳಾಗಲಿ. ನಮ್ಮ ಮಾಲಿನಿ ಯಾವ ಸ್ಥಿತಿಗೆ ಬಂದಿದಾಳೋ ಏನೋ. ಎರಡು ವರ್ಷವಾಯಿತು, ಧೂತ್ ಅವರ ವಂಶಕ್ಕೆ ಧಿಕ್ಕಾರ!...."

"ಹಾಗೆನ್ನಬಾರದಮ್ಮ. ನಿನ್ನ ಖಾಸಾ ತಂಗಿ ವಂಶಕ್ಕೆ ನಿಂದನೆ ಮಾಡಿದಂತಾಗುತ್ತೆ.

"ಹೂ, ನಡೆಯೋ ಮಾಧು. ಹೊರಗೆ ತಿರುಗಾಡಲಿಕ್ಕೆ ಹೋಗೋಣ. ಬಲು ಬೇಸರ ಕಣೋ"

ಇಬ್ಬರೂ ನದಿಯಾಚೆಗೆ ಹೊರಟರು. ಈ ದಿನ ವಿಶ್ವನಾಥ, ಪ್ರೇಮಚಂದ್ರ ಇಬ್ಬರೂ ಜೊತೆಗೆ ಇರಲಿಲ್ಲ. ಜೀವಗೆಳೆಯರಿಬ್ಬರೂ ಕೇಕೆಹಾಕುತ್ತಾ ಆನಂದಪರವಶರಾಗಿ ಮಾತಾಡುತ್ತಿದ್ದರು.

"ಇನ್ನು ಯಾವುದಾದರೂ ಕೆಲಸಕ್ಕೆ ಆದಷ್ಟು ಬೇಗ ಪ್ರಯತ್ನ ಮಾಡು. ಪರಿಸ್ಥಿತಿ ನಿಮ್ಮನೆಯದು ದಿನದಿನಕ್ಕೂ ಹದಗೆಡುತ್ತಾ ಇದೆ."

"ಜೈಲಿಗೆ ಹೋಗಿ ಬಂದಾಗಿನಿಂದ ಜೀವನದಲ್ಲಿ ನಿರಾಶೆ ಹುಟ್ಟಿದೆ ."

"ರೇಣುಕ, ನಿನಗೆ ತಂದೆತಾಯಿಗಳಾದರೂ ಇದಾರೆ. ನನಗೆ ತಂದೆ-ತಾಯಿ ಬಂಧು ಬಳಗ ಯಾರೂ ಇಲ್ಲ. ಹೀಗೇ ಬಂದು, ಹೀಗೇನೆ ಹೋಗಬೇಕಾಯಿತಲ್ಲ ..ಈ ಕೆಟ್ಟ ಜೀವ."

"ನಮ್ಮಿಬ್ಬರ ಸಮಸ್ಯೆಗಳೇ ಇಷ್ಟಿರಬೇಕಾದರೆ, ಪ್ರಪಂಚದಲ್ಲಿ ಇಂಥ ಜನಗಳು ಇನ್ನೂ ಎಷ್ಟಿದಾರೋ" ಎಂದು ನಿಧಾನವಾಗಿ ಹರಿಯುವ ಹೊಳೆಯನ್ನು ನೋಡುತ್ತ ಹೇಳಿದ ರೇಣುಕ.

"ಇನ್ನೊಬ್ಬರ ವಿಚಾರ ಯಾಕೆ? ನಮ್ಮ ವಿಶ್ವನಾಥನ ಜೀವನವನು

ಉದಾಹರಣೆಗೆ ತೊಗೋ"

"ನಿಜ. ಅವನ ಜೀವನ ಒಂದು ದುರಂತ ಜೀವನ ಮಾಧು....ಮಾಧು ಅವನ ಜೀವನದ ಕೊನೆ ಏಕೋ ಸರಿಯಾಗಿ ಆಗಲಾರದೆಂದೆನ್ನಿಸುತ್ತದೆ. ನೀನು ಏನಾದರೂ ತಿಳಿದುಕೋ, ನನಗೆ ಹಾಗೆನ್ನಿಸುತ್ತದೆ."

"ಅವನು ಏನು ಮನಸ್ಸಿಗೆ ಹಚ್ಚಿಕೊಂಡಿದ್ದಾನೆ ಎಂಬುದನ್ನು ಪ್ರೇಮಚಂದ್ರರು ಪತ್ತೆ ಹಚ್ಚಿದರು. ಆದರೆ ನಿವಾರಣೆ ಹೇಗೆ ಮಾಡ ಬೇಕೆಂಬುದು ಅವರಿಗೆ ತಿಳಿಯದಾಗಿದೆ "

ಮಳೆಯ ಮೋಡವಾಗಿತ್ತು. ಬಿಸಿಲೂ ಮೆಲ್ಲನೆ ಹೊರಟು ಹೋಯಿತು. ಬಾನಿನಲ್ಲಿ ಆಗಾಗ ಗುಡುಗಿನ ಸದ್ದು ಕೇಳಿಬರುತ್ತಿತ್ತು. ಮಳೆ ಬರುವ ಹಾಗಾಗಿದ್ದಿತು. ಗೂಡ್ಸ್‌ಗಾಡಿ ರೈಲ್ವೆ ಸೇತುವೆಯ ಮೇಲೆ ನಿಧಾನವಾಗಿ ಹೋಯಿತು. ಪಶ್ಚಿಮ ದಿಗಂತದಲ್ಲಿ ಮೋಡಗಳ ಸಂದಣಿ ಹೆಚ್ಚಾಗಿದ್ದು, ಮಳೆಯಾಗುತ್ತಾ ಇದೆ ಎಂಬ ಸಂಕೇತವನ್ನು ಸೂಚಿಸು ತ್ತಿತ್ತು. ತುಂಗಭದ್ರೆ ನಿಧಾನವಾಗಿ ಬಂದು ನನ್ನ ವೇಗಕ್ಕೇಕೆ ಈ ಸೇತುವೆ ತಡೆಗಟ್ಟಿದೆಯೆಂದು ಸಿಟ್ಟುಮಾಡಿಕೊಳ್ಳುತ್ತ, ಆ ಚಣದಲ್ಲಿ ಮಾತ್ರ ಆರ್ಭಟಿಸುತ್ತ ಮುಂದೆ ಹೋಗುತ್ತಲಿದ್ದಳು. ವಿಶಾಲಮತಿಯು ರೈಲ್ವೆ ಸೇತುವೆ ಹಾಗೇಕೆ ತಡೆಗಟ್ಟಬೇಕೆಂಬ ಬುದ್ಧಿಯನ್ನು ಬಿಟ್ಟು, ನದಿ ಸರಾಗ ವಾಗಿ ಹೋಗುವಂತೆ ದಾರಿಮಾಡಿ ಕೊಡುತ್ತಿದ್ದಿತು. ಈ ವಿಶಾಲತೆಯನ್ನು ಕಂಡ ತುಂಗಭದ್ರೆ ಅದರಡಿಯಲ್ಲಿ ಮಾತ್ರ, ಸ್ತ್ರೀ ಸಹಜವಾದ ಒಯ್ಯಾರ ಒನಪುಗಳನ್ನು ಗೈಯ್ಯುತ್ತ ಯಾವ ಕಡೆಗೋ ಸಾಗುತ್ತಿದ್ದಳು. ಎರಡೂ ದಂಡೆಗಳಲ್ಲಿನ ಹಸಿರು ಪೈರು ಈ ರಮಣೀಯ ದೃಶ್ಯವನ್ನು ಇಮ್ಮಡಿ ಮುಮ್ಮಡಿ ಮಾಡಿತ್ತು.

ಈ ಹೃದಯಂಗಮ ದೃಶ್ಯವನ್ನು ನೋಡುತ್ತಾ ಇಬ್ಬರೂ ಕ್ಷಣಕಾಲ ನಿಂತಿದ್ದರು ಮಳೆಯ ಮೋಡಗಳು ನೀರಿನಲೆಗಳು ಚದುರುವಂತೆ ಒಂದೊಂ ದಾಗಿ ಚದುರುತ್ತಿದ್ದವು. ಗೆಳೆಯರಿಬ್ಬರು ನದಿಯ ದಂಡೆಗೆ ಹೋದರು. ದಂಡೆಯ ಬಳಿ ರೇಣುಕ ಪ್ರಸಾದ ನಿಂತು, ಕೈ ಕಟ್ಟಿಕೊಂಡು ನದಿಗಳಲ್ಲಿ ಎದ್ದೆದ್ದು ಬೀಳುವ ಮೀನುಗಳನ್ನು ನೋಡುತ್ತಿದ್ದ. ಪಕ್ಕದಲ್ಲಿ ಕೂಲಿಕಾರ ನೊಬ್ಬ ಬಟ್ಟೆಗಳನ್ನು ಅದ್ದುತ್ತಿದ್ದ. ಬಟ್ಟೆಗಳನ್ನು ಅದ್ದಿ ಒಮ್ಮೆ ನೀರಿನಲ್ಲಿ ಕೊಡವಿದ. ಹುಳುವೊಂದು ನೀರಿನಲ್ಲಿ ಬಿತ್ತು. ಮೊದಲೇ ಬಟ್ಟೆಯಲ್ಲಿ ಹಿಂಡಿ

ಹಿಪ್ಪಡಿಯಾಗಿದ್ದ ಹುಳುವಿಗೆ ಮೀನುಗಳು ಗಂಟುಬಿದ್ದವು. ಆ ಹುಳುವಿನಿಂದ ರೇಣುಕಪ್ರಸಾದ ಪಾಠವೊಂದನ್ನು ಕಲಿತುಕೊಂಡ: ಮನುಷ್ಯನೂ ಕೂಡ ಬಾಳ ಮೂಸೆಗೆ ಸಿಕ್ಕಿ ಬೆಂದು ಹೋಗುತ್ತಾನೆ. ಬೆಂದುಹೋದ ದೇಹಕ್ಕೂ ಕೆಲವು ಪುಣ್ಯಾತ್ಮರು ತೊಂದರೆ ಕೊಡುತ್ತಾರೆ. ಆಗವನಿಗೆ ಬಾಳಿನಲ್ಲಿ ನಿರಾಶೆ ಬಂದು, ಪ್ರಾಣಹತ್ಯೆ ಮಾಡಿಕೊಳ್ಳಲು ಅಪೇಕ್ಷಿಸುವನು. ಆಗವನು ಬಾಳನ್ನು ಕೊಂಚವಾದರೂ ಎದುರಿಸಲು ಸಾಧ್ಯವಾಗದೆ, ಓಡಿಹೋಗಲು ಯತ್ನಿಸುತ್ತಾನೆ. ಇಲ್ಲವೆ, ಪ್ರಾಣಹತ್ಯೆಯಿಂದ ಜೀವ ನೀಗಿಕೊಳ್ಳಲು ಯತ್ನಿಸುತ್ತಾನೆ. ಇಂತಹ ಅನೇಕ ದೃಷ್ಟಾಂತಗಳಿಂದ ವಿಶಾಲಾರ್ಥವನ್ನು ಕಟ್ಟುವ ಶಕ್ತಿ ಅವನಿಗೆ ಬರುತ್ತಿತ್ತು. ಜೊತೆಗೆ ಎಲ್ಲಕ್ಕೂ ಮಿಗಿಲಾದ ಕಲ್ಪನಾಶಕ್ತಿ, ಆಳವಾದ ವಿವೇಚನೆ, ನಿರಂತರ ಸಾಹಿತ್ಯಾಭ್ಯಾಸ, ಜನಜೀವನವನ್ನು ತನ್ನ 'ಕ್ಷ' ಕಿರಣದಿಂದ ವೀಕ್ಷಿಸುವುದು—ಮುಂತಾದವುಗಳು ದಿನದಿನಕ್ಕೂ ಹುಣ್ಣಿಮೆಯ ಚಂದ್ರನಂತೆ ಅವನಲ್ಲಿ ವೃದ್ಧಿಯಾಗುತ್ತಿದ್ದವು.

ತನ್ನ ತಂಗಿಯ ನೆನಪು ಬಂದಾಗ ಅವಳ ಕಷ್ಟಮಯ ಜೀವನ ರೇಣುಕನ ನೆನಪಿಗೆ ಬರುತ್ತಿತ್ತು. ಈಗೆರಡು ವರ್ಷಗಳಿಂದ ಅವನು ಆಕೆಯನ್ನು ನೋಡಿರಲಿಲ್ಲ. ಒಮ್ಮೆಯಾದರೂ ನೋಡಬೇಕೆಂಬ ಹಂಬಲ, ಕೇವಲ ಒಮ್ಮೆ ನೋಡಿ ಕಣ್ತಣಿಸಿಕೊಳ್ಳಬೇಕೆಂಬ ಆಸೆ ಅವನಲ್ಲಿ ಉತ್ಪನ್ನವಾಗುತ್ತಿತ್ತು. ಆ ಎರಡು ಮುರುಕು ಪಂಜರಗಳಲ್ಲಿ ಆಕೆ ಬೇಯುತ್ತಿದ್ದಾಳೆ ಒಂದು ಸಾರಿಯಾದರೂ ತೌರುಮನೆಯವರನ್ನು ಗಂಡನ ಕಟ್ಟಾಜ್ಞೆಯಿಂದ ನೆನೆಸುವಂತಿಲ್ಲ. ಅವರ ಪರಕಟ್ಟಿಕೊಂಡ ಮಾತನಾಡುವುದೊಂದಿರಲಿ, ಹೆಸರನ್ನೆತ್ತುವಂತಿರಲಿಲ್ಲ. ಅವಳಿರುವುದಕ್ಕಿಂತ ಈ ಹಾಳು ಬೇಗೆಯಿಂದ....ಛೆ! ಅಂತಹದನ್ನು ತಾನು ಯೋಚಿಸಬಾರದೆಂದು ಅವನು ಡೋಲಾಯಮಾನಮನನಾಗುವನು.

ಅದೆಷ್ಟು ಹೊತ್ತು ರೇಣುಕ ಹೀಗೆ ಯೋಚಿಸುತ್ತಿದ್ದನೋ ತಿಳಿಯದು. ಕೊನೆಗೆ ಅವನ ಮನೆಯ ನೆನವಾಗಿ ಮಾತಿಗೆ ಮೊದಲಾಯಿತು.

"ಮಾಧು, ಈ ದಾಯಾದಿಗಳು ಎಂಬುವರಲ್ಲಿ ಎಂತಹ ರಕ್ತ ಇರುತ್ತೆಂಬುದಾದರೂ ಸ್ವಲ್ಪ ಗೊತ್ತೇ?"

"ಯಾಕೆ ರೇಣುಕ? ಯಾವಾಗಲೂ ಒಂದಲ್ಲ ಒಂದು ಯೋಚನೆ

ಯಿಂದ ಮುಂಕಾಗಿರುತ್ತೀಯೆ! ಆ ಯೋಚನೆ ಬೇಡ. ಚಿತೆ ನಿರ್ಜೀವ ವನ್ನು ಸುಡುವಂತಹುದಾದರೆ, ಚಿಂತೆ ಸಜೀವವನ್ನು ಸುಡುತ್ತದೆ. ಕವಿ ಮಹೋದಯರಿಗೆ ನಾನೇನು ಹೆಚ್ಚು ಹೇಳಬೇಕಿಲ್ಲ."

"ಅಲ್ಲ ಮಾಧು, ಮೊನ್ನೆ ನಮ್ಮ ಮಾವ ಅಂತೆನ್ನಿಸಿಕೊಂಡವನು ಬಸವರಾಜನ ಮನೆಗೆ ಬಂದಿದ್ದ"

"ಹೌದು, ಬಂದಿದ್ದನಂತೆ"

"ಆಗ ಬಂದಿದ್ದನಲ್ಲ, ನಮ್ಮ ದೊಡ್ಡಪ್ಪ. ಬುದ್ಧಿ ಹೇಳಬಾರದಿತ್ತೇ"

"ನಿಮ್ಮ ಮಾಲಿನಿ ಅವರ ಮಗಳಲ್ಲ. ಯಾಕಾಗಿ ತಿಳಿ ಹೇಳುತ್ತಾರೆ"

"ನಿಜ. ಪ್ರಪಂಚ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ."

ಇನ್ನೂ ನಿನಗೆ 'ಪ್ರಪಂಚ' ಎಂಬ ಶಬ್ದದ ಅರ್ಥವೂ ಸಹ ಗೊತ್ತಿಲ್ಲ. ನಾನೀ ವಯಸ್ಸಿಗೆ ಎಲ್ಲಾ ಕಹಿ ಉಂಡಿದೇನೆ. ನೀನೀಗ ಯೋಚನೆ ಬಿಡುವವನೋ ಏನಿಲ್ಲವೋ?.. .. ...ಏನಂದೆ?"

"ಆ ಉಮಾಪತಿ ಅವರಜ್ಜಿಗೇನೆ ಮೋರೆಗೆ ಹೊಡೆದಿದ್ದನಂತೆ. ಆ ಪುಣ್ಯಪುರುಷ ನಡಸಿರೋ ಕುಯುಕ್ತಿ ಒಂದಲ್ಲ—ಎರಡಲ್ಲ. ನಮ್ಮ ಗಂಗಕ್ಕನ ಒತ್ತಾಯದಿಂದ ಮಾಲಿನಿಯನ್ನು ಅವನಿಗೆ ನಮ್ಮ ತಂದೆ ಕೊಟ್ಟರು. 'ನಾನು ಸಾಕಿ ಸಲಹಿದೇನೆ. ನನ್ನ ಮಾತು ನೀವು ಕೇಳುವುದಿಲ್ಲೇಕೆ' ಎಂದು ಒತ್ತಾಯದಿಂದ ಹೇಳಿ ಕೊಡಿಸಿದಳು. ಮಾಧು ! ನನ್ನ ಸ್ಮೃರಣೆ ತಪ್ಪಿಹೋಗಿದೆ. ಬಾಯಿಗೆ ಬಂದ ಮಾತುಗಳ ನ್ನಾಡುತ್ತಿದೇನೆ, ಅಲ್ಲವೆ?"

"ಎಲ್ಲಾ ನಿನಗೆ ಗೊತ್ತು. ನಾನೇನು ಹೇಳಲಿ" ಎಂದು 'ಡೂಂ ಲೈಟ್' ನೋಡುತ್ತಾ ಹೇಳಿದ ಮಾಧು.

"ಮಾಧು, ಯಾಕೆ, ಬೇಸರ ಬಂತೆ?"

"ಉಹೂ, ಯಾವ ಕಡೆಗೋ ಚಿತ್ತ ಹೋಗಿತ್ತು"

"ನಿಮ್ಮಜ್ಜಿಗೂ ಏನೋ ರೋಗ ಗಂಟು ಬಿದ್ದಿದೆ. ಔಷಧ ಕೊಡಿಸು. ಆ ಅಜ್ಜಿ ಮನೆಯ ಬೆಳಕು. ಅದಾದರೂ ಆರದಂತೆ ನೋಡಿಕೊಳ್ಳಪ್ಪ"

"ನಾನೂ ಪಂಡಿತರಿಂದ ಔಷಧಿ ಕೊಡಿಸಿದ್ದೇನೆ. ದಿನದಿನಕ್ಕೂ ಇಳಿಯುತ್ತಿದಾಳೆ. ಅಜ್ಜಿ ಬದುಕುವ ಸ್ಥಿತಿಯಲ್ಲಿಲ್ಲ. ದೇವರು ಈ ಪ್ರಪಂಚ ಸೃಷ್ಟಿಸಿ ತಾನು ಮಾತ್ರ ಸುಖವಾಗಿದಾನೆ. ಅವನದೂ

ಒಂದಾಟ" ರೇಣುಕ ಮುಗುಳ್ನಗುತ್ತಾ ಹೇಳಿದ.

"ಅವನ ಸ್ಥಾನವನ್ನೂ ಹಲದಿನಗಳು ಬೇರೆಯವರಿಗೆ ಬಿಟ್ಟು ಕೊಡುತ್ತಿರುವ ಪ್ರಣಾಳಿಯಿದ್ದರೆ ಎಷ್ಟೊಳ್ಳೆಯದಾಗಿತ್ತು!"

"ಹೋಗಲಿ ಬಿಡು, ಅದೆಂದು ದೇವರ ಕರುಣೆ ಬೀಳುವುದು ರೇಣುಕ? ನನ್ನ ನಿನ್ನ ಜೀವನ ನೆನೆಸಿಕೊಂಡರೆ ಕಣ್ಣೀರು ಬರುತ್ತದೆ. ಅದು ದಾರಿಯಾಗಿರಬಹುದು, ಹೋಟೆಲಾಗಿರಬಹುದು, ಸಭೆಯಾಗಿರ ಬಹುದು, ಕರುಣೆಯಿಲ್ಲದೆ ಆ ನೀರು ಬಂದು ಮರ್ಯಾದೆ ತೆಗೆಯುತ್ತದೆ. ಅಂತಹ ಸಮಯದಲ್ಲಿ ಜನಗಳು ಯಾರಾದರೂ ಇದ್ದರೆ, ಧೂಳು ಬಿದ್ದವರಂತೆ ನಟಿಸಿ ಒರೆಸಿಕೊಳ್ಳುತ್ತೇವೆ."

"ಹೌದು, ಗೊತ್ತಿದೆ. ಅದರನುಭವವನ್ನು ಈ ಜೀವ ಉಂಡು ಬೆಳೆದಿದೆ. ನಾನಂತೂ ಕಣ್ಣೀರಿನಲ್ಲಿಯೇ ಬೆಳೆದಿದ್ದೇನೆ .."

ಅವರಿಬ್ಬರೂ ಮನೆಗೆ ಹೊರಟರು. ಮಾಧವರಾಯನ ಮನೆ ಬಳಿ ಬಂದಾಗ ರೇಣುಕ ನಮಸ್ಕಾರ ಹೊಡೆದು ಮನೆಯ ಕಡೆ ಹೊರಟು ಹೋದ. ಮಾಧು ಮನೆಯ ಒಳಕ್ಕೆ ಹೋದಾಗ ರಾಧಮ್ಮ ನಿಶ್ಚೇಷ್ಟಿತ ಳಾಗಿ ನೆಲಹಿಡಿದಿದ್ದಳು. ದಮಯಂತಿಬಾಯಿ, ತುಂಗಾಬಾಯಿ ಹಾಸಿ ಗೆಯ ಪಕ್ಕದಲ್ಲಿ ಕುಳಿತುಕೊಂಡು ಉಪಚರಿಸುತ್ತಿದ್ದರು.

"ಅಪ್ಪಾ ಮಾಧು, ಬಾಪ್ಪ ಇಲ್ಲಿ. ಎಲ್ಲಿ ಒಂದು ಸಾರಿ ತಲೆಯ ಮೇಲೆ ಕೈ ಇಡು" ಎಂದು ರಾಧಮ್ಮ ಮಾಧುವಿನ ಕೈಯನ್ನು ತನ್ನ ತಲೆಯ ಮೇಲೆ ಇರಿಸಿಕೊಳ್ಳಲು ಪ್ರಯತ್ನಮಾಡಿದಳು.

ಮಾಧು ತುಟಿಗಳ ಮೇಲೆ ಕುಳಿತಿದ್ದ ನೊಣಗಳನ್ನು ಝಾಡಿಸಿ, "ಎಂಥಾ ಬಿಸಿ ಇದೆಯಲ್ಲ! ಗುಳಿಗೆಗಳನ್ನು ತೆಗೆದುಕೊಂಡಿದ್ದೇನಜ್ಜಿ?"

"ಹೂನಪ್ಪ, ತೆಗೆದುಕೊಂಡಿದ್ದೆ" ಎಂದು ಮುಖ ಕಿವಿಚಿಕೊಂಡಳು ರಾಧಮ್ಮ.

"ಯಾಕೆ ಅಳ್ತೀಯಮ್ಮಾ? ......."

"ಮಾಧೂ....ನನ್ನ ಮಧುರ ಮಾಧು. ತಂದೆ ತಾಯಿಗಳಿಲ್ಲದ ಮಗ, ನಿನ್ನ ಸಾಕಿ ಸಲಹಿದೆ ನೀನು ಲಗ್ನವಾಗಿ ಸುಖವಾಗಿರೋದನ್ನು ನೋಡ ಲಿಲ್ಲ. ನಾನಿನ್ನು ಇ... ರೋ ...ದಿ . ಲ್ಲ," ಎಂದು ಉಕ್ಕೇರಿ ಬರುವ ಕಣ್ಣೀರನ್ನು ಆಕೆ ತಡೆಯಲೆತ್ನಿಸಿದಳು. ಹಣ್ಣಾದ ಚಪ್ಪರ ಬದನೆಕಾಯಿ

ಯಿಂದ ಹೊರಟ ನೀರಿನಂತಿತ್ತು ಅಜ್ಜಿಯ ಕಣ್ಣೀರು. "ಏನ್ರಿ ರಾಧಮ್ಮ, ನಿಮಗೆ ಹುಚ್ಚೇನು ! ಹುಡುಗನಿಗೆ ಬವಳಿ ತರಬೇಡಿ. ನಾನು ಹೇಳು ತೇನೆ. ನೀವೇ ಹೀಗೆ ಮಾಡಿದರೆ ಹ್ಯಾಗರಿ ?" ಎಂದರು ತುಂಗಾಬಾಯಿ·

"ಹುಡುಗನಿಗೆ ಧೈರ್ಯ.... ಹೂ ... ಧೈರ್ಯ ! ನಿಮ್ಮಂತಹವರು ಇರಬೇಕಾದರೆ ನನಗ್ಯಾಕೆ ಹೆದರಿಗೆ. ನೀವೆ ತಾಯಿ—ತಂದೆ ... ಅಯ್ಯೋ ಕೆಮ್ಮು....ಕೆಮ್ಮೂ ... ಹಾಳಾದ ಕೆಮ್ಮು !

"ಮಾಧು, ವೈದ್ಯರನ್ನು ಆದಷ್ಟು ಬೇಗ ಕರೆದುಕೊಂಡು ಬಾ, ಹೋಗು, ಹೋಗು, ಬೇಗ ಹೋಗು."

ಎಂದು ತುಂಗಾಬಾಯಿ ನೀಲಗಿರಿಯೆಣ್ಣೆಯನ್ನು ಹಚ್ಚಿ ತಿಕ್ಕುತ್ತಾ ನುಡಿದು ಅವನನ್ನು ಕಳುಹಿದರು. ಪಂಡಿತ ನರಸಿಂಹಶಾಸ್ತ್ರಿಗಳು ಬಂದು ನಾಡಿ ಪರೀಕ್ಷೆಮಾಡಿದರು ನಾಡಿ ಪರೀಕ್ಷೆಯಾದನಂತರ ಅವರ ಮುಖ ಬಿಳಿಚಿಕೊಂಡಿತು. ಒಮ್ಮೆ ನಿಟ್ಟುಸುರಿನಿಂದ ಹುಬ್ಬು ಹಾರಿಸಿದರು. ಅವರು ಹಚ್ಚಿಕೊಂಡಿದ್ದ ಕುಂಕುಮದ ಕಣಗಳು ಕೊಂಚ ಹಾರಿದವು.

"ಸಾಣೆಕಲ್ಲು ಒಂದು ಬಟ್ಟಲು ತೆಗೆದುಕೊಂಡು ಬಾಪ್ಪ" ಎಂದು ತರಿಸಿ, ಕೆಲವು ಕುಪ್ಪಿಕಟ್ಟು ಮಾತ್ರೆಗಳನ್ನು ತೆಗೆದು ತೇದು ವೈದ್ಯರು ಕುಡಿಸಿದರು. ತ್ರಿದೋಷಕ್ಕಿಟ್ಟುಕೊಂಡಿದ್ದರಿಂದ ಅವರಿಗೆ ತುಂಬಾ ಗಾಬರಿಯಾಗಿತ್ತು.

"ಪರವಾಯಿಲ್ಲ, ಆ ಸುಬ್ರಹ್ಮಣ್ಯನ ಕೃಪೆಯಿಂದ ಗುಣಮುಖವಾ ಗುತ್ತೆ. ಆರು ಪ್ರಯತ್ನಗಳನ್ನು ಮಾಡಬೇಕು, ಏಳನೆಯದು ದೇವರ ಕೈಯಲ್ಲಿದೆ. ಸಂಶಯ—ಯೋಚನೆಗೆ ಎಳ್ಳಷ್ಟೂ ದಾರಿಗೊಡಬೇಡ."

"ಹಾಗೇನೂ ಇಲ್ಲ, ಪಂಡಿತರೆ."

"ಒಳ್ಳೆಯದು. ಹಾಗೆ ಯೋಚನೆ ಹಚ್ಚಿಕೊಂಡು ಕುಳಿತುಕೊಳ್ಳ ಬೇಡ. ಸಂಶಯಾತ್ಮಾ ವಿನಶ್ಯತಿ. ನಾನಿನ್ನು ಬರುತ್ತೇನೆ" ಎನ್ನುತ್ತ ಹೊರಟರು. ಪಂಡಿತ ನರಸಿಂಹಶಾಸ್ತ್ರಿಗಳ ಔಷಧ ಏನೂ ಮಾಡಲಿಲ್ಲ. ಔಷಧ ಹಿಡಿಯುವುದಕ್ಕೆ ಸಾಕಷ್ಟು ಶಕ್ತಿ ಮೈಯಲ್ಲಿರಲಿಲ್ಲ. ಏನೇನೋ ಮುದುಕಿ ಕನವರಿಸುತ್ತಿದ್ದಳು. ಮಾಧು ಒಂದು ಕಪ್ಪು ಕಾಫಿಮಾಡಿ ಕುಡಿಸಿದ.

"ಮಾಧು! ನಾನು ಹೊರಟು ಹೋದಮೇಲೆ ಮುಂದಿನ ವರ್ಷ

ದಿಂದ....ಆಹ್....ಇನ್ನೊಂದಿಷ್ಟು ಓದು. ಗುರುಹಿರಿಯರಿಗೆ ಅಂಜಿ ಹೋಗ್ತಿರು. ದೇವರು ದೊಡ್ಡವನು—ವಾದಿರಾಜರು—ದೊಡ್ಡವರು—ಟೀಕಾಚಾರ್ಯರು ದೊಡ್ಡವರು—ಎಲ್ಲರಿಗೂ ನೀನು ಭೈವೀಭಕ್ತಿಯುಳ್ಳವನಾಗಿದ್ದರೆ ಕಾಪಾಡುತ್ತಾರೆ."

"ಹಾಗೆ ಸಂಶಯಿಸಬೇಡಜ್ಜಿ. ನನಗೆ ಅ....ಳು ..ಬ....ರು ...ತ್ತೆ" ಎಂದು ಮಾಧು ಕಣ್ಣೀರನ್ನು ಒರೆಸಿಕೊಂಡು ಸ್ವಲ್ಪ ಮೋಸಂಬಿರಸ ಬಾಯಲ್ಲಿ ಬಿಟ್ಟ.

"ಆಹಾ! ತಣ್ಣಗಾಯಿತು ಜೀವ. ದೇ....ವ ..ರು ..ನಿನಗೆ...." ಎನ್ನುತ್ತಾ ರಾಧಮ್ಮನ ಪ್ರಾಣ ಪಕ್ಷಿ ಹಾರಿಹೋಯಿತು. ಮಾಧುವಿನ ಮನೆಯ ಪ್ರಣತಿ ಒಡೆದು ಚೂರಾಯಿತು!

"ಅಜ್ಜೀ . ನೀನೊಬ್ಬಳೆ ನನಗೆ ಸರ್ವಸ್ವವಾಗಿದ್ದೆ. ನೀನೂ ಹೊರಟು ತಬ್ಬಲಿ ಮಾಡಿದಿಯಾ ..." ಎಂದು ಮಾಧು ಶವದ ಮೇಲೆ ಬಿದ್ದು ಬಿದ್ದು ಅತ್ತ.

ತುಂಗಾಬಾಯಿಯವರು ಬಂದು "ಏನು ಮರುಳು ಮಾಧು! ವಯಸ್ಸಾಗಿತ್ತು ಹೋದಳು. ನಾವೆಲ್ಲಾ ಇಲ್ಲವೆ?" ಎನ್ನುತ್ತ ಅವನನ್ನು ಎಬ್ಬಿಸಿದರು.

"ಪಾಪ! ಒಡತನದಲ್ಲಿ ಬೆಂದು ಬಾಳಿ ಹೋದಳು" ಎಂದು ದಮಯಂತಿಬಾಯಿ ಆಳವಾದ ಉಸಿರುಬಿಟ್ಟಳು

—ಅಜ್ಜಿಗೆ ಮಾಡಬೇಕಾದ ಎಲ್ಲ ಕರ್ಮಗಳನ್ನು ಮಾಧು ತೀರಿಸಿದ. ಮುದುಕಿ ಇಲ್ಲದ ಮನೆ ಮಕ್ಕಳಿಲ್ಲದ ಮನೆಯಂತೆ ಶೂನ್ಯವಾಗಿತ್ತು. ದೀಪವಿಲ್ಲದ ಮನೆಯಂತೆ ರೌದ್ರಾಕಾರ ತಳೆದಿತ್ತು.

ಈಗ ಮಾಧುವಿಗೆ ಕಾರ್ಖಾನೆ ಕೆಲಸವಾಯಿತು; ತನ್ನ ನದಿಯ ದಂಡೆಯಾಯಿತು. ಈ ಘಟನೆಯಾದಂದಿನಿಂದ ಮಾಧು ಗೆಳೆಯರೊಡನೆ ಹೋಗುವುದನ್ನು ತ್ಯಜಿಸಿದ್ದ. ಮನೆಯಲ್ಲಿ ಒಂದಿಷ್ಟು ಅನ್ನಬೇಯಿಸಿಕೊಂಡು, ಹೋಟೆಲಿನಿಂದ ಹುಳಿ ತರುತ್ತಿದ್ದ. ಹೋದಷ್ಟನ್ನು ಗಬಗಬ ತಿಂದು ಆಧ್ಯಾತ್ಮಿಕ ಪುಸ್ತಕಗಳನ್ನು ಓದುವನು. ಪರಂತು ಈಗ ಇನ್ನೊಬ್ಬರ ಮನೆಗೆ ಹೋಗುವುದಕ್ಕೂ ಅವನು ಆಸೆಪಡುತ್ತಿದ್ದಿಲ್ಲ. ಹೋದವಾರ ಗಣ್ಯವ್ಯಕ್ತಿಗಳೊಬ್ಬರು ಊಟಕ್ಕೆ ಕರೆದಿದ್ದರು. ಊಟಕ್ಕೇನೋ ಮಾಧು

ಅವರ ಮನೆಗೆ ಸಂತೋಷದಿಂದ ಹೋಗಿದ್ದ. ಆದರೆ ಊಟಕ್ಕೆ ಕುಳಿತು ಎಲ್ಲರೂ ಆಪೋಶನ ತೆಗೆದುಕೊಳ್ಳುತ್ತಿದ್ದಾಗ ಇವನು ಮುಂಕಾಗಿ ಏನೋ ಹುಚ್ಚು ಹುಚ್ಚಾಗಿ ಮಾತನಾಡಿದನಂತೆ. ಅದಕ್ಕೆ ಅವರು ಗೊಳ್ಳೆಂದು ನಕ್ಕರು. ಇವನೂ ನಿರ್ವಾಹವಿಲ್ಲದೆ ನಕ್ಕ. ಅದು ದೇಹಕ್ಕೆ ಏನೂ ತೊಂದರೆ ಕೊಡದಿದ್ದರೂ, ಮಾನಸಿಕ ನೋವನ್ನುಂಟುಮಾಡಿತ್ತು. ಆ ದಿನದಿಂದ ಬೇರೆಯವರು ಊಟಕ್ಕೆ ಕರೆದರೂ ಅವನು ಹೋಗುತ್ತಿದ್ದಿಲ್ಲ ಬೇರೆ ಕಡೆಯಿಂದ ಕರೆ ಬಂದಿದೆಯೆಂದು ನೆವ ಹೇಳುತ್ತಿದ್ದ, ಅವನಿಗೆ ಯಾವ ಆಚಾರ, ಕಟ್ಟಳೆಗಳೂ ಗೊತ್ತಿರಲಿಲ್ಲ ಮನೆಯಲ್ಲಿ ತಂದೆತಾಯಿಗಳೇನಾದರೂ ಇದ್ದಿದ್ದರೆ, ಬುನಾದಿ ಹಾಕುತ್ತಿದ್ದರು. ಪುಣ್ಯವಶಾತ್ ಪಕ್ಕದ ಮನೆಯ ವೈದಿಕ ಬ್ರಾಹ್ಮಣರೊಬ್ಬರು ಉಪನಯನವಾದನಂತರ ಸಂಧ್ಯಾವಂದನೆ ಕಲಿಸಿದ್ದರು. ನಿತ್ಯ ಸಂಧ್ಯಾವಂದನೆ ಮಾಡುತ್ತಿದ್ದ. ಮುದುಕಿ ವೈಕುಂಠವಾಸಿಯಾದಮೇಲೆ ಸಾಯಂಸಂಧ್ಯೆಯನ್ನು ಮಾಡುತ್ತಿದ್ದ ; 'ಸುಮಧ್ವ ವಿಜಯ'ದ ಕೆಲವು ಭಾಗಗಳನ್ನು ತಪ್ಪದೆ ಓದುತ್ತಿದ್ದ. ಆಗಾಗ 'ವಾಯು ಸ್ತುತಿ' 'ಭಗವದ್ಗೀತೆ' ಮುಂತಾದವುಗಳಮೇಲೆ ಕಣ್ಣಾಡಿಸಿ ಆಧ್ಯಾತ್ಮಿಕದ ತಿರುಳನ್ನು ಅನುಭವಿಸುತ್ತಿದ್ದ. ಈಗೀಗ ಆಧ್ಯಾತ್ಮಿಕದ ರಸಚೇತನದ ಸೋಂಕು ಚಂದನರಸದಣ್ಪಿಸಂತಾಗುತ್ತಿತ್ತು. ಒಮ್ಮೆ ಇವನನ್ನು ನೋಡಿ ತುಂಗಾಬಾಯಿಯವರು ಅಂದರು

"ಯಾರಾದರೂ ಊಟಕ್ಕೆ ಕರೆದರೆ ಹೋಗು. ಹಾಗೆಲ್ಲಾ ನಾಚಿಕೊಳ್ಳಬಾರದು. ಮೊನ್ನೆದಿವಸ ಆ ಭಾಗೀರಥಮ್ಮ "ಬಡಹುಡುಗಾಂತ ಊಟಕ್ಕೆ ಕರೆದರೆ ಬರಲಿಲ್ಲ. ಈ ಗತಿಯಿಲ್ಲದ ಸುಟ್ಟು ಹುಡುಗರಿಗೆ ಇಂಥಾ ಗರ್ವ ಬೇರೆ, ಅಂದರು. ನೀನು ಎಲ್ಲರ ಜೊತೆಗೆ ನಗುನಗುತ್ತಾ ಇರಬೇಕು. ಕರೆದರೆ ಹೋಗುತ್ತಿರಬೇಕು."

ಈ ಮಾತು ಕೇಳಿ ಮಾಧುವಿನ ಜೀವ ಕೊಂಚ ಅಳುಕಿತು. ತನ್ನಷ್ಟಕ್ಕೆ ತಾನು ಇರುತ್ತೇನೆಂದರೂ ಹಾಯಾಗಿರುವ ಹಾಗಿಲ್ಲವಲ್ಲ—ಎಂದು ಅವನು ನೊಂದುಕೊಂಡ. ಆದ್ದರಿಂದ ತನ್ನ ಏಕಾಂತಪ್ರಿಯತೆಗೆ ತಡೆಗಟ್ಟಿ, ರೇಣುಕ, ಪ್ರೇಮಚಂದ್ರರೊಂದಿಗೆ ಮೊದಲಿನ ಆತ್ಮೀಯತೆಯನ್ನು ಬೆಳೆಸಲು ಹಚ್ಚಿದ. ಅವನಿಗೆ ಆಗಾಗ ಹೀಗೂ ಅನ್ನಿಸುತ್ತಿತ್ತು : "ಅಜ್ಜಿ ತೀರಿ ಹೋದಳೇನೋ ನಿಜ. ಆದರೇನು, ರಾಮದೇವರ ಗುಡಿಯಲ್ಲಿ

ಈಗಲೂ ಭಜನೆ ನಡೆಯುತ್ತದೆ. ಜನಗಳು ಎಂದಿನಂತೆ ಕೆಲಸಮಾಡುತ್ತಿದ್ದಾರೆ. ತಾನು ಎಂದಿನಂತೆ ಊಟಮಾಡುತ್ತಿದ್ದೇನೆ. ಸಾಯಂಕಾಲ ಶೋಭಾಟಾಕೀಸಿನಿಂದ ಎಂದಿನಂತೆ ಹಾಡುಗಳು ಕೇಳುತ್ತಲಿವೆ, ಯಾವ ಚಟುವಟಿಕೆಗಳೂ ನಿಂತಿಲ್ಲ" ಎಂದು ದೀರ್ಘವಾಗಿ ಯೋಚಿಸುತ್ತಿದ್ದ.

ಮಾಧವರಾಯನ ಜೀವನದಲ್ಲಿ ಇಂತಹ ಅನೇಕ ಕ್ರಾಂತಿಗಳು, ವಿಪ್ಲವಗಳು ನೊಳಗುತ್ತಿದ್ದವು. ಈ ನಡುವೆ ಅವರ ಮಾವಂದಿರು ದಾವಣಗೆರೆಯಲ್ಲಿ ಬಂದಿರುವುದಕ್ಕೆ ಹೇಳಿದರು ಕಾರ್ಖಾನೆ ಬಿಟ್ಟು ಬೇರೆ ಎಲ್ಲಿ ಕೆಲಸ ಹುಡುಕುವುದೆಂದು ಹೇಳಿ ಅವರನ್ನು ಕಳುಹಿಸಿಬಿಟ್ಟ. ಅಜ್ಜಿ ಇರುವವರೆವಿಗೆ ಒಂದು ದಿನವಾದರೂ ಬಿಟ್ಟಿರದೆ, ಯಾವುದೋ ಕೆಲಸದ ನಿಮಿತ್ತವಾಗಿ ಮುರುಕುಮನೆಯನ್ನು ಮಾರಿ ಗತಿಯಿಲ್ಲದಂತೆ ಊರಿಂದ ಊರಿಗೆ ಹೋಗುವ ಇಷ್ಟ ಅವನಿಗಿರಲಿಲ್ಲ.

ಈಗ ಮಾಧು ರೇಣುಕಪ್ರಸಾದನಿಗೆ ಕೆಲಸವೊಂದನ್ನು ಹುಡುಕಬೇಕಾಗಿತ್ತು. ಅದಕ್ಕಾಗಿ ತಾನೇ ರೇಂಜ್ ಇನ್ಸ್‌ಪೆಕ್ಟರ್ ಬಳಿ ಹೋದ. ಇನ್ಸ್‌ಪೆಕ್ಟರು ಹಿಂದಿನ ದೂರದ ಸಂಬಂಧ ಎಂಬುದು ರಾಘವೇಂದ್ರಾಚಾರ್ಯರ ಮನೆಗೆ ಊಟಕ್ಕೆಂದು ಹೋದಾಗ ಗೊತ್ತಾಗಿತ್ತು. ಆದಿನ ಊಟಮಾಡಿಕೊಂಡು ಮಾಧು ಆಫೀಸಿಗೆ ಹೋದ.

"ಏನು ಮಾಧು, ಬಂದೆಯಲ್ಲ?"

"ವಿಶೇಷವೇನೂ ಇಲ್ಲ. ಒಂದು ಕೆಲಸವಿತ್ತು"

"ಏನು ಹೇಳು? ಈ ಕಡೆ ಕುಳಿತಿಕೋ ಬಾ ಮಗು. ನನ್ನಿಂದ ಆಗುವದಿದ್ದರೆ ಮಾಡಿಕೊಡುತ್ತೇನೆ "

"ನಿಮ್ಮಿಂದ ಆಗಿಯೇ ಆಗುತ್ತೆ ಎಂಬ ಪೂರ್ಣ ಧೈರ್ಯದಿಂದಲೇ ಬಂದೆ ಸಾರ್. ನೋಡಿ ನನ್ನ ಸ್ನೇಹಿತ ರೇಣುಕಪ್ರಸಾದ ಎಂತ ಇದಾನೆ. ಅವರ ಮನೆಯವರು ಬಹಳ ಬಡವರು. ಅವನಿಗೊಂದು ಯಾವುದಾದರೂ ಖಾಲಿ ಕೆಲಸ ಇದ್ದರೆ ದಯವಿಟ್ಟು ಕೊಡಿಸಿ ಕೊಡೋಣಾಗಬೇಕು."

"ಓಹೋ! ಆ ಕಳ್ಳ ಹುಡುಗ. ಅವನು....ಅಪ್ಲಿಕೇಷನ್ ಈ ಹಿಂದೆ ಕೊಟ್ಟಿದ್ದ. ನಂದಿಗಾವಿಯವರು ಒಬ್ಬರು ಬಹಳ ದಿನದಿಂದ ಒಡಾಡುತ್ತಾ ಇದಾರೆ. ಕಾರಣ ನೀನು ಆಸ್ಥೆವಹಿಸಿ ಹೇಳಿದ್ದೀಯೆ ಎಂದ ಮೇಲೆ ರಾಮತೀರ್ಥಕ್ಕೆ ಹೋಗಲಿ. ಆತನನ್ನು ಕಂಡು ಕಳಿಸಿಕೊಡು."

ಮಧುವಿನ ಜನ್ಮಕ್ಕೆ ಹೊರೆ ಇಳಿದಂತಾಯಿತು. ಚಕೋರಪಕ್ಷಿ ಬೆಳುದಿಂಗಳನ್ನು ನೋಡುವಂತೆ ಅವರ ಮುಖವನ್ನು ಕೃತಜ್ಞತಾಪೂರ್ವಕ ದೃಷ್ಟಿಯಿಂದ ನೋಡಿ

"ಸಾರ್, ನಿಮಗೆ ತುಂಬ ವಂದನೆಗಳು. ಓರ್ವ ಬಡವನಿಗೆ ಕೆಲಸ ಕೊಟ್ಟು ತುಂಬಾ ಸಹಾಯ ಮಾಡಿದಿರಿ" ಎಂದು ಹೇಳಿ, ಬೇಗ ರೇಣುಕ ಪ್ರಸಾದನ ಮನೆಯ ಕಡೆಗೆ ಧಾವಿಸಿದನು.

# ೧೬

ಏಲೇಶ ನವನಾಗರಿಕತೆಯ ಥಳುಕಿನಲ್ಲಿ ಸಿಕ್ಕಿದ್ದ ಓರ್ವ ಬಿಸಿರಕ್ತದ ತರುಣ. ಸಮಾಜದಲ್ಲಿನ ಎಲ್ಲಾ ಕೆಲಸಗಳು ತನ್ನಿಷ್ಟದಂತೆ ನಡೆಯ ಬೇಕೆಂದು ಅವನ ಅಭಿಮತ. ಊರಿನಲ್ಲಿ ಪೀಠಾಚಾರ್ಯರ ಪಟ್ಟಾಭಿ ಷೇಕದ ಸಮಾರಂಭವೊಂದು ಒದಗಿ ಬಂತು. ಊರಿನವರ ಪರವಾಗಿ ಕಾಣಿಕೆಯೊಂದನ್ನು ಕೂಡಿಸಿ, ಸನ್ನಿಧಿಯವರಿಗೆ ಬಿನ್ನವತ್ತಳೆಯನ್ನೂ ಕಾಣಿಕೆಯನ್ನೂ ಅರ್ಪಿಸಬೇಕೆಂದು ಊರಿನವರು ನಿರ್ಧಾರಮಾಡಿದ್ದರು. ಈ ವಿಷಯ ಏಲೇಶನಿಗೆ ಮುಂದಾಗಿ ತಿಳಿಸದೇ ಇದ್ದುದೇ ಅವನಿಗೆ ರೊಚ್ಚು ಕೆರಳಿಸಲು ಕಾರಣವಾಯಿತು. ಭಕ್ತಸಮೂಹ ಪೀಠಕ್ಕೆ ತಮ್ಮ ಕೈಲಾದಷ್ಟು ಕೊಟ್ಟು ಸಹಾಯಮಾಡಿತು. ಆದರೆ ಊರಿನ ಗಣ್ಯವ್ಯಕ್ತಿ ಗಳು ಪಟ್ಟಿಗಾಗಿ ಏಲೇಶನ ಬಳಿ ಬಂದು ಕೇಳಿದಾಗ, ಅವನು ಅವಾಚ್ಯ ಶಬ್ದಗಳನ್ನು ಆಡಿದ್ದಲ್ಲದೆ ಪಟ್ಟಿಯನ್ನೂ ಕೊಡಲಿಲ್ಲ, ಅನಂತರ ಸಮಾಜ ದಲ್ಲಿನ ಯಾವ ಕಾರ್ಯ ಚಟುವಟಿಕೆಗಳಲ್ಲಿಯೂ ಭಾಗವಹಿಸಲಿಲ್ಲ.

ಈ ಒಂದು ಅನುಚಿತ ಕಾರ್ಯಾಚರಣೆಯಿಂದ ಏಲೇಶನನ್ನು ಸಮಾಜದವರು ಬಹಿಷ್ಕಾರ ಹಾಕಿದರು ಅವನು ತಪ್ಪೊಪ್ಪಿಕೊಂಡು ಸಮಾಜಕ್ಕೆ ದಂಡ ಒಪ್ಪಿಸಿದರೆ ಮಾತ್ರ ಸೇರಿಸಿಕೊಳ್ಳುವುದಾಗಿ ಸಮಾಜದ ವರು ಅವನಿಗೆ ನಿರ್ಬಂಧಮಾಡಿದ್ದರು. ಕಾಲಾನುಗುಣವಾಗಿ ಸಮಾಜದ ಪ್ರತಿ ತಾನು ಮಾಡಿದ ಅನುಚಿತ ಕಾರ್ಯ ಮಹಾಪರಾಧವೆಂದು ಏಲೇಶನಿಗೆ ಅರಿವಾಯಿತು.

ಒಂದು ದಿನ ಅವನು ಶಿವಣ್ಣಯ್ಯನವರ ಬಳಿ ಬಂದು ತನ್ನ ದುಃಖ ವನ್ನು ತೋಡಿಕೊಂಡ ಅವರು ಇನ್ನಿಬ್ಬರು ಗಣ್ಯವ್ಯಕ್ತಿಗಳನ್ನು ಕರೆಯಿಸಿ, ಅವರ ಸಮ್ಮುಖ ಕ್ಷಮಾಪಣೆ ಬೇಡಿ ದಂಡಕೊಡಲು ಅವನಿಗೆ ಹೇಳಿದರು. ಏಲೇಶ ಅವರ ಸಮಕ್ಷಮ ತಪ್ಪೊಪ್ಪಿಕೊಂಡು ತನ್ನ ಕೈಲಾದಷ್ಟು ಹಣ ವನ್ನು ದಂಡರೂಪವಾಗಿ ಕೊಟ್ಟ. ಇದು ಬಸವರಾಜನಿಗೆ ಸಹಿಸದಾಯಿತು. ಅವನ ದಾಯಾದಿಮತ್ಸರವನ್ನು ತೀರಿಸಿಕೊಳ್ಳಲು ದಾರಿಯೊಂದನ್ನು ಹುಡುಕುತ್ತಿದ್ದ. ಊರಿನಲ್ಲಿ ಅವನು ಒಂದು ವೋಳಿಯನ್ನು ಕಟ್ಟಿದ.

ಏಲೇಶ ಸಮಾಜದವರೆದುರು ಅವಾಚ್ಯಶಬ್ದಗಳನ್ನಾಡಿದ್ದ. ಶಿವಣ್ಣಯ್ಯನವರು ಅದು ಹೇಗೆ ಒಬ್ಬರೇ ಸೇರಿಸಿಕೊಂಡರು? ಆ ಪೋಳಿಯ ಧುರೀಣನೊಬ್ಬ ಶಿವಣ್ಣಯ್ಯನವರ ಮನೆಗೆ ಬಂದ.

"ಸ್ವಾಮಿ?" ಎಂದ.

"ಏನು ಬಾ, ನಿಂಗಪ್ಪ" ಎಂದರು ಶಿವಣ್ಣಯ್ಯ.

"ದೈವದವರು ಕರೆಯುತ್ತಾರೆ"

"ಯಾಕೆ?" ಎಂದು ಪ್ರಶ್ನಿಸಿದರು ಶಿವಣ್ಣಯ್ಯ. ಕ್ಷಣಹೊತ್ತು ತಡೆದು "ದೈವದವರು ಎಂದರೆ ಯಾರು?" ಎಂದು ಅವರು ಪ್ರಶ್ನಿಸಿದರು, ಪುನಃಯೋಚಿಸಿ.

ತಾವು ಏಲೇಶನನ್ನು ಸಮಾಜವಲ್ಲಿ ಸೇರಿಸಿಕೊಂಡಿದ್ದಕ್ಕೆ ಎಲ್ಲ ಜನಗಳು ಸಹಕಾರ ಸಹಾನುಭೂತಿ ತೋರಿಸಿದ್ದರು. ಇತ್ತೀಚಿಗೆ ಆರೇಳು ಮನೆಯವರನ್ನು ಕೂಡಿಸಿಕೊಂಡು ಬಸವರಾಜ 'ಪಾರ್ಟಿ' ಕಟ್ಟಿರುವುದು ಅವರಿಗೂ ಗೊತ್ತಿತ್ತು.

"ಇಲ್ಲ, ನಾನು ಬರುವುದಿಲ್ಲ. ಯಾಕೆ ಅಂತ ಹೇಳಿದರೆ ಮಾತ್ರ ಬರುತ್ತೇನೆ" ಎಂದು ಯೋಚಿಸಿ ಅವರು ಹೇಳಿದರು.

"ಅವನೇ ಆ ಏಲೇಶನ ವಿಚಾರದಲ್ಲಿ ಎಲ್ಲ ಜನ ಕೂಡಿದಾರೆ"

"ಯಾರ್ಯಾರು ಕೂಡಿದಾರೆ ಹೇಳು?"

ಆ ಧುರೀಣ ಆರೇಳು ಮನೆಯವರ ಹೆಸರು ಹೆಸರಿದ.

"ಹಂಗಲ್ಲಾ ಸ್ವಾಮಿ, ನಾವು ಶಿಷ್ಯಾರು ಕರೆದರೆ ನೀವ್ಯಾಕೆ ಬರಂಗಿಲ್ಲ...."

"ನೀನು ಶಿಷ್ಯ, ನಾನು ಗುರು. ಹೌದೋ ಅಲ್ಲೋ?"

"ಹೌದು "

"ನಾನು ನನ್ನ ಮನೆಗೆ ಕರೆಯುತ್ತೇನೆ. ನೀವೇ ಎಲ್ಲರೂ ಇಲ್ಲಿಗೆ ಬನ್ನಿ"

"ನಾವು ಬರೋದಿಲ್ಲ."

"ಹಾಗಾದರೆ ನಾನೂ ಬರೋದಿಲ್ಲ ಆ ಸ್ಥಳಕ್ಕೆ" ಎಂದು ರೇಗಿದ ಧ್ವನಿಯಲ್ಲಿ ಶಿವಣ್ಣಯ್ಯ ಹೇಳಿದರು. ಮರುಮಾತಾಡದೆ ನಿಂಗಪ್ಪ ಹೊರಟು ಹೋದ. ಆರೇಳು ಮನೆಯವರು ಬಸವರಾಜನ ಮನೆಯಲ್ಲಿ

ಕುಳಿತುಕೊಂಡಿದ್ದರು. ನಿಂಗಪ್ಪ ಅವರ ಬಳಿ ಬಂದು ವರದಿವೊಪ್ಪಿಸಿದ. ಶಿವಣ್ಣಯ್ಯ ಬರುವುದಿಲ್ಲವೆಂಬ ಮಾತನ್ನು ಕೇಳಿದ ಬಸವರಾಜ ಬಿಸಿಯಾದ.

"ಸಿದ್ದಪ್ಪ, ಅವರ ಈ ಹಮ್ಮು ಮುರಿಯಬೇಕಾದರೆ ನೀನೆ ಸೈ"

"ಹೌದು, ನೀವೇನಾದ್ರೂ ಅನ್ರಿ, ನಾ ತಲೆ ಒಡೆದುಬಿಡ್ತೇನಿ. ಅವರು ಸ್ವಾಮ್ಯಾರಾದ್ರೆ ನಂಗೇನು ?"

"ನ್ಯಾಯಕ್ಕೆ ಏನು ನಿಂಗಪ್ಪ, ಅವನು ರಾಜನಾಗಿರಲಿ" ಎಂದ ಬಸವರಾಜ. ಆದರೆ ನಿಂಗಪ್ಪ ಏನನ್ನೋ ಧ್ಯಾನಿಸಿ ಹೇಳಿದ—

"ಹಾಗೆ ದುಡ್ಕಬ್ಯಾಡ ಸಿದ್ವಣ್ಣ. ನಾವೆಲ್ಲಾ ಎಂಟು ಮನೇರು ಏನು ಮಾಡೇವು. ಅವ್ರ ಕಡೆಗೆ ಭಾಳಜನ ಅದಾರೆ. ಅಂಗೆಲ್ಲಾ ಓಗಬಾರ್ದು."

"ಮತ್ತೇನು ಮಾಡಬೇಕಂತಿ ?" ಎಂದು ಹೊರಡನುವಾದ ಸಿದ್ದಪ್ಪ.

"ಎಲ್ಲಿಗೆ ಒರಟ್ಯೋ ?" ಎಂದ ವೀರಪ್ಪ.

"ಏ! ಇಸ್ಕೂಲು ಮೈದಾನ್ಕೆ ಓಗೋನು ಅಲ್ಲೇ ಚಂದಪ್ಪನ ಬೆಳ್ಕು ಮಾತಾಡಾಕೆ ಚೆಲೊ ಇರ್ತೈತಿ. ಹೋಗಾನಾ ?"

ಎಲ್ಲರೂ ಮಾಧ್ಯಮಿಕಶಾಲೆಯ ಮೈದಾನಕ್ಕೆ ಹೋಗಿ ಬೆಳುದಿಂಗಳ ಬೆಳಕಿನಲ್ಲಿ ಕುಳಿತುಕೊಂಡರು. ಬಸವರಾಜನ ದಾಯಾದಿ ಮತ್ಸರ ಒರತಿಯ ಪ್ರಕಾರ ಚಿಮ್ಮಿ ಬರುತ್ತಿತ್ತು.

"ಈಗೇನಂದೆ ನಿಂಗಣ್ಣ ?" ಎಂದ ಬಸವರಾಜ.

"ಈಗೇನಂದೆ, ನ್ವಾಮ್ಯಾರು ಕಾಫಿ ಕುಡ್ಸಿಬೇಕಂತೆ" ಎಂದು ಸಿದ್ದಪ್ಪ ಕೊಂಕು ನುಡಿದ. ಪುನಃ ಅಲ್ಲಿಂದ ಅವರು ಗಣೇಶ ವಿಲಾಸಕ್ಕೆ ಹೋಗಿ ಬಂದರು. ನಿಂಗಪ್ಪ ತಿರುಗಿ ಮಾತು ತೆಗೆದು—

ಸ್ವಾಮಿ! ಅವ್ರೊಬ್ಬ ಜಂಗಮ್ರು. ಅವರನ್ನ ಹೊಡೆದು ನಾವ್ಯಾವ ಪಾಪಕ್ಕೆ ಹೋಗೋನು ನಾವೆಂಟೂ ಮನೆಯೋರು ನಿಮ್ಮನ್ನೇ ದೇವ್ರೂಂತ ತಿಳ್ಕೊಳ್ಳತೇವಿ. ಬಿನ್ನ ಬಿಡುಗಡೆ ಎಲ್ಲಾನು ನೀವೇ ತೀರಿಸ್ಬೇಕು" ಎಂದ. ತನ್ನ ಸಮ್ಮತಿ ಸೂಚಿಸಿದ. ಅದಕ್ಕೆ ಎಲ್ಲರೂ ಅಂಗೀಕಾರ ಮಾಡಿದರು. ಅಂತೂ ಶಿವಣ್ಣಯ್ಯನವರ ಮರ್ಯಾದೆ ನಿಂಗಪ್ಪನಿಂದ ಉಳಿಯಿತು. ಇಂತಹ ಕ್ಷುಲ್ಲಕ ವಿಚಾರಗಳಿಗೆ ಬಸವರಾಜ ಎಡೆ

ಗೊಡುತ್ತಿದ್ದ. ಯಾವುದಾದರೂ ರೀತಿಯಿಂದ ಸರಿಯೇ, ಅವನು ಮತ್ಸರವನ್ನು ಸಾಧಿಸಿಕೊಳ್ಳಬೇಕಾಗಿತ್ತು. ಹಾಗೇ ಅವರಿಗೆ ತೊಂದರೆ ಕೊಡುವುದರಲ್ಲಿ ಅವನಿಗೆ ಮೇರೆ ಇಲ್ಲದ ಆನಂದ ಸಿಕ್ಕುತ್ತಿತ್ತು ಆದರೆ ನಿಂಗಪ್ಪ ಅದಕ್ಕೆ ಎಡೆಗೊಡದೆ ಇರುವುದನ್ನು ಕೇಳಿ ಬಸವರಾಜ ಹೃದಯವನ್ನು ಹಿಂಡಿಕೊಂಡ. ಮನಸ್ಸಿನಲ್ಲಿಯೇ ಕಿಡಿಕಿಡಿಯಾದ. ಸಿದ್ದಪ್ಪ, ವೀರಪ್ಪ ಅಂಗೀಕಾರದ ಸಹಿ ಹಾಕಿದ್ದು ತಿಳಿದು, ಆ ಕಿಡಿಗೆ ಹಸುವಿನ ತುಪ್ಪ ಬಿದ್ದಂತಾಯಿತು ಆದರೆ ತಾನು ಅವರ ಪ್ರತಿ ಸಿಡುಕುಗೊಂಡರೆ ತನ್ನ ಉತ್ತಮೋತ್ತಮ ಸ್ಥಾನವಿಲ್ಲದಾಗುತ್ತದೆ. ಅವರ ಆಸೆಯಂತೆ ನಡೆದುಕೊಳ್ಳುವುದೆಂದು ನಿರ್ಧರಿಸಿ ಬಸವರಾಜ ಆ ಪ್ರಕರಣವನ್ನು ಅಲ್ಲಿಗೇ ಕೈಬಿಟ್ಟ.

ಮಾರನೆಯದಿನ ಬಸವರಾಜ ತನ್ನ ಪ್ರೇಮದ ರಾಣಿ ಶಶಿಕಲೆಯ ಮನೆಗೆ ಹೋದ. ಶಶಿಕಲೆ ಕಸೂತಿ ಹಾಕುತ್ತಾ ಕುಳಿತಿದ್ದಳು. ಇವನನ್ನು ನೋಡಿ ಆಕೆ ತಾಂಬೂಲದ ತಾಟನ್ನು ಎದುರಿಗಿಟ್ಟು "ಯಾಕೆ ರಾಜರು ಬಡವರ ಮೇಲೆ ದಯೆ ತೋರಿಸಿ ಬಹಳ ದೂರ ಬಂದರು?" ಎಂದಳು. ಬಸವರಾಜ ಆರಾಮಾಸನದ ಮೇಲೆ ಹೋಗಿ ಕುಳಿತುಕೊಂಡ. ಶಶಿಕಲೆ ಕರಿಯುವ್ವನನ್ನು ಕೂಗಿದಳು. ಕರಿಯುವ್ವ ಅವಳಮ್ಮ. ಶಶಿಕಲೆಯನ್ನು ಮುದ್ದುಮುದ್ದಾಗಿ ಸಾಕಿಸಲಹಿದವಳು.

"ಏನೇ ಶಶಿ, ಕರದೆಯೇನೆ?" ಎಂದು ಹೊರಗಡೆಯಿಂದ ಕೂಗಿದಳು.

"ಅಮ್ಮಾ, ಹೋಟೆಲ್‌ನಿಂದ ದೋಸೆ ತರಿಸೆ. ನಮ್ಮ ರಾಜರು ದುಡ್ಡು ಕೊಡ್ತಾರೆ" ಎಂದು ಆಕೆ ಪ್ರಣಯದ ವಿಚಿತ್ರ ಚೇಷ್ಟೆಗಳನ್ನು ಮಾಡಿ ಅವನ ಮನಸ್ಸನ್ನು ಸೆಳೆದಳು. ಅವಳ ಮಾತು ಇನ್ನೂ ಮುಗಿದಿರಲಿಲ್ಲ. ಬಸವರಾಜ ಐದು ರೂಪಾಯಿನ ನೋಟನ್ನು ಒಗೆದು ತೆಗೆದುಕೊಳ್ಳುವುದಕ್ಕೆ ಹೇಳಿದ.

"ಊ ...ನೀವು ಎಷ್ಟು ದಿನದಿಂದ ಬಂದಿದ್ದೇ ಇಲ್ಲ. ನನ್ನ ಜೀವ ನಿಮ್ಮನ್ನು ನೋಡದೆ ಬಳಲಿತು........"

"ಪ್ರೇಮ ಎಂಬೋದು ದೊಡ್ಡದು. ನಿಷ್ಕಳಂಕ ಪ್ರೇಮ ಇದ್ದರೆ ಹಾಗೆಯೇ ಶಶಿಪ್ರೇಮ."

"ಓಹೋ! ಇಂದು ಹೊಸ ನಾಮಕರಣ. ಅದರ ಜ್ಞಾಪಕಾರ್ಥ

ವಾಗಿ ? ..."

"ಅದರ ಜ್ಞಾಪಕಾರ್ಥವಾಗಿ ಇವು" ಎಂದು ಖಾರ, ಮೈಸೂರು ಪಾಕ, ಪೊಟ್ಟಣಗಳನ್ನು ಬಿಚ್ಚಿ ಶಶಿಕಲೆಯ ಕೈಯಲ್ಲಿ ಬಸವರಾಜ ಕೊಟ್ಟ. ಮತ್ತೆ ಅವನೇ ಹೇಳಿದ :

"ನಾನೀಗ ನಿನ್ನ ಸಾಹಚರ್ಯದಿಂದ ಜೇನಿನಲ್ಲಿ ಬಿದ್ದ ನೊಣದಂತಾಗಿದೇನೆ. ಒಂದೇ ಮಾತಿನಲ್ಲಿ ನುಡಿಯಲೆಂದರೆ ಭೂತಣ್ಣನ ಸಂಗದಿಂದ ಭಾವುಕನಾಗುತ್ತ ನಡೆದಿರುವೆ. ನಿನ್ನೀಮರುಳು ಕವಿಯುವ ಮಾತುಗಳು ಬೇಡ. ಆದರೆ ಶಶಿಕಲಾ! ನನ್ನ ಪ್ರೀತಿಯ ಹೆಗ್ಗುರುತಾಗಿ ನೀನು ಒಂದು ಕೆಲಸ ನಡೆಯಿಸಿಕೊಡಬೇಕು."

"ಹ್ಞ ... ಹ್ಞ... ಹ್ಞ" ಎಂದು ಆಕೆ ಹಾರ್ಮೋನಿಯಂ ನಿನಾದದಂತೆ ಸ್ವರ ಎಳೆದಳು.

"ಚಕ್ರಪಾಣಿ ಇಲ್ಲಿಗೆ ಬರುವ ಅಭ್ಯಾಸ ಇಟ್ಟುಕೊಂಡಿರುವುದು ಸರಿಯಷ್ಟೆ ?"

"ಹೌದು, ನಿತ್ಯ ಬರುತ್ತಾರೆ."

ಚಕ್ರಪಾಣಿ ನಿತ್ಯ ಬರುತ್ತಾನೆಂತ ಕೇಳಿ ಬಸವರಾಜನ ಮುಖ ಪ್ರಫುಲ್ಲವಾಯಿತು. ಸಿಗರೇಟಿನ ತುಂಡನ್ನು ಕಾಫಿಯ ಲೋಟದಲ್ಲಿ ಒಗೆದು ಅದನ್ನು ದೂರ ಸರಿಸಿದ. ಮೇಜಿನ ಮೇಲಿದ್ದ ಸಿನಿಮಾ ಪತ್ರಿಕೆಯೊಂದನ್ನು ಕೈಯಲ್ಲಿ ತೆಗೆದುಕೊಂಡು

"ಶಶಿಪ್ರೇಮಾ, ನನಗೆ ಇವೊತ್ತು ಬಹಳ ಸಂತೋಷವಾಗಿದೆ. ಕೋಟಿನ ಜೇಬಿನಲ್ಲಿ ನಿನಗೆ ಬೇಕಾದಷ್ಟು ದುಡ್ಡು ತೊಗೊ" ಎಂದು ಅವಳಿಗೆ ಸರ್ವ ಸ್ವಾತಂತ್ರ್ಯಕೊಟ್ಟ.

"ನಿಜವಾಗಲೂ....ನಿಜವಾಗಲೂ ಇದೆಯೆ ದುಡ್ಡು!" ಎಂದು ಆಕೆ ಕಸೂತಿಯ ಬಟ್ಟೆಯನ್ನು ದೂರ ಬಿಸುಟು, ಕೋಟಿನ ಜೇಬಿನಲ್ಲಿಯ ಪಾಕೀಟನ್ನು ತೆಗೆದಳು. ಅಲ್ಲಿ ಹತ್ತು ರೂಪಾಯಿನ ಹತ್ತು ನೋಟುಗಳಿದ್ದವು! ತನ್ನ ಬೆಟ್ಟಿಗೆ ಉಗುಳಿ ಹಚ್ಚಿ, ಎರಡು ಮೂರು ಬಾರಿ ಆಕೆ ಅವನನ್ನು ಎಣಿಸಿದಳು. ಸರಿಯಾಗಿ ನೂರು ರೂಪಾಯಿಗಳಿದ್ದವು. ಬಸವರಾಜ ಮುಗುಳ್ನಗುತ್ತಾ ಹೇಳಿದ:

"ಶಶೀs.....ಏ ಶಶೀ....ಎಲ್ಲಾ ತೆಗೆದುಕೋಬೇಡ. ಜೀವನಾಂಶಕ್ಕೆ

ಒಂದಿಷ್ಟು ಬಿಡೆ."

"ಎಷ್ಟು ಮಡಗಲಿ?"

"ಹತ್ತಿರ ಎರಡನ್ನು ಇಡು. ಕೆಲಸವಾದಮೇಲೆ ಮತ್ತೆ ಇನ್ನೂರು ರೂಪಾಯಿ ಕೊಡುತ್ತೇನೆ"

"ಇನ್ನೂರು ರೂಪಾಯಿ, ಕೆಲಸವಾದ ಮೇಲೆ! ಯಾವ ಕೆಲಸ?...." ಎಂದಳು.

"ಆ ಚಕ್ರಪಾಣಿ ಬರುತ್ತಾನಲ್ಲಾ ..."

"ಹೂಂ, ಬರುತ್ತಾನೆ"

ಚಕ್ರಪಾಣಿಯ ಹೆಸರು ಕೇಳಿ ಆಕೆಗೆ ತುಸು ಆಶ್ಚರ್ಯವಾಯಿತು. ತನ್ನ ಕೆಲಸಕ್ಕೂ ಚಕ್ರಪಾಣಿಗೂ ಏನು ಸಂಬಂಧ ಎಂದುಕೊಂಡಳು ಶಶಿ.

"ಬಂದೆ ಬಸವರಾಜ್! ಸ್ವಲ್ಪ ಗಾಳಿಯಾದರೂ ಬರಲಿ" ಎನ್ನುತ್ತಾ ಆಕೆ ಪಶ್ಚಿಮ ದಿಕ್ಕಿನ ಕಿಟಕಿಯನ್ನು ತೆಗೆದು ಬಂದು ತಾಂಬೂಲ ಕೊಟ್ಟಳು.

"ಚಕ್ರಪಾಣಿ ಹೇರ್‌ಕಟಿಂಗ್ ಸಲೂನಿಗೆ ಗುರುಮೂರ್ತಿ ಕ್ಷೌರಕ್ಕೆ ಬರುತ್ತಾನೆ. ಬಂದಾಗ ಅವನ ಉಗುರು, ಒಂದಿಷ್ಟು ಕೂದಲು ತೆಗೆದಿಡುವುದಕ್ಕೆ ಚಕ್ರಪಾಣಿಗೆ ಒಪ್ಪಿಸಬೇಕು, ಅಷ್ಟೆ ..."

"ಅಯ್ಯೋ! ಇಷ್ಟೇನೆ ..." ಎಂದು ಶಶಿಕಲೆ ಬೊಟ್ಟು ಕಚ್ಚಿದಳು.

"ಹೂ, ಅಷ್ಟೆ. ಅಷ್ಟು ಮಾಡಿದರೆ ಇನ್ನೊಂದು ನೂರು ರೂಪಾಯಿ" ಎಂದು ಅವನು ತುಟಿ ಕಚ್ಚಿಕೊಂಡ.

"ಆ ..ಅ ..ಆ ...ಏನಂದಿರೀ!"

"ಇನ್ನೊಂದು ನೂರು ರೂಪಾಯಿ ಕೊಡ್ತೇನೀ ಅಂದೆ"

"ಹಾಗಾದರೆ ಇನ್ನೂರು ಹೋಯಿತು. ನಾನು ಹೇಳಿ ತರಸಲ್ಲ" ಎಂದಳು ಶಶಿ ಹುಸಿ ಮುನಿಸನ್ನು ನಟಿಸುತ್ತ.

"ಜಗನ್ಮೋಹಿನಿ, ನೀನು ಕೆಲಸ ಮೊದಲು ನೆರವೇರಿಸಿಕೊಡು ಅಲ್ಲಾ, ನಿನ್ನ ಹತ್ತಿರ ಅಷ್ಟು ಅಪನಂಬಿಕೆಯಿದ್ದರೆ ಎಂಬತ್ತು ರೂಪಾಯಿ ಕೊಡುತ್ತಿದ್ದೆನೆ" ಎಂದ ಬಸವರಾಜನ ಮಾತಿನ ಜಾಡನ್ನು ತಪ್ಪಿಸಲು.

"ಅವರೀಗ ಬರೋ ಹೊತ್ತಾಗಿದೆ. ಆ....ಅಂದ ಹಾಗೆ ಟೈಮೆಷ್ಟು?"

"ಮೂರು ಘಂಟೆ ಇಪ್ಪತ್ತೆರಡು ನಿಮಿಷ ಆರೂವರೆ ಸೆಕೆಂಡು"

ಎಂದು ಬಸವರಾಜ್ ರಾಗವಾಗಿ ಹೇಳಿದ.

"ವೆರಿಗುಡ್! ಇಂಗ್ಲಿಷ್ ಟ್ರೈವ್ ವಾಲಿಸ್ಟೀರಿ ನೀವು. ಹಾಗಿರಬೇಕು" ಕೊಕ್ಕರಿಸಿ ನಕ್ಕು ಎಂದಳು ಶಶಿ. ಶಶಿಕಲೆ ಒಂದೇ ಮಾತಿಗೆ ಒಪ್ಪಿದ್ದು ಬಸವರಾಜನಿಗೆ ಸ್ವರ್ಗಸುಖವನ್ನುಂಟು ಮಾಡಿತ್ತು. ತಿಂಡಿ ತಿಂದು ಹೊಟ್ಟೆಯೂ ತುಂಬಿತ್ತು. ಕಪ್ಪೆನುಂಗಿದ ನಾಗರಹಾವಿನಂತೆ ದೇಹ ಭಾರವಾಗಿತ್ತು. "ನಾನಿನ್ನು ಬರುವೆ, ಹೇಳಿದ ಮಾತು ಜ್ಞಾಪಕದಲ್ಲಿರಲಿ" ಎಂದು ಏನನ್ನೋ ಯೋಚಿಸುತ್ತ ಹೊರಟ.

ಬಸವರಾಜನಿಗೆ ಎಲ್ಲಿಲ್ಲದ ಸಂತಸವಾಗಿತ್ತು. ತನ್ನ ಕಾರ್ಯಸಾಧನೆ ಶೀಘ್ರವಾಗುವುದೆಂದು ಅವನು ಹರ್ಷಗೊಂಡಿದ್ದ. ನೇರವಾಗಿ ಮನೆಗೆ ಹೋದ. ಅವರ ಭಾವ ವಿಶ್ವಾರಾಧ್ಯ ಬಂದಿದ್ದ. ವಿಶ್ವಾರಾಧ್ಯ, ಅವನ ಅಕ್ಕ ಶಾಂತಳ ಗಂಡ. ಶಾಂತ ಈಗಿರಲಿಲ್ಲ. ಆಕೆ ಒಂದು ಕೂಸನ್ನು ಹೆತ್ತು ತೀರಿಹೋಗಿದ್ದಳು. ಆದರೂ ಆ ಸಂಬಂಧ ಹೇಗೆ ಕಡಿದೀತು? ವಿಶ್ವಾರಾಧ್ಯ ಬಸವರಾಜರಲ್ಲಿ ಒಡನಾಟ ಇದ್ದೇ ಇತ್ತು.

"ಯಾವಾಗ ಬಂದರು ಮಾವ ಅವರು?" ಎಂದ.

"ಮಧ್ಯಾಹ್ನ ಒಂದು ಘಂಟೆ ಬಸ್ಸಿಗೆ. ಯಾಕೋ ಅಳಿಯಂದಿರು ಊಟಮಾಡಿ ಹೋದವರು ಬರಲಿಲ್ಲಾ—ಎಂದು ಕಾದು ಕಾದು ನಾಕಾಯಿತು."

"ಸ್ವಲ್ಪ ಕೆಲಸ ಇತ್ತು, ಹೋಗಿದ್ದೆ"

"ನೀನು, ಹೇಳಿದ ವಿಚಾರ ಏನು ಮಾಡಿದೆ?...." ಎಂದ ವಿಶ್ವಾರಾಧ್ಯ.

"ಅದನ್ನು ಅಲ್ಲಿನ ರೈತರಿಗೆ ಹೇಳಿದೇನೆ. ಆದರೂ ಹಣ ಚೆಲ್ಲಬೇಕು. ಒಂದು ಕೆಲಸವಾಗಬೇಕಾದರೆ ದುಡ್ಡು ಚೆಲ್ಲಬೇಕು."

"ಆಗಲಿ, ನೂರಾರು ರೂಪಾಯಿ ಕಳೆದರೂ ನಮಗೆ ನಮ್ಮ ಹೊಲ ಹಿಂದಕ್ಕೆ ಬರಬೇಕು" ಎಂದ ವಿಶ್ವಾರಾಧ್ಯ. ವಿಶ್ವಾರಾಧ್ಯನ ತಂದೆಯವರು ಈಗ ಹತ್ತು ವರ್ಷಗಳ ಹಿಂದೆ ಹೊಲವನ್ನು ಶಿವಣ್ಣಯ್ಯನವರಿಗೆ ಮಾರಿದ್ದರು. ಮನೆ ತುಂಬ ಮಕ್ಕಳು; ಒಂದು ಬಿಡಿಗಾಸು ಹೊರಗಿನಿಂದ ಅವರಿಗೆ ಬರುವಂತಿದ್ದಿಲ್ಲ. ಬಡತನದ ಬೆಂಕಿಯಲ್ಲಿ ಅವರು ಬಳಲುತ್ತಿದ್ದರು. ಆಗ ಸಾಲಗಾರರ ಕಾಟ ಬೇರೆ ಸುರುವಾಯಿತು. ನಿರ್ವಾಹವಿಲ್ಲದೆ ಹೊಲ

ಗಳನ್ನು ಮಾರುವ ಪ್ರಸಂಗ ಒದಗಿ ಬಂತು. ಬೇರೆಯವರಿಗೆ ಹೊಲಗಳನ್ನೇಕೆ ಕೊಡಬೇಕೆಂದು ತಮ್ಮ ಅಳಿಯನಿಗೇ ಮಾರಿದ್ದರು. ಈಗ ಆ ಹೊಲಗಳ ಧಾರಣೆ ಮೊದಲಿನಕ್ಕಿಂತ ಐದು ಆರರಷ್ಟು ಹೆಚ್ಚಾಗಿತ್ತು. ವಿಶ್ವಾರಾಧ್ಯನ ಕಣ್ಣೂ ಆದರ ಮೇಲೆ ಬಿತ್ತು. ತಾಲ್ಲೂಕು ಆಫೀಸಿನ ಗುಮಾಸ್ತೆ ಮಾಡಿಕೊಂಡು ನಾಲ್ಕಾರು ಕಾಸು ಕೂಡಿ ಹಾಕಿದ್ದ. ಹಿಂದಿನ ತಮ್ಮ ಹೊಲಗಳನ್ನು ಆಗಿನ ಬೆಲೆಗೇ ಶಿವಣ್ಣಯ್ಯನವರಿಂದ ಕಿತ್ತುಕೊಳ್ಳಬೇಕೆಂಬ ದುರ್ಭಾವನೆ ಅವನಲ್ಲಿ ಹುಟ್ಟಿತ್ತು.

ಬಾಲ್ಯದಿಂದ ಹಿಡಿದು ಎಸ್.ಎಸ್.ಎಲ್.ಸಿ. ಪರೀಕ್ಷೆ ತೇರ್ಗಡೆಯಾಗುವವರೆವಿಗೆ ಅವರ ಮನೆಯ ಅನ್ನ ಉಂಡು ಬೆಳೆದು ವಿದ್ಯಾವಂತನಾಗಿದ್ದೇನೆ ಎಂಬ ಕೃತಜ್ಞತೆಯೂ ಸಹ ಹೊಲದಾಸೆಯಿಂದ ಅವನಲ್ಲಿ ಅಳಿಸಿಹೋಗಿತ್ತು. ಮೊನ್ನೆ ಹೆಣ್ಣುಕೊಟ್ಟ ಬಸವರಾಜ ಹತ್ತಿರದ ನೆಂಟನಾಗಿದ್ದ. ಅವನ ಬಳಿ ಸಂದರ್ಭಾನುಸಾರ ತನ್ನ ಕಷ್ಟಸುಖಗಳನ್ನು ತೋಡಿಕೊಳ್ಳುವ ಪರಿವಾರವನ್ನಿಟ್ಟಿದ್ದ. ಈ ತನ್ನ ಕುಯುಕ್ತಿಯನ್ನು ಬಸವರಾಜನಿಗೆ ಹೇಳಿದಾಗ ಶಿವಣ್ಣಯ್ಯನವರ ಶ್ರೇಷ್ಠದಾಯಾದಿ ಅದಕ್ಕೆ ಪ್ರೋತ್ಸಾಹಕೊಟ್ಟು, ಈ ಬಗ್ಗೆ ಇನ್ನೊಮ್ಮೆ ಕಾಣಲು ಹೇಳಿದ್ದ.

"ನಾನೀಗಾಗಲೆ ಅಲ್ಲಿ ರೈತರಿಗೆ ಹೇಳಿದೇನೆ. ಅವರ ಹೊಲ ನೀವು ಮಾಡೋದು ಬಿಟ್ಟುಬಿಡಿರಿ. ನೀವು ಬಿಡದಿದ್ದರೆ ನಾವು ಬಂದು ತರುಬಬೇಕಾಗುತ್ತದೆ."

"ಛಿ! ಆ ಹೊಲ ಮಾಡುವ ರೈತರು ಏನು ಮಾಡಬಲ್ಲರು ಬಸವರಾಜ? ಇವತ್ತು ಅವರಿಂದ ಬಿಡಿಸಿ ಮತ್ತೂ ಅವರಿಗೆ ಕೊಟ್ಟರೆ, ನೀ ಹೇಳಿದಂಗೂ ಕೇಳ್ತಾರೆ."

"ಅದೂ ನಿಜವೆ. ಮುಂಚೆ ಕೆಂಚನಹಳ್ಳಿಗೆ ಹೋಗಿ ಪಂಚಾಯಿತಿ ಹಾಕಿಸಲಿಕ್ಕೆ ಪ್ರಯತ್ನಿಸುವುದು. ಅದಕ್ಕೂ ನಮ್ಮ ಕಕ್ಕ ಎಂಬೋನು ಮಣಿಯದಿದ್ದರೆ, ಅಡ್ಡಿಮಾಡುವುದು ಇದ್ದೇ ಇದೆಯಲ್ಲ."

"ಹಾಗೆ ಮಾಡಿರಿ. ಆದರೆ ಬಸವ....ಹುಷಾರಿಯಿಂದ ಕೆಲಸ ಮಾಡಿರಿ. ಮೊನ್ನೆ ಯಾರ ಮುಂದೋ ರೇಣುಕ ಹೇಳುತ್ತಿದ್ದ: "ನಮ್ಮ ದೊಡ್ಡಪ್ಪನ ಮಗ ಎಂಬೋನು ನಮ್ಮ ವಿರುದ್ಧ ಪಾರ್ಟಿ ಕಟ್ಟಲು ಓಡಾಡುವಾಗ, ಬೇರೆಯವರು ಏನು ಮಾಡದಿರುತ್ತಾರೆ ಎಂದು." ಹಾಗೆ

ಪಬ್ಲಿಕ್ಕಾಗಿ ಇಂಥವುಗಳಲ್ಲಿ ಭಾಗವಹಿಸಲಿಕ್ಕೆ ಹೋಗಬೇಡ" ಎಂದರು ಚಂದ್ರಶೇಖರಯ್ಯ ಮೀಸೆಯನ್ನು ತಿರುವುತ್ತ.

"ಓಹೋ! ಗೊತ್ತಾದರೆ ನಮಗೇನು ಮಾಡ್ತಾನೆ ಬಿಡು. ಮೊನ್ನೆ ಜೈಲಿಗೆ ಹೋಗಿ ಬಂದಿದ್ದು ಸಾಕಾಗಿಲ್ಲೇನೊ?!"

ವಿಶ್ವಾರಾಧ್ಯನಿಗೆ ರೇಣುಕ ಅದೇಕೆ ಜೈಲಿಗೆ ಹೋಗಿ ಬಂದನೆಂದು ದಿಗ್ಭ್ರಮೆಯೂ, ಸ್ವಲ್ಪ ಸಂತೋಷವೂ ಆಯಿತು. ಆಶ್ಚರ್ಯದ ಧ್ವನಿಯಲ್ಲಿ ಆಗ ಕೇಳಿದ.

ಬಸವರಾಜ ಮೊದಲಿನಿಂದ ಹಿಡಿದು ಕೊನೆಯವರೆವಿಗೆ ಸಾದ್ಯಂತ ಆ ಕಥೆಯನ್ನು ವಿವರಿಸಿ ಹೇಳಿದ. ಗುರುಮೂರ್ತಿಯ ಉಪಾಧ್ಯಾಯ ವೃತ್ತಿಯ ಬಗ್ಗೆ ಅವರು ಟೀಕಿಸಿ ನಕ್ಕರು. ಬಸವರಾಜ ತಾನೇ ಒಳಕ್ಕೆ ಹೋಗಿ ಅಡುಗೆಮನೆಯಿಂದ ಕಾಫಿ ತಂದಿಟ್ಟ.

"ಮಾಲಿನಿ ಕರೆದುಕೊಂಡುಬಂದಿದಾರೆಯೆ?" ಎಂದು ಕಾಫಿ ಆರಿಸುತ್ತ ಕೇಳಿದ.

"ಓಹೊ! ಮಾಲಿನಿ ಬಂದ ಹಾಗೆಯೇ .. ಇವರು ನೋಡಿದ ಹಾಗೆಯೇ"

"ಯಾಕೆ?"

"ಭಾವ, ಇವರ ಬುದ್ಧಿಗೆ ಯಾರು ಸೇರುತ್ತಾರೆ? ಒಳ್ಳೇ ಗೂಗಿಗಳಿದ್ದ ಹಾಗೆ"

"ಯಾಕೆ ಅಲ್ಲಿಯೂ ಸೆಟಗೊಂಡರೆ?"

"ಭಾವ, ಇವರ ಬುದ್ಧಿಗೆ ಒಬ್ಬರೂ ಸೇರುವುದಿಲ್ಲ. ತಿಳಿದು ಬಿಡು" ಎಂದು ಉಮಾಪತಿಯ ಕಥೆಯನ್ನು ವಿಶದವಾಗಿ ಹೇಳಿದ.

"ಹಾಗಾದರೆ ಕೆಂಚನಹಳ್ಳಿಗೆ ಯಾವಾಗ ಹೋಗೋಣ?"

"ಅದೇನು ಮಹಾ ದೂರಿದೆ. ಬಿಸಿಲಿಳಿದ ಮೇಲೆ ಹೋಗಿ ಬರೋಣಂತೆ"

"ಹಾಗೇ ಆಗಲಿ"

"ನಾನು ಸ್ವಲ್ಪ ಹೊತ್ತು ಮಲಗಿಕೊಳ್ಳುತ್ತೇನೆ" ಎಂದು ಹಾಸಿಗೆ ಉರುಳಿಸಿ ಬಸವರಾಜ ಮಲಗಿಕೊಂಡ. ಆ ಮೆತ್ತೆಯ ಹಾಸಿಗೆ ಶಶಿಕ

ಲೆಯ ಮನೆಯಲ್ಲಿನ ಹೂವಿನ ಹಾಸಿಗೆಯನ್ನು ಜ್ಞಾಪಕಕ್ಕೆ ತರುತ್ತಿತ್ತು. ಜೀವನ ಒಂದು ಆಟ. ಇದರಲ್ಲಿರುವ ಜನಗಳೆಲ್ಲರೂ ಆಟಗಾರರು ಎಂದವನಿಗೆ ಅನ್ನಿಸಿತ್ತು. ಜೀವನ ಅವನಿಗೆ ಹೂವಿನ ಹಾಸಿಗೆಯಾಗಿತ್ತು.

ರೇಣುಕಪ್ರಸಾದ ಜೈಲಿಗೆ ಹೋಗಿ ಬಂದಂದಿನಿಂದ ಕಮ್ಯೂನಿಸ್ಟ್ ಪಕ್ಷದ ಮಾರ್ಕ್ಸ್ ತತ್ವಗಳನ್ನು ಹೆಚ್ಚು ಆಸ್ಥೆವಹಿಸಿ ಓದುತ್ತಿದ್ದ. ಊರಿನಲ್ಲಿ ಆ ಪಾರ್ಟಿಯ ಬಗ್ಗೆ ಹೆಚ್ಚಿನ ಚಟುವಟಿಕೆಗಳಿಲ್ಲದಿದ್ದರಿಂದ ಯಾವುದ ರಲ್ಲೂ ಅವನು ಭಾಗವಹಿಸುತ್ತಿದ್ದಿಲ್ಲ. ಕಾಮ್ರೇಡ್ ತಿಮ್ಮಣ್ಣ, ರುದ್ರಪ್ಪ, ಗುರುರಾಜಾರಾವ್ ಮುಂತಾದವರನ್ನು ಕಂಡರೆ ಯಾವಾಗಲೂ ರೇಣುಕ ಮುಗುಳ್ನಗುತ್ತಿದ್ದ. ಈಗ ಅವನು ಜೀವನವನ್ನು ಗಡಿಯಾರದಂತೆ ಸಾಗಿಸುತ್ತಿದ್ದ.

ರೇಣುಕ ಪ್ರಾತಃಕಾಲ ಎದ್ದು ಸ್ನಾನ ತಿಂಡಿಯಾದಮೇಲೆ ಸೈಕಲ್ ಹತ್ತಿ ರಾಮತೀರ್ಥದ ಪ್ರಾಥಮಿಕಶಾಲೆಗೆ ಹೋಗುತ್ತಿದ್ದ. ರಾಮತೀರ್ಥ ಹರಿಹರದಿಂದ ಐದು ಮೈಲಿಗಳ ದೂರದಲ್ಲಿತ್ತು. ಮಧ್ಯಾಹ್ನದ ಒಪ್ಪೊತ್ತು ಊಟವನ್ನು ಅವನು ಊರಿನ ಪಟೇಲರ ಮನೆಯಲ್ಲಿ ಮಾಡುತ್ತಿದ್ದ. ಅವನು ಕಾದಂಬರಿಗಳನ್ನು ಬೆಳಗಿನ ತರಗತಿಗಳು ಮುಗಿದಮೇಲೆ ಓದು ತ್ತಿದ್ದ. ಗಾರ್ಕಿಯ 'ತಾಯಿ' ಕಾದಂಬರಿ ಮಹತ್ವವಾದ ಪರಿಣಾಮ ಮಾಡಿತು ಅವನಮೇಲೆ. ಪುಸ್ತಕಗಳನ್ನು ಓದುತ್ತಿರುವಾಗ ಯಾರಾದರೂ ಊರಿನವರು ಬಂದರೆ, ನಾಲ್ಕು ಮಾತುಗಳನ್ನು ಅವನು ಸಮಾಧಾನದಿಂದ ಮಾತನಾಡುತ್ತಿದ್ದ. ಊರಿನ ಹಳ್ಳದ ದಂಡೆಯಲ್ಲಿ ಆ ರಮ್ಯತೋಟಗಳ ಮಧ್ಯದಲ್ಲಿ ಕುಳಿತುಕೊಂಡು ಕವನಗಳನ್ನು ಬರೆಯುತ್ತಿದ್ದ. ಅವು 'ಹೊಂಬೆಳಗು' 'ರಶ್ಮಿ' ಪತ್ರಿಕೆಗಳಲ್ಲಿ ಆಗಾಗ ಅಚ್ಚಾಗುತ್ತಿದ್ದವು. ಈಗೀಗ 'ದಿ ಕರ್ಫೆರ್ಸ' 'ಲೈಫ್ ಆಫ್ ಎ ಸೂಪರ್‌ಫ್ಲುಯಸ್ ಮ್ಯಾನ್' ಇತ್ಯಾದಿ ಕೃತಿರತ್ನಗಳೂ ಇವನ ಮನಸ್ಸನ್ನಾಕರ್ಷಿಸಿ ಕ್ರಾಂತಿಯನ್ನೆಬ್ಬಿ ಸಿದವು. ಆಗಾಗ ಊರಬಳಿಯಿರುವ ಗುಡಿಸಿಲುಗಳಬಳಿ ಹೋಗಿ, ಸುತ್ತ ಮುತ್ತಲಿನ ವಾತಾವರಣವನ್ನು ಸ್ವಚ್ಛವಾಗಿಟ್ಟುಕೊಳ್ಳಲು ಜನರನ್ನು ಪ್ರೇರೇಪಿಸುತ್ತಿದ್ದ. ಆದ್ದರಿಂದ ಊರಿನವರು ಇವನ ಬಗೆಗೆಉಜ್ವಲವಾದ ಮರ್ಯಾದೆಯನ್ನಿಟ್ಟುಕೊಂಡಿದ್ದರು. ಸದಾ ಮುಗುಳ್ನಗುತ್ತಾ ಊರಿನ ವರನ್ನು ಮಾತನಾಡಿಸುತ್ತಿರುವ ಆ ಕುಳ್ಳ ಉಪಾಧ್ಯಾಯರನ್ನು ಕಂಡರೆ ಎಲ್ಲರಿಗೂ ಪ್ರೇಮ. ಸೂಳೆಯಕೆರೆ ಹಳ್ಳ ಕಟ್ಟಿದಾಗ ಒಂದೊಂದು ದಿನ

ಅವನು ಊರಿಗೇ ಹೋಗುತ್ತಿರಲಿಲ್ಲ. ಆಗ ಹೋಗದಿದ್ದರೆ ಯಾಕೆ ಬರ ಲಿಲ್ಲವೆಂದು ಊರಿನವರಾರೂ ಕೇಳುತ್ತಿದ್ದಿಲ್ಲ. ಸಮತಾವಾದದ ಬಗ್ಗೆ ಅವನು ಎಷ್ಟೋ ಪುಸ್ತಕಗಳನ್ನು ಓದಿ ತಿಳಿದುಕೊಂಡಿದ್ದ ಆ ತತ್ವದ ಮೇಲೆ ನಿಲ್ಲುವ ರಾಜ್ಯ ಉದಯವಾದರೆ ..ಆಗ? ಬಡವ ಶ್ರೀಮಂತರೆಂಬ ಭೇದಭಾವಗಳು ಅಳಿಯುತ್ತವೆ. ಎಲ್ಲರೂ ಸುಖ ಸಮೃದ್ಧಿಯಿಂದಿರ ಬಹುದು. ಯಾರೂ ಒಂದು ತುಣುಕು ರೊಟ್ಟಿಗಾಗಿ ಕಾದಾಡುವಂತಿಲ್ಲ. ಕಾರ್ಖಾನೆಯ ಜನಗಳ ಕರುಣಾಮಯ ಜೀವನ, ರೈತರ ದುಃಖಮಯ ಜೀವನ, ರೈಲ್ವೆ ಸ್ಟೇಷನ್ನಿನಲ್ಲಿ ಕೂಲಿಮಾಡುವ ಕೂಲಿಗಳ ದುರಂತ ಜೀವ ನದ ಬಗ್ಗೆ ಆಗಾಗ ಅವನು ಯೋಚಿಸುತ್ತಿದ್ದ. ಬಡತನದಲ್ಲಿ ಬಾಳಿ ಮಾಡು ವುದೇನು? ನಿಜವಾಗಲೂ ಆ ತತ್ವಗಳು ಪ್ರಚಲಿತವಾದರೆ ಬಡವರ ಬಾಳು ಹಸನಾಗಬಹುದೆಂದು ಅವನೂ ಅದಕ್ಕೆ ಹೂಗುಟ್ಟುತ್ತಿದ್ದ. ಆವಾಗಲೇ ರೇಣುಕಪ್ರಸಾದ 'ಮಾರ್ದನಿ' ಕಾದಂಬರಿಯನ್ನು ಓದಿ, ರೈಲ್ವೆ ಸ್ಟೇಷನ್ನಿ ನಲ್ಲಿ ಕೂಲಿಮಾಡುವ ಬಡಜನತೆಯ ಕರುಳುಕುಯ್ಯುವ ಹೃದಯವನ್ನರಿತ. ಆಗಾಗ ಹೃದಯವಿದ್ರಾವಕ ಕಥೆಗಳನ್ನು 'ಕ್ರಾಂತಿ' ಪತ್ರಿಕೆಯಲ್ಲಿ ಬರೆಯು ತ್ತಿದ್ದ. ಇತ್ತೀಚಿಗೆ 'ಕ್ರಾಂತಿ' ಪತ್ರಿಕೆಯವರು ನಡೆಸಿದ ಕಥಾ ಸ್ಪರ್ಧೆ ಯಲ್ಲಿ ಅವನ 'ಗೇಣು ಹೊಟ್ಟೆಗಾಗಿ' ಎಂಬ ಕಥೆಗೆ ಮೊದಲ ಬಹುಮಾನ ದೊರೆಕಿತ್ತು. 'ಕ್ರಾಂತಿ'ಯ ಸಂಪಾದಕರು ಅವನ ಭಾವಚಿತ್ರವೊಂದನ್ನು ಪ್ರಕಟಿಸಿ, ಅವನ ಸಂಕ್ಷಿಪ್ತ ಪರಿಚಯವನ್ನೂ ಆ ಕಥೆಯನ್ನೂ ಪ್ರಕಟಿ ಸಿದ್ದರು.

ಇಂತಹ ಹತ್ತಾರು ಕಥೆಗಳು ಅವನ ಪಳಗಿದ ಕೈಯಿಂದ ಆಗಾಗ ಹೊರಬರುತ್ತಿದ್ದವು. ಜೀವನದ ಕಹಿಯುಂಡು, ಅವನು ಹತ್ತಾರು—ಏಕೆ ನೂರಾರು ಅನುಭವಗಳನ್ನು ಪಡೆದಿದ್ದ. ಲೇಖನಿ ಹಿಡಿದು ಕುಳಿತನೆಂದರೆ ಸಾಕು, ಬಿಡುವಿಲ್ಲದೆ ಅವನ ಬರವಣಿಗೆ ಸಾಗುತ್ತಿತ್ತು.

ಈಗವನ ಜೀವನ ಬೆಂದಗಳು ಒಣಗಿದಂತಾಗಿತ್ತು. ದುಡಿತಕ್ಕೆ ತಕ್ಕಂತೆ ಸಂಬಳ ಬರುತ್ತಿತ್ತು, ಮನೆಯ ತಾಪತ್ರಯಗಳು ತುಸು ಕಮ್ಮಿ ಯಾದವು. ಇಲ್ಲದ ಕಲ್ಪನೆಗಳನ್ನೂ ಯೋಚನೆಗಳನ್ನೂ ಮಾಡುತ್ತಿರು ವಾಗ ತಂಗಿ ಮಾಲಿನಿಯ ನೆನಪು ಅವನಿಗೆ ಬರುತ್ತಿತ್ತು. ಇದ್ದೊಬ್ಬ ತಂಗಿ ಬೇಗೆಯಲ್ಲಿ ಬೇಯುತ್ತಿದ್ದಳು. ಒಮ್ಮೆಯಾದರೂ ಆಕೆಯನ್ನು

ನೋಡಿ ಸಂತೃಪ್ತನಾಗಬೇಕೆಂದರೆ ಅವನ ಆಸೆ ಈಡೇರುವಂತಿದ್ದಿಲ್ಲ, ಈಗ ಅವನು ಮಾನವಕೋಟಿಯನ್ನು ಶಪಿಸುತ್ತಿದ್ದ. ಜನಜೀವನದಲ್ಲಿ ಎಂತಹ ಕಟುಗ ಹೃದಯಿಗಳಿರುತ್ತಾರೆಂದು ಈಗೀಗ ಅವನಿಗೆ ಅರಿವಾಗುತ್ತಿತ್ತು. 'ಇನ್ನೊಬ್ಬರ ಮಗಳನ್ನು ತಮ್ಮ ಪುರುಷಾರ್ಥಕ್ಕಾಗಿ ಧಾರೆಯೆರೆಸಿಕೊಂಡು, ಕನ್ಯಾದಾನಮಾಡಿದ ತಂದೆತಾಯಿಗಳನ್ನು ಹೇಗೆ ಬಳಲಿಸುತ್ತಾರೆ. ಇವರು ಯಾರನ್ನೂ ಕೊಲೆಮಾಡಲು ಹೇಸರು! ಇವರು ಮನುಷ್ಯ ಮಾತ್ರದವರಾಗಿ ಹುಟ್ಟಬಾರದು ಏನೋ ತಪ್ಪಿ ಹುಟ್ಟಿರುತ್ತಾರೆ. ಕಾನನ ಪ್ರದೇಶದಲ್ಲಿರುವ ಮೃಗಗಳೂ ಕೂಡ ಹೀಗೆ ಮಾಡಲಾರವು. ಅವಕ್ಕೂ ಕರುಣೆ, ಪ್ರೇಮ, ಕ್ಷಮೆ ಇರುತ್ತವೆ. ಆದರೆ ಇಲ್ಲಿ ಮನುಷ್ಯರೆಂದು ಕೊಳ್ಳುವವರು ದ್ವಿಪಾದ ಪಶುಗಳು ಇವರ ವಂಶಕ್ಕೆ ಧಿಕ್ಕಾರ! ಧಿಕ್ಕಾರ!' ಎಂದು ಹುಚ್ಚನಂತೆ ಹೇಳಿಕೊಂಡು ಹಳ್ಳದ ದಂಡೆಯ ಮರಳನ್ನು ತೂರುತ್ತಿದ್ದ.

ಒಂದು ದಿನ ಇನ್ಸ್ಪೆಕ್ಟರ್ ನರಸಿಂಹಮೂರ್ತಾಚಾರ್ ಬಂದರು. ರೇಣುಕಪ್ರಸಾದ ಎರಡನೆಯ ತರಗತಿಯವರಿಗೆ ಉಕ್ತಲೇಖನ ಹೇಳುತ್ತಿದ್ದ. ಎಲ್ಲರೂ ಇನ್ಸ್ಪೆಕ್ಟರ್ ಬಂದದ್ದನ್ನು ನೋಡಿ ಎದ್ದು ನಿಂತುಕೊಂಡರು. ಆ ಶಾಲೆ ಚಿಕ್ಕದಾಗಿದ್ದು ಹುಡುಗರ ಸಂಖ್ಯೆ ಬಹು ಕಡಮೆಯಿದ್ದುದರಿಂದ ಏಕಮಾತ್ರ ಉಪಾಧ್ಯಾಯನೇ ರೇಣುಕಪ್ರಸಾದ. ಅವನು ಅವರನ್ನು ಆದರದಿಂದ ಬರಮಾಡಿಕೊಂಡ.

"ಏನು ರೇಣುಕಪ್ರಸಾದ? ಯಾವ್ಯಾವ ತರಗತಿಗಳಿಗೆ ಗಣಿತವನ್ನು ಎಲ್ಲಿಯವರೆವಿಗೆ ಹೇಳಿಕೊಟ್ಟಿದ್ದೀರಿ?" ಎಂದರು

"ಎರಡನೆಯ ತರಗತಿಯವರಿಗೆ ಕೂಡಿಕಳೆಯುವ ಲೆಕ್ಕ ಹೇಳಿಕೊಟ್ಟಿದ್ದೇನೆ. ಮೂರನೆಯ ತರಗತಿಯವರಿಗೆ ಗುಣಾಕಾರ ಭಾಗಾಕಾರಗಳನ್ನು ಹೇಳಿದ್ದೇನೆ. ಅವರೂ ನಿಮ್ಮ ದಯೆಯಿಂದ ಚೆನ್ನಾಗಿ ಕಲಿತುಕೊಂಡಿದ್ದಾರೆ" ಎಂದು ನರಸಿಂಹಮೂರ್ತಾಚಾರರ ಮುಖಾವಲೋಕನಮಾಡುತ್ತ ನಿಂತುಕೊಂಡ ಇನ್ಸ್ಪೆಕ್ಟರ್‌ರವರಿಗೆ ತುಂಬಾ ಸಂತೋಷವಾಯಿತು.

"ನಿಮ್ಮ ಮುನ್ನಡೆ ಚೆನ್ನಾಗಿದೆ ಕಣ್ರಿ. ನೀವು ಸಿಂಗಲ್ ಟೀಚರ್ ಆಗಿದ್ದು, ಇಷ್ಟು ಮುಂದುವರಿದಿರುವುದು ತುಂಬಾ ಸಂತೋಷ" ಎಂದು ಪ್ರಶಂಸಿಮಾಡಿ "ಎಲ್ಲಿ ಸಾದಿಲ್ವಾರ್ ಲೆಕ್ಕ ತೋರಿಸಿ?" ಎಂದು ಅದನ್ನೂ ಪರಾಂಬರಿಸಿದರು. ರೇಣುಕಪ್ರಸಾದ ಕೈಕಟ್ಟಿಕೊಂಡು ಹಾಗೆಯೇ ನಿಂತಿದ್ದ.

"ನೀವು ಸಿ.ಆರ್.ಬಿ. ಗೆ ಹಾಕಿ; ಮಾಡಿಸಿಕೊಡೋಣಂತೆ" ಎಂದರು ಇನ್‌ಸ್ಪೆಕ್ಟರು

"ಹಾಕಿದೇನೆ ಸಾರ್. ಹುಡುಗರು ಸರಿಯಾಗಿ ಕಲಿಯಲಿ ಎಂಬೋದು ನನ್ನ ಮುಖ್ಯ ಧ್ಯೇಯ"

"ನೋಡಿ! ನೀವು ತಿಂಗಳ ಸಭೆಗೆ ಸರಿಯಾಗಿ ಬರುತ್ತಿದ್ದೀರಿ. ನಾನೂ ಬೇರೆಕಡೆ ನೋಡಿದೇನೆ. ಸುಮಾರಾಗಿ ಸಿಂಗಲ್ ಟೀಚರ್ ಇರುವ ಭಾಗ ದಲ್ಲಿ ಕಳ್ಳತನಮಾಡುವುದೇ ಜಾಸ್ತಿ. ಸರಿಯಾಗಿ ಬರುವುದಿಲ್ಲರಿ" ಎಂದು ಹುಡುಗರು ಬರೆದಿದ್ದ ಉತ್ತಲೇಖನ ನೋಡಿ "ಈ ಹತ್ತಿ ಯಾಕೆ ಮೇಜಿನ ಮೇಲೆ?" ಎಂದರು.

"'ಹತ್ತಿ'ಯ ಪಾಠ ಮಾಡುತ್ತಿದ್ದೆ. ಹತ್ತಿಯ ಬೀಜ, ಅರಳೆ ಇತ್ಯಾದಿಗಳನ್ನು ಕಣ್ಮುಂದೆ ತೋರಿಸಿ ಪಾಠಮಾಡುವುದರಿಂದ ಅವರಿಗೆ ಸರಿಯಾಗಿ ಹಿಡಿಯಬಹುದೆಂದು ನಂಬುವೆ"

"ಬಹಳ ಒಳ್ಳೆಯದು—ಬಹಳ ಒಳ್ಳೆಯದು ... ಹೊಸಮಾರ್ಗ! ಈ ರೀತಿಯಾಗಿ ಎಲ್ಲಾ ಉಪಾಧ್ಯಾಯರು ಮಾಡುವಂತೆ 'ಮೆಮೊ' ಹಾಕಿ ಕಳಿಸುತ್ತೇನೆ ಈ ಬಾರಿ" ಎಂದೆನ್ನುತ್ತಿದ್ದಾಗ ಛೇರ್ಮೆನ್ ದೊಡ್ಡವೀರಪ್ಪ ನವರು ಬಂದರು.

"ನಮಸ್ಕಾರ, ಸಾರ್."

"ನಮಸ್ಕಾರ, ಬನ್ನಿ"

"ಬಂದೆ ಸಾರ್. ಇನ್‌ಸ್ಪೆಕ್ಷನ್‌ಗೆ ಬಂದಿದ್ದಿರಾ ಸಾರ್?"

"ಹೂನ್ರಿ, ಬೆಳ್ಳೂಡಿಗೆ ಬಂದಿದ್ದೆ. ಹಾಗೆ ಇದನ್ನೂ ನೋಡಲಿಕ್ಕೆ ಬರಬೇಕಾಯಿತು."

"ನಮ್ಮ ಇಸ್ಕೂಲಿಗೆ ಚಲೋ ಮೇಷ್ಟ್ರು ಬಂದಿದಾರೆ ಸಾರ್. ಹುಡುಗ ರಿಗೆ ಚೆನ್ನಾಗಿ ಪಾಠ ಹೇಳಿ ಕೊಡ್ತಾರೆ ಸಾರ್" ಎಂದರು.

ಬೆಳಗಿನ ತರಗತಿಗಳು ಮುಗಿದು ಹುಡುಗರು ಮನೆಗೆ ಹೊರಟರು, ಇನ್‌ಸ್ಪೆಕ್ಟರ್ 'ವಿಸಿಟರ್ಸ್' ಪುಸ್ತಕ ತೆಗೆದು ಪ್ರಸಾದನ ಮುನ್ನಡೆಯ ಬಗ್ಗೆ ಪ್ರಶಂಸಿಸಿ ಬರೆದರು

"ಹೌದು. ಚೆನ್ನಾಗಿ ಹೇಳಿಕೊಟ್ಟಿದಾರೆ. ನೋಡಿದ್ದಾಯಿತು. ಇನ್ನು ನಾನು ಹೊರಡುತ್ತೇನೆ ದೊಡ್ಡವೀರಪ್ಪನವರೆ."

"ಕುಳಿತುಕೊಳ್ಳಿ. ವೀಳೆದೆಲೆ ತರಿಸಲಿಕ್ಕೆ ಕಳಿಸಿರುವೆ" ಎಂದರು.

ರೇಣುಕ ಎಳೆತೆಂಗಿನಕಾಯಿ, ತಿಂಡಿ, ಹಣ್ಣು, ಕಾಫಿಕೊಟ್ಟ. ದೊಡ್ಡವೀರಪ್ಪನವರೂ ಇನ್ಸ್‌ಪೆಕ್ಟರೂ ತಿಂಡಿತಿಂದು ಕಾಫಿಕುಡಿದರು. ಅಷ್ಟು ಹೊತ್ತಿಗೆ ಚಿಗಿತ ಎಳೆ ವೀಳೆದೆಲೆಗಳನ್ನು ಹುಡುಗರು ತಂದು ಕೊಟ್ಟರು. ಇನ್ಸ್‌ಪೆಕ್ಟರ್‌ರವರು ತಿನ್ನುತ್ತಿರುವಾಗ ರೇಣುಕನೂ ಬೇಗ ಬೇಗ ತಿಂದು, ನೀರು ಕುಡಿದಂತೆ ಆರಿದ ಕಾಫಿಯನ್ನು ಗೊಟಗೊಟ ಕುಡಿದ. ಬಳಿಕ ಇನ್ಸ್‌ಪೆಕ್ಟರನ್ನು ಹಳ್ಳದಾಟಿಸಿ ಬಂದ.

ಕೆಲಸಕ್ಕೆ ತಕ್ಕಂತೆ ಇನ್ಸ್‌ಪೆಕ್ಟರಿಂದ ಬಂದ ಪ್ರಶಂಸಪೂರ್ವಕ ಮಾತು ಗಳು ಇವನಿಗೆ ಸಂತೋಷವನ್ನುಂಟುಮಾಡಿದವು. ಮಧ್ಯಾಹ್ನ ಸ್ವಲ್ಪ ಬೇಗ ಶಾಲೆ ಮುಚ್ಚಿಕೊಂಡು ಊರಿಗೆ ಹೊರಟ. ಹೃದಯ ಗರಿಕೆಗಿಂತ ಹಗುರವಾಗಿತ್ತು. ಮಾಧು ಫ್ಯಾಕ್ಟರಿಯಿಂದ ಅದೇ ತಾನೆ ಬಂದಿದ್ದ. ಇಬ್ಬರೂ ಕಾಫಿಕುಡಿದು ವಿಹಾರ ಹೊರಟರು. ತಮ್ಮ ಸಮಸ್ಯೆಗಳೇನೇ ಇರಲಿ, ಇಬ್ಬರೂ ಆಪ್ತರಂತೆ ಮಾತನಾಡುತ್ತಿದ್ದರು.

"ಇವೊತ್ತು ಇನ್ಸ್‌ಪೆಕ್ಟರ್ ಬಂದಿದ್ದರು ಮಾಧು."

"ಹುಂ ! ಯಾವಾಗ ?"

"ಇವೊತ್ತು ಬೆಳಗ್ಗೆ"

"ಇನ್ಸ್‌ಪೆಕ್ಷ್ ಮಾಡಿದರೇನು ?"

"ಎಲ್ಲಾ ಇನ್ಸ್‌ಪೆಕ್ಷ್ ಮಾಡಿ ತುಂಬಾ ಸಂತೋಷಪಟ್ಟುಕೊಂಡರು"

"ಏನಾದರೂ ಇರಲಿ ಬಿಡು ಮಹರಾಯ, ಹೋಗಿ ಕೇಳಿದಕೂಡಲೆ ಒಂದು ಸ್ಥಳಕ್ಕೆ ನಿಯುಕ್ತ ಮಾಡಿದರಲ್ಲ "

"ನನ್ನ ಜೀವನದ ಕೊನೆಯುವರೆಗೂ ಅದನ್ನು ನೆನೆಸಬೇಕು, ಮಾಧು."

"ಹೌದು; ದೊಡ್ಡಪ್ಪನಂತಹ ಸಾಹುಕಾರರಿದ್ದರೆ ಯಾರು ನೆನೆಸು ತ್ತಾರೆ?"

"ಥೂತ್! ಅವರನ್ನು ನೆನಸಬೇಡ ಮಾಧು! ಅದೊಂದು ಹೆಸರು ಕೇಳಿದಕೊಡಲೆ ಮೈ ಝುಮ್ಮೆಂತ ಅನ್ನುತ್ತೆ....ಹೋಗಲಿ ಬಿಡು."

ಅವರಿಬ್ಬರೂ ಮನೆ ಮುಟ್ಟಿದಾಗ ಏಳು ಘಂಟೆಯಾಗಿತ್ತು. ಬೆಳ್ಳೂಡಿ ಚಿಕ್ಕಮ್ಮ ಬಂದಿದ್ದಳು. ರೇಣುಕ ಬಸಮ್ಮನನ್ನು ನೋಡಿದ

ಕೂಡಲೇ ಹೇಳಿದ:

"ಯಾವಾಗ ಬಂದಿದ್ದೆ, ಅಕ್ಕಾ ?"

"ಈಗ ನಾಲ್ಕು ಘಂಟೆ ಬಸ್ಸಿಗೆ"

"ನಾಲ್ಕು ಘಂಟೆ ಹೊತ್ತಿನಲ್ಲಿ ನಾನಿದ್ದೆನಲ್ಲ"

"ಬಸ್ಸು ಲೇಟಾಗಿ ಬಂತು"

"ತಮ್ಮಾ ."

"ಓ! ಏನು ಕಕ್ಕಿ"

"ಒಬ್ಬ ತಂಗಿ. ಮರೆತು ಬಿಟ್ಟಿರಲ್ಲಾ. ಏನೂಂತ?"

"ಅವರವರ ಹಣೆ ಬರಹ ಕಕ್ಕಿ. ಮಾಲಿನಿ ಜೀವನ ನೆನಪು ಬಂದಾಗ ಹುಚ್ಚನಂತಾಗುತ್ತೇನೆ ." ಎಂದು ರೇಣುಕ ಕಣ್ಣೀರು ತಂದ.

"ಅಳಬೇಡ. ನಮ್ಮಕ್ಕನ ಮಕ್ಕಳಂತ ಹೊಟ್ಟೆಯುರಿ ಬೀಳ್ತದೆ"

"ಹೌದು ಕಕ್ಕಿ. ಯಾರಿಗಾಗದೆ ಇರುವುದಿಲ್ಲ. ಈ ಮನೆಯಲ್ಲಿ ಹುಟ್ಟಿರುವವರೆಲ್ಲ ಹಿಂದಿನ ಜನ್ಮದಲ್ಲಿ ಪಾಪ ಮಾಡಿರುವವರೇ."

"ಅಪ್ಪಾ, ಗ್ರಹಚಾರ ಅಂತಿಯೋ ನಿನಗೆ ಜೈಲಾಗಬೇಕಾದರೆ...."

"ಕಕ್ಕೀ ನನ್ನ ಮಾತೊಂದಿರಲಿ. ಆ ಉಮಾಪತಿ ಮಾಡಿರೋದು, ಮಾಡುತ್ತಿರುವುದು ಜ್ಞಾಪಕಕ್ಕೆ ಬಂದರೆ ಜೀವ ಕಳೆದುಕೊಳ್ಳಲೋ ಅನ್ನಿಸುತ್ತೆ"

"ಪಾಪಿ! ಅವನ ಮನೆ ಹಾಳಾಗಲಿ. ಎಲ್ಲಿಂದ ಬಂದು ಮೂಲಾಗಿದ್ದನೋ. ನೀವಾದರೂ ಅವರ ವಂಶ, ನಡವಳಿಕೆ ಕೇಳಬಾರದಾಗಿತ್ತೇ. ದುಡಿಕಿ ಬಿಟ್ಟಿರಿ. ಎಲ್ಲಿಯಾದರೂ ..." ಎಂದು ನಿಟ್ಟುಸಿರುಗರೆದಳು.

"ರಾತ್ರಿ ಕಂಡ ಬಾವಿಯಲ್ಲಿ ಹಗಲು ಬಿದ್ದಾಂತಾಯಿತು. ಹೊರಗೆ ಹೋಗಿದಾಳಲ್ಲ ಆ ಪುಣ್ಯಾತ್ಮಗಿತ್ತಿ ಮಾಡಿದ್ದು."

"ಎಂಥ ನೀಚ ಇದ್ದಾನಪ್ಪ ಅವನು! ಅವನಿಗೂ ಅಕ್ಕ ತಂಗಿ ಯಾರೂ ಇರಾಕಿಲ್ಲ!...."

"ಕಕ್ಕಿ, ಮೃಗಜಾತಿಗಳಿಗೂ ಕನಿಕರ ಎಂತ ಇರುತ್ತೆ. ಇನ್ನೊಂದು ಪ್ರಾಣಿಯ ಮರಿಯನ್ನು ಕಚ್ಚಿಕೊಂಡು ಬಂದಾಗ, ಅದರ ತಾಯಿಯೇನಾದರೂ ಅರಚಿದರೆ ಬಿಟ್ಟುಬಿಡುತ್ತವೆ. ಅಂಥದು ಆ ಕಾಡು ಮೃಗಗಳಿಗಿಂತ ಕಡೆ ಆ ಹಲ್ಕಟ್ ನನ್ನ ಮಗ!"

"ಹೌದವ್ವಾ ಹೌದು. ಲಗ್ನದಲ್ಲಿ ನೋಡಿದೆನಲ್ಲ. ಅವನಿಗೆ ಕರುಣೆ ಎಂಬುವುದು ಎಳ್ಳಷ್ಟೂ ಇಲ್ಲ"

"ಎಪಿ ಸೀಳಿ ಪಂಜ ಹಚ್ಚಿ ಹುಡುಕಿದರೂ ಆ ಕರುಣೆ ಸಿಕ್ಕುವದಿಲ್ಲ; ಅಷ್ಟು ಮಾತ್ರ ನಿಜ "

"ಇನ್ನೇನು ಇಲ್ಲ ಎಲ್ಲರ ನಡುವೆ ಒಬ್ಬಳಿದ್ದಳು. ಇಂಥದಾಗ ಬೇಕೆಂತ ಆಕೆ ಹಣೆ ಬರಹದಲ್ಲಿತ್ತೇ!?"

"ಕಕ್ಕೀ, ನೀನು ಏನಾದರೂ ತಿಳಿ. ಎಲ್ಲಾ ಆ ಬಸವರಾಜನಿಂದ ನಡೆಯುತ್ತಿವೆ ನೋಡು. ಅವರ ಮನೆಗೆ ಬಂದಾಗ, ಛೆ! ಹುಚ್ಚ ಹಾಗೆಲ್ಲಾ ಮಾಡಬಾರದು. ಗುರುಹಿರಿಯರು ಎಂತ ಭಕ್ತಿಭಾವ ಇಟ್ಟಿಕೊ ಎಂದು ಹೇಳಬಾರದೇನಮ್ಮ ?"

"ಅಪ್ಪಾ, ದಾಯಾದಿ ಮತ್ಸರ ಎನ್ನುವುದು ಹಾಗೇನೆ. ನಾನು ಬಹಳ ನೋಡಿದ್ದೇನಪ್ಪ "

"ಅವರು ಯಾವುದಕ್ಕೂ ಹೇಸರು. ನಮಗೇನಾದರೂ ಆದರೆ ಚಪ್ಪಾಳೆ ಹಾಕಿ ನಗ್ತಾರೆ."

"ನಿಮ್ಮ ಜೋತೆಗೇನೋ ಸಿಟ್ಟಾಗಿದಾರೆ. ತಾವಾದರೂ ಎರಡು ದಿನ ಕರೆದುಕೊಂಡ ಬರಬಾರದೆ. ಅಯ್ಯೋ ದೇವರೆ, ನಿನ್ನ ಮನಸ್ಸೆಷ್ಟು ಕಲ್ಲು .ಆಂ!. "

"ಅವರ ಹೆಣ್ಣು ಮಕ್ಕಳಿಗೇನಾದರೂ ಆಗಲಿ ನಾವು ಕರೆದು ತಂದು ಉಪಚಾರ ಮಾಡ್ತೇವೆ. ಆ ಶಾಂತಾನ್ನ ವಿಶ್ವಾರಾಧ್ಯ ಮಾಮನಿಗೆ ಕೊಡುವಾಗ ನಾವೇ ಸಾಕಿ ಸಲುಹಿದ್ವು. ಅವರು ಆಗ ಹಳ್ಳಿಯಲ್ಲಿದ್ದರಲ್ಲ, ಅಲ್ಲಿದ್ದರೆ ಕಾಡಾಗುತ್ತಾಳೆಂತ ."

"ಅವೆಲ್ಲಾ ಎಲ್ಲಿ ನೆನಪಿನಲ್ಲಿದ್ದೀತು, ಉಂಡಮನೆಗೆ ಜಂತಿ ಎಣಿಸುವ ಜನ."

"ಅನ್ನವ್ವ ಇನ್ನೊಂದು ಸಾರಿ" ಎಂದು ರೇಣುಕ.

ಗಂಗಮ್ಮ ನೆರೆಮನೆಯಿಂದ ಜಿನಸು ಕಡ ತೆಗೆದುಕೊಂಡು ಬಂದಳು.

"ಗಂಗಕ್ಕಾ. ಗುರುಮೂರ್ತಿ ಎಲ್ಲಿಗೆ ಹೋಗಿದಾನೆ."

"ಅದೇನೋ ಇನ್ಸ್ಪೆಕ್ಟರು ಹೇಳಿಕಳಿಸಿದ್ದರು ಹೋಗಿದಾನೆ"

"ಈಗ್ಯಾಕೆ ಹೋಗಿದಾನೊ !"

"ನಂಗೊತ್ತಿಲ್ಲ."

"ನನಗೆ ಊಟಕ್ಕೆ ಹಾಕ್ತೀಯಾ ಗಂಗಕ್ಕ?"

"ಅವನೂ ಬರಲಿ. ನಾನೆಷ್ಟು ಸಾರಿ ಬಡಿಸಲಿ."

"ಹಾಗೆ ಆಗಲಿ. ಒಟ್ಟಿಗೆ ಕುಳಿತು ಊಟಮಾಡುತ್ತೀವೆ."

ಅಷ್ಟು ಹೊತ್ತಿಗೆ ಗುರುಮೂರ್ತಿ ಜೋಲು ಮುಖ ಹಾಕಿಕೊಂಡು ಬಂದ. ಮುಖ ಒಣಕಿತ್ತಲೆ ಹಣ್ಣಿನಂತಾಗಿತ್ತು. ಮನೆಯಲ್ಲಿ ಯಾರೊಡನೆಯೂ ಮಾತನಾಡಲಿಲ್ಲ.

"ಗುರುಮೂರ್ತಿ, ಪಂಚೆಸುತ್ತಿಕೊಂಡು ಊಟಕ್ಕೆ ಕೂತುಕೊಳ್ಳಪ್ಪ" ಎಂದು ಗಂಗಮ್ಮನಿಂದ ಊಟಕ್ಕೆ ಕರೆ ಬಂತು. ಗುರುಮೂರ್ತಿ ಅಲುಗಾಡದೆ ಹಾಗೆಯೇ ಕುಳಿತುಕೊಂಡಿದ್ದ. ಎರಡು ಮೂರು ಬಾರಿ ಕರೆದ ಮೇಲೆ ನಿರ್ವಾಹವಿಲ್ಲದೆ ಗುರುಮೂರ್ತಿ ಏಳಬೇಕಾಯಿತು.

"ಯಾಕೆ ಗುರುಮೂರ್ತಿ, ಸಪ್ಪಗಿದ್ದೀಯೆ?'

''ನಾನೆಲ್ಲಿ ಸಪ್ಪಗಿದೇನೆ ಚಿಕ್ಕಮ್ಮ?" ಎಂದ.

"ಏನೋ ಇವತ್ತು ಮಧ್ಯಾಹ್ನ ಒಂದು ತುತ್ತು ಮಾತ್ರ ಅನ್ನ ತಿಂದಿದ್ದ" ಎಂದು ಗಂಗಮ್ಮ ಬಸವಮ್ಮನ ಮಾತಿಗೆ ಪುಷ್ಟಿ ದೊರಕಿಸಿ ಮಾತನಾಡಿದಳು. ತುಸು ಸಿಟ್ಟಿನಿಂದ ಗುರುಮೂರ್ತಿ ಹೇಳಿದ "ನಾನು ಇಷ್ಟೇ ಕಕ್ಕಿ ದಿನವೂ ಊಟಮಾಡೋದು."

"ನಮ್ಮ ದೇವರ ಸತ್ಯ ನಮಗೆ ಗೊತ್ತಿಲ್ಲೆ" ಎಂದು ಕತ್ತು ತಿರುವುತ್ತ ಗಂಗಮ್ಮ ಅಂದಳು.

"ಅಣ್ಣ, ಏನೋ ಯೋಚನೆ ಹಚ್ಚಿಗೊಂಡು ಬಂದಿದಾನೆ. ಇನ್ಸ್ಪೆಕ್ಟರು ಏನಾದರೂ ಅಂದರೆ?" ರೇಣುಕನ ಮಾತಿಗೆ ಗುರುಮೂರ್ತಿ ಮೌನವಾಗಿದ್ದ, ತಟ್ಟೆಯಲ್ಲಿನ ಅನ್ನವನ್ನು ಕಲಸಿ ನಿಧಾನವಾಗಿ ಊಟಮಾಡುತ್ತಿದ್ದ.

"ಮಾಲಿನಿ ನೆನಪು ಬಂದಿರಬಹುದು " ಎಂದಳು ಬಸವಮ್ಮ.

"ಹಾಗೇನೂ ಇಲ್ಲ. ತಂಗಿಯ ನೆನಪು ಮಾಡುವುದನ್ನು ಯಾವಾಗಲೋ ಬಿಟ್ಟಿದೇವೆ"

"ಮರೆತಿದ್ದೀರಿ. ಯಾಕೆಂದರೆ ಮನೆ ಮುಂಬ ಹೆಣ್ಣುಮಕ್ಕಳು" ಬಸವಮ್ಮ ಹೇಳಿದಳು.

"ಇಲ್ಲ ಕಕ್ಕಿ, ಆ ಭ್ರಷ್ಟ ಹಾಗೆ ಮಾಡಿಬಿಟ್ಟ."

"ಏನೇ ಅನ್ನು, ನಿಮ್ಮಪ್ಪಾರು ಎಡವಿಬಿದ್ದರು. ಎಷ್ಟೋ ಜನಕ್ಕೆ ಹೆಣ್ಣು ಕೊಡಿಸಿದಾರೆ. ಏನು ಮಾಡಬೇಕು?"

"ನಿಜ. ಈಜು ಚೆನ್ನಾಗಿ ಬಂದವರ ಮತ್ತು ಹಾವು ಸರಿಯಾಗಿ ಆಡಿಸುವವರ ಪ್ರಾಣ ಅವುಗಳಲ್ಲೇ ಒಂದುದಿನ ಹೋಗುತ್ತೆ. ಅಂತೆಯೇ ಇಂಥ ಸಂಬಂಧ ಬೆಳೆಸಲು ಅನಂತ ಜನರಿಗೆ ಸಹಾಯ ಮಾಡಿದ್ದರು. ಆದರೆ ನೀನು ಹೇಳಿದಂತೆ ಎಡವಿದರು."

"ನೀನೇನಾದರೂ ಅನ್ನು, ಬಹಳ ಅನ್ಯಾಯ ಆಯಿತು."

ಹೀಗೆ ತಮ್ಮೆಲ್ಲ ಸಮಸ್ಯೆಗಳನ್ನು ಅವರು ಚಿಕ್ಕಮ್ಮನೆದುರಿಗೆ ತೋಡಿಕೊಳ್ಳುತ್ತಿದ್ದಾಗ ಅಂದು ಇನ್ಸ್ಪೆಕ್ಟರ ಬಳಿ ನಡೆದ ಪ್ರಕರಣವನ್ನು ಹೇಳಬೇಕೆನ್ನಿಸಿತು ಗುರುಮೂರ್ತಿಗೆ.

"ಇವೊತ್ತು ಇನ್ಸ್ಪೆಕ್ಟರು ಕರೆಸಿದ್ದರು ಅದೊಂದು ದೊಡ್ಡ ಪ್ರಕರಣ ನಡೆದಿದೆ ಗಂಗಕ್ಕ."

"ಏನು ಗುರುಮೂರ್ತಿ?" ಎಂದು ಅನ್ನ ತೆಗೆಯುವುದನ್ನು ಬಿಟ್ಟು ಬಂದಳು ಗಂಗಮ್ಮ.

"ನಮ್ಮ ಸ್ಕೂಲಿನ ಎರಡನೆಯ ತರಗತಿಯಲ್ಲಿ ವಿರೂಪಾಕ್ಷ ಎಂತ ಓದುತ್ತಾ ಇದಾನೆ. ಒಳ್ಳೇ ತುಂಟ ಹುಡುಗ. ಬಹಳ ದಿವಸದಿಂದ ಬುದ್ಧಿ ಹೇಳುತ್ತಿದ್ದೆ. ಏನೋ ಹುಡುಗ. ಇವೊತ್ತು ತಿಳಿದಾನು, ನಾಳೆ ತಿಳಿದಾನು ಎಂತ ಸುಮ್ಮನಿದ್ದೆ."

"ಯಾರ ಮಗ ಅವನು?" ಎಂದಳು ಗಂಗಮ್ಮ.

"ನಮ್ಮ ವಿರುದ್ಧ ಪಾರ್ಟಿ ಕಟ್ಟಿಕೊಂಡು ಬಸವರಾಜ ಓಡಾಡುತ್ತಿದಾನಲ್ಲ ಅವರ ಪೈಕಿ ಸಿದ್ದ ಎಂತ ಇದ್ದಾನೆ. ಅವನ ಮಗ."

"ಹೂ, ಹೇಳು" ರೇಣುಕನೆಂದ.

"ಇತ್ತೀಚಿಗೆ ಏನು ಮಾಡಲಿಕ್ಕೆ ಹತ್ತಿದಾನೆ ಗೊತ್ತೆ ರೇಣುಕ ?"

"ಹ್ಞೂ ಹೇಳು "

"ಅವರವರಲ್ಲೇ 'ವೈರಿ'ಗಳೆಂತ ಮಾಡಿಕೊಂಡು ತರಗತಿಯಲ್ಲಿ ಜಗಳಾಡುತ್ತಿದ್ದರು. ನನಗೂ ತುಂಬಾ ಕೋಪಬಂತು. ಇನ್ನೊಂದು ಸಾರಿ ಮಾಡದಿರಲೀಂತ ಅದಕ್ಕೆ ಕಾರಣನಾದ ವಿರೂಪಾಕ್ಷನಿಗೆ ಎರಡೇಟು

ಕೆನ್ನೆಗೆ ಕೊಟ್ಟೆ ಕಟ್ಟಿಗೆಯಿಂದಲೂ ಬಿಗಿದೆ. ಅವನು ಸಿದ್ದನ ಮುಂದೆ ಹೇಳಿದನೆಂತ ತಿಳಿಯಿತು ಸಿದ್ದ, ಬಸವರಾಜನ ಕಟ್ಟಿಕೊಂಡು ಹೆಡ್ ಮೇಸ್ತ್ರ ಹತ್ತಿರ ಕಂಪ್ಲೇಂಟ್ ಕೊಟ್ಟನಂತೆ. ಇದು ಇನ್ಸ್ಪೆಕ್ಟರಿಗೂ ತಿಳಿದು ನನ್ನ ಕರೆಸಿದ್ದರು. ನಾನು ಸರಿಯಾಗಿ ಸಮುಜಾಯಿಸಿ ಹೇಳಿದೆ. ಆದರೂ ನನಗೆ ಮೂರು ರೂಪಾಯಿ ದಂಡ ಹಾಕಿದಾರೆ. ನೋಡಿ ದಾಯಾದಿ ಮತ್ಸರ ಎಂಬೋದು ಹೀಗಿರುತ್ತೆ" ಎಂದು ತನ್ನ ಕಥನ ಮುಗಿಸಿದ.

ರೇಣುಕಪ್ರಸಾದ ಎಚ್ಚರವಿಲ್ಲದವನಂತೆ ಅನ್ನ ತಿಂದು ಹೊರಗೆ ಬಂದ. ಬೆಳುದಿಂಗಳು ಬಿದ್ದಿತ್ತು ತಂಗಾಳಿ ಬೀಸುತ್ತಿತ್ತು. ನಕ್ಷತ್ರಗಳು ಎಲ್ಲ ಕಡೆಗೂ ನುಗ್ಗುತ್ತಿದ್ದವು. ಮಂದಮಾರುತ ತೀಡುತ್ತಿದ್ದರೂ ಹಗೇ ವಿನಲ್ಲಿ ಬೇಯುತ್ತಿದ್ದಂತೆ ಅನಿಸಿಗಾಗಿತ್ತು. ಉಸಿರು ಬೆಂದ ದೇಹದಿಂದ ಉಗಿಯಂತೆ ಹೊರಡುತ್ತಿತ್ತು.... ..

## ೧೮

ಬಸವರಾಜ ಮನೆ ನೇರುವ ಹೊತ್ತಿಗೆ ಮಧ್ಯಾಹ್ನ ಹನ್ನೆರಡು ಘಂಟೆಯಾಗಿತ್ತು. ಹೆಂಡತಿ ಹಾಲಮ್ಮ ಅಡಿಗೆಮಾಡಿಟ್ಟುಕೊಂಡು ಗಂಡನಿಗಾಗಿ ಕಾಯುತ್ತಿದ್ದಳು. ಯಾರೋ ಬಾಗಿಲು ನೂಕಿದ ಹಾಗಾಯಿತು. ಯಾರೂ ಇಲ್ಲ, ಪಕ್ಕದ ಮನೆ ಮುದುಕಿ ನೀಲಮ್ಮ.

"ಬನ್ನಿ ನೀಲಮ್ಮ, ಏನು ಬೇಕಿತ್ತು" ಎಂದಳು ಹಾಲಮ್ಮ.

"ಏನಿಲ್ಲ ಸುಮ್ಮನೆ ಬಂಡೆ. ಆ ಬಸವ ಇನ್ನೂ ಮನೆಗೆ ಊಟಕ್ಕೆ ಬಂದಿಲ್ಲವೆ?"

"ಇಸ್ಪೀಟಾಟದವರು ಬಿಡಬೇಕಲ್ಲ."

"ಈವಾಗ ಆ ರಂಡೆ ಮನೆಗೆ ಬೇರೆ ಹೋಗುತ್ತಿದಾನೆ. ಮೊನ್ನೆ ಕಾಯಿಪಲ್ಯ ಪೇಟೆಗೆ ಹೋಗಬೇಕಾದರೆ ಅವರ ಮನೆಯೊಳಗೆ ನುಗ್ಗಿದ." ನೀಲಮ್ಮ ಹೇಳಲೋ ಬೇಡವೋ ಎಂದು ಯೋಚಿಸಿ ಹೇಳಿದಳು.

"ನನಗೂ ಗೊತ್ತಿತ್ತು ಅಜ್ಜಿ. ಮೊನ್ನೆ ನಾನು ಹೀಗೆ ಮಾಡಬಾರದೂಂತ ಹೇಳಿದ್ದಕ್ಕೆ ..."

"ಏನಂದ?"

"ಏನನ್ನುತ್ತಾರೆ. ಎಲ್ಲಾ ನನ್ನ ಕರ್ಮ"

ಎಂದಳು ಹಾಲಮ್ಮ. ಬಸವರಾಜ ಹೊರಗಿನ ಕೋಣೆಯಲ್ಲಿ ಮಲಗಿಕೊಂಡಿದ್ದ. ರಾತ್ರಿಯೆಲ್ಲಾ ಇಸ್ಪೀಟು ಆಡಿ ಕಣ್ಣುರಿಯುತ್ತಿದ್ದವು. ಅವರೀರ್ವರ ಮಾತುಕತೆಗಳನ್ನು ಲಾಲಿಸಿ ಕೇಳುತ್ತಿದ್ದ ಹಾಲಮ್ಮ 'ನನ್ನ ಕರ್ಮ' ಎಂದು ನಿಲ್ಲಿಸಿ, ಮಾತು ಮುಂದುವರಿಸಿದಳು. ಅಸಹನೀಯವಾದ ನೋವು ಅವಳ ಜೀವ ಕೊರೆಯುತ್ತಿತ್ತು,

"ನನ್ನ ಕರ್ಮಕಣಜ್ಜಿ. ನಾನು ಒಣಕಲಾಗಿ ನೋಡಲಿಕ್ಕೆ ಅಸಹ್ಯವಾಗಿದೇನಂತೆ. ನನ್ನಮೇಲೆ ದಯೆ ತೋರಿಸಿ ಮಾಡಿಕೊಂಡಿದಾರಂತೆ...."

"ತಂಗಿ ! ಕಾಲ ....... ಇದು ಕಲಿಕಾಲ!"

"ಇವರಿಗೇ ಇದ್ದಿತೇನಜ್ಜಿ ಕಲಿಕಾಲ. ಬೇರೆ ಪುಣ್ಯಾತ್ಮರು ಯಾರೂ ಇಲ್ಲವೆ. ಆ ಪುಣ್ಯಾತ್ಮ ಗುರುಮೂರ್ತಿ ಇಲ್ಲ, ಏನು ಆ ಮಹರಾಯರು

ಸೂರಪ್ಪಾರು ಇಲ್ಲೇ? ಮೊದಲು ಆ ಬೇಡರ ಗಂಗಮ್ಮನನ್ನು...."

"ಈಗವಳೂ ಬೇಡಾಗಿದ್ದಾಳೆ."

"ಅಜ್ಜಿ, ಗಂಗಮ್ಮ ನಮ್ಮವರಿಗಿಂತ ಬಹಳ ಹಿರಿಯವಳು"

ಎಂದು ಹಾಲಮ್ಮ ಮುಖ ಕಿವಿಚಿಕೊಂಡಳು. ಬಸವರಾಜನ ಹೊಟ್ಟೆಯಲ್ಲಿ ಡೊಂಬರಾಡುತ್ತಿದ್ದರು ಕ್ಷಣಕ್ಷಣಕ್ಕೂ ಬಿಸಿಲಿನ ತಾಪ ಹೆಚ್ಚುತ್ತಿತ್ತು. ಆದೇ ತಾನೆ ಹೊರಗಿನಿಂದ ಬಂದವನಹಾಗೆ ಒಳಕ್ಕೆ ಬಂದ ಬಸವರಾಜನನ್ನು ನೋಡಿ ನೀಲಮ್ಮ ಎದ್ದು ನಿಂತುಕೊಂಡಳು. ಮತ್ತು ಮೆಲುಧ್ವನಿಯಲ್ಲಿ ಹೇಳಿದಳು:

"ಹಾಗಾದರ ಇಲ್ಲವೆ ತಾಯಿ ಉಪ್ಪು?"

"ಇಲ್ಲಜ್ಜಿ, ತೀರಿ ಹೋಗಿದೆ" ಎಂದಳು. ನೀಲಮ್ಮ ಹೊರಟು ಹೋದಳು. ಬಸವರಾಜ ಅಂಗಿ ತೆಗೆದು ಉಪ್ಪಿನ ಸೋರೆಯನ್ನು ನೋಡಿದ. ಅಡುಗೆ ಮನೆಯಲ್ಲಿ, ಉಪ್ಪುತುಂಬಿತ್ತು. ಎರಡೇಟು ಹಾಲಮ್ಮನಿಗೆ ಬಿಗಿದು,

"ಉಪ್ಪಿದ್ದಿಲ್ಲವೆ ರಾಗಿಣಿ? ಕೊಡಲಿಕ್ಕೆ ಏನಾಗಿತ್ತು?" ಎಂದ.

ಹಾಲಮ್ಮ ಅಳಲಿಲ್ಲ. ಇಂತಹ ಅನೇಕ ಏಟುಗಳನ್ನು ಆಗಾಗ ತಿಂದು ಆಕೆಗೆ ಮೈ ಜಡ್ಡು ಬಿದ್ದಿತ್ತು. ಗದ್ಗದಿತ ಕಂಠದಲ್ಲಿ ನರ ಹರಿಯುವ ಹಾಗೆ ಒದರಿದಳು.

"ಆ ಅಜ್ಜಿ ಮನೆ ಹಾಳಾಗಲಿ! ದಿನವೆಲ್ಲ ಏನಾದರೂ ಬಂದು ಬೇಡುತ್ತೆ. ಆದಕ್ಕಿಲ್ಲ ಎಂತಂದರೆ ನಿಮಗೆ ಯಾಕಾಗಿ ಕೋಪ?" ಎಂದಳು.

ಬಸವರಾಜನಿಗೆ ನಿಜ ಸ್ಥಿತಿ ಗೊತ್ತಿತ್ತು. ಗೋಣು ಅಲುಗಾಡಿಸುತ್ತಾ "ನಿಮ್ಮೆಲ್ಲ ಬಾಳು ನನಗೆ ಗೊತ್ತಿಲ್ಲದ್ದಲ್ಲ" ಎಂದ.

"ಊಟಕ್ಕೆ ಬರುವಿರೋ ಅಥವಾ ..."

"ಏ, ಬರದಂತೆ ಹೋಗಿಬಿಡುವೆ. ಓಹ್! ಮರೆತೇಬಿಟ್ಟಿದ್ದೆ...." ಎಂದು ಗಾಬರಿಯಾದ.

"ಏನು ಮರೆತು ಬಿಟ್ಟಿದ್ದಿರಿ" ಎಂದು ಹಾಲಮ್ಮನ ಪ್ರಶ್ನೆ.

"ಏನೂ ಇಲ್ಲ. ನನಗೆ ಬೇಗ ಊಟಕ್ಕೆ ಹಾಕಿ ನೀನೂ ಊಟ ಮಾಡು. ಅಪ್ಪ ಯಾವಾಗ ಬರ್ತೇನಿ ಅಂದಾನೆ?"

"ನಾಳೆ ಸಂಜೆಗೆ"

"ವೆರಿಗುಡ್" ಎಂದುಅವನು ಊಟಮಾಡಿದ. ಆದಷ್ಟು ಶೀಘ್ರ ಹೆಂಡ

ತಿಯೂ ಊಟಮಾಡಿ ಬಂದಳು. ಹತ್ತಿರದ ನಾಬಿಯ ಅಂಗಡಿಗೆ ಹೋಗಿ ಎರಡು ಚಾಕಲೇಟ್, ಎರಡು ಬೀಡಾ ಕೊಂಡು ಬಂದ. ಹಾಲವ್ವನಿಗೆ ಹಿಡಿಸಲಾರದ ಸಂತೋಷ ಉಕ್ಕಿಬಂದಿತ್ತು.

"ಯಾಕಾಗಿ ಇಂದು ಬೀಡಾ ತರಿಸಿದಿರಿ ?" ಎಂದಳು.

"ಅದಿರಲಿ, ನಿಮ್ಮ ತಮ್ಮ ಗುರುಲಿಂಗನಿಗೆ ಜಡ್ಡು ಎಂತ ಕೇಳಿದೆ ವಲ್ಲ."

"ಹೂಂ... "

"ಇವೊತ್ತು ಹ್ಯಾಗಿವೇಂತ ನಿಮ್ಮ ಕಕ್ಕನ ಹತ್ತಿರ ಕೇಳಿ ಬಾ. ಅವರಿಗೆ ಇವೊತ್ತು ಕಾಗದ ಬಂದಿರಬೇಕು."

"ಅವನಿಗೆ ಗುಣಮುಖವಾಗಿವೆಯೆಂದು ನಿಮಗೆ ನಿನ್ನೆ ಕಾಗದ ಬಂದಿಲ್ಲವೆ ?"

"ಇರಲಿ, ಇನ್ನೊಂದು ಬಾರಿ ಕೇಳಿ ಬಾ. ಹ್ನೂ ಹೊರಡು!...." ಎಂದು ಹೊಡೆಯುವವನಂತೆ ಎದ್ದು ನಿಂತು ಕೊಂಡ. ಹಾಲವ್ವ ತರ ತರನೆ ನಡುಗಿದಳು. ಗಂಡ ಯಾವುದೋ ನೆವ ಹೇಳಿ ಮನೆಯಿಂದ ಹೊರಗೆ ಅಟ್ಟುತ್ತಾನೆಂದೆನಿಸಿತು ಅವನಿಗೆ. ಜೀವದ ಹಂಗುತೊರೆದು ಹೇಳಿ ದಳು :

"ನಾನು ಎಲ್ಲಿಗೂ ಹೋಗೋದಿಲ್ಲ. ನೀವೇನಾದರೂ ಮಾಡಿ" ಎಂದಳು. ಬಸವರಾಜನಿಗೆ ಆಕೆಯ ಈ ರೌದ್ರಾಕಾರವನ್ನು ನೋಡಿ ಆಶ್ಚರ್ಯವಾಗದಿರಲಿಲ್ಲ. ಎಂದೂ ಗಂಡನ ಮಾತಿಗೆ ಈ ರೀತಿ ರೇಗಿ ಆಕೆ ಉತ್ತರವಿತ್ತಿದ್ದಿಲ್ಲ. ಅದಕ್ಕೋಸ್ಕರ ಅವನಿಗೂ ಸಿಟ್ಟೆದ್ದಿತು.

"....ಯಾರೆಂತ ನನ್ನ ಭಾವಿಸಿರುವೆ. ಹೋಗದಿದ್ದರೆ ನೋಡು ಬೆನ್ನುಮೂಳೆ ಮುರಿದುಹೋದೀತು...." ಎಂದು ಇನ್ನೊಮ್ಮೆ ಆರ್ಭಟಿಸಿದ. ಅವಳು ಪ್ರತಿಮೆಯಂತೆ ನಿಂತುಕೊಂಡು ತುಟಿಯಲುಗಿಸಿದಳು. ಅವಳ ಕಣ್ಣೀರು ಕೋಡಿಯಾಗಿ ಹರಿಯಿತು. ಕುರುಚಲುನಂತಿರುವ ತಲೆಯ ಕೂದಲುಗಳು ಹರಡಿದ್ದವು. ಈಗ ಅವಳು ಕಾಳಸ್ವರೂಪಿಯಾಗಿದ್ದಳು. ಮತ್ತೆ ತೊಡರಿಸುತ್ತ ಕಿರಿಚಿದಳು.

"ನೀನೀ........ವು........ಏ........ಸ.....ರ....ಮಾಮಾಡ್ರಿ....ನಾನು ಹೋಗೋsದಿಲ್ಲ."

ಬಸವರಾಜ ಕಿಡಿಕಿಡಿಯಾದ. ಅವನ ಮನಸ್ಸು ಸ್ಥಿಮಿತಗೆಟ್ಟಿತ್ತು. ಅವಳನ್ನು ಬಾಚಿ ಹಿಡಿದು ದರದರನೆ ಅಟಕ್ಕೆ ಎಳೆದೊಯ್ದನು ಅನಂತರ ಅಲ್ಲಿಯ ಕೋಣೆಯಲ್ಲಿ ಅವಳನ್ನು ಒಂದು ಸಾಮಾನಿನಂತೆ ತೂರಿದ. ಕೆಳಗಡೆಯಿಂದ ಕೀಲಿಯೊಂದನ್ನು ತೆಗೆದುಕೊಂಡು ಬಂದು ಬಾಗಿಲಿಗೆ ಬೀಗ ಹಾಕಿದ. ಹಾಲಮ್ಮ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ಇಷ್ಟಾದ ಮೇಲೆ ಬಸವರಾಜ ಶಶಿಕಲೆಯ ಬರವನ್ನು ಕಾಯುತ್ತಾ ಕುಳಿತನು.

ಸುಮಾರು ಮೂರು ಘಂಟೆಗೆ ಶಶಿಕಲೆ ಬಂದಳು. ಬಸವರಾಜ ಜಗುಲಿಯ ಮೇಲೆ ಚಕೋರಪಕ್ಷಿ ಚಂದ್ರನ ಬೆಳಕನ್ನು ಕಾದು ಕುಳಿತಿರುವ ಹಾಗೆ ಕುಳಿತುಕೊಂಡಿದ್ದ. ದೂರದಿಂದಲೇ ಅವಳನ್ನು ನೋಡಿದ. ಮುಖ ಸೂರ್ಯಕಾಂತಿ ಹೂವಿನಂತೆ ಅರಳಿತು. ನಗು ತಡೆಯದಾದ. ಅಲ್ಲಿಂದಲೇ ಅವನು ಮುಗುಳ್ನಕ್ಕ ಶಶಿಕಲೆಯೂ ಪ್ರತಿಯಾಗಿ ನಕ್ಕಳು. ಅವರಿಬ್ಬರೂ ದಿವಾನಖಾನೆಗೆ ಬಂದು ಕುಳಿತುಕೊಂಡರು.

"ಚಕ್ರಪಾಣಿ ಈಪಿನ ಕೊಟ್ಟರು"

"ಸರಿ. ಈಗ ನೀನು ಬರುತ್ತೀಯಿಲ್ಲೋ ಎಂದು ಶಂಕಿಸಿದ್ದೆ. ಕೂದಲು ಅವನದ್ದೇ ಆಗಿರಬೇಕು. ಎಲ್ಲಿಯಾದರೂ ಮೋಸ ಮಾಡಿದ್ದರೆ...?"

"ಅಯ್ಯೋ ಶಿವನೆ, ಚಕ್ರಪಾಣಿ ಮೋಸ ಮಾಡಿದರೆ ಕೊಂದರೆ ಎಂತ ಮುಂದಾಗಿ ಆಲೋಚಿಸಿ, ಗುರುಮೂರ್ತಿ ಕ್ಷೌರಕ್ಕೆ ಹೋದಾಗ ನಮ್ಮ ಸೋಮನನ್ನು ಕಳಿಸಿ, ಅವನೆದುರಿಗಿದ್ದು ಕುಳಜಿಯಿಂದ ತೆಗೆಸಿಕೊಂಡು ಬಂದಿದಾನೆ"

"ಎಲ್ಲಿ ರಾಣಿ ಕೊಡು" ಎಂದ. ಅವನ ಮುಖದಲ್ಲಿ ಯಾವುದೋ ಅವ್ಯಕ್ತವಾದ ಉಜ್ವಲ ಕಳೆ ತುಂಬಿತ್ತು.

"ಯಾಕೆ ಅದೇನು ನಿಮ್ಮ ಹಂಗು. ಮೊದಲು ದುಡ್ಡು. ಆಮೇಲೆ ನಿಮ್ಮ ಕೂದಲೋ, ಉಗುರೋ, ಚರ್ಮೋ, ಕಣ್ಣೋ–ಎಲ್ಲಾ ಆಮೇಲೆ"

ಬಸವರಾಜ ಒಳಗಡೆಯಿಂದ ದುಡ್ಡು ತಂದು ಎಣಿಸಿತ್ತನು. ಶಶಿಕಲೆ ಪೊಟ್ಟಣದಲ್ಲಿನ ವಸ್ತುಗಳನ್ನು ಕೂಡುವಷ್ಟರಲ್ಲಿ ಮಾಟಗಾರ ಭೂತಣ್ಣ ಬಂದ. ಅವನೂ ಇವಳನ್ನು ನೋಡಿದ. ಇವಳೂ ಅವನನ್ನು ನೋಡಿದಳು. ಇಬ್ಬರ ಕಣ್ಣೂ ಕೂಡಿದವು. ಶಶಿಕಲೆ ನಾಚಿಕೆಯಿಂದ

ತಲೆತಗ್ಗಿಸಿದಳು; ಮುಖ ಸ್ವಲ್ಪ ಬೆವರಿತು; ಎರಡೂ ಗಲ್ಲಗಳು ತುಸು ಕೆಂಪಾದುವು.

"ಏನು ಶಶಿಕಲಾ, ನೀನಿಲ್ಲಿ?!"

"ಬಸವರಾಜರ ಹತ್ತಿರ ಕೆಲಸವಿತ್ತು ಬಂದಿದ್ದೆ" ಎಂದು ಪುಟಿದು ಹೊರಟು ಹೋದಳು. ಅವಳ ಜಾರ್ಜೆಟ್ ಸೀರೆ ಬಿಸಲಿಗೆ ಮಿರಿಮಿರಿ ಮಿಂಚುತ್ತಿತ್ತು. ನವಿಲು ಹೋದಹಾಗೆ ದೇಹ ಬಳುಕಿಸುತ್ತಾ ಆಕೆ ದೂರ ಹೋದಳು. ಬಸವರಾಜ ಕೊಂಚ ಹೊತ್ತು ಅವಳು ಹೋದ ದಿಕ್ಕನ್ನು ನೋಡುತ್ತ ನಿಂತಿದ್ದು "ಬಾ ಭೂತಣ್ಣ. ಇಷ್ಟು ದಿವಸ ತರಿಸಿ ಕೊಡಲಿಕ್ಕೆ ಸಾಧ್ಯವಾಗಿದ್ದಿಲ್ಲ."

"ನೀನು ಬಹಳ ಸೋಮಾರಿ ಕಣಯ್ಯ. ಇಷ್ಟು ಹೊತ್ತಿಗೆಲ್ಲಾ ಕೆಲಸ ತೀರಿ ಹೋಗುತ್ತಿತ್ತು."

"ಅಲ್ಲಣ್ಣ, ನನ್ನ ಕೈಯೊಳಗಿನ ಕೆಲಸವೆ. ಅದು ಏನು ಹೇಳ್ತೀಯೆ. ಇಷ್ಟು ದಿವಸ ಶತಿಗೆ ಕಾಟ ಕೊಟ್ರೊ ಕೊಟ್ರೊ ಇವೊತ್ತು ತರಿಸಿದೆ ನೋಡು."

"ಹಾಗಾದರೆ ಎಲ್ಲಿ?" ಎಂದ ಭೂತಪ್ಪ. ಬಸವರಾಜ ಒಳಗಡೆಯಿಂದ ಉತುರು, ಕೂದಲಿನ ಪೊಟ್ಟಣ ಅವನ ಕೈಗಿತ್ತ.

"ಮತ್ತೆಲ್ಲಿ ದುಡ್ಡುಕೊಡು."

"ಮೊದಲು ಕೆಲಸಾಗಲಿ ಭೂತಣ್ಣ. ದುಡ್ಡು ಎಲ್ಲಿ ಹೋಗುತ್ತದೆ."

"ಹಾಗಲ್ಲ ಬಸವರಾಜು, ಮೊದಲು ದುಡ್ಡು, ಆ ಮೇಲೆ ಕೆಲಸ. ಇನ್ನು ಬೇರೆ ಯಾವುದಾದರೂ ಆಗಿದ್ದರೆ, ನಾನೂ ತಡೆದು ತೆಗೆದುಕೊಳ್ಳು ತ್ತಿದ್ದೆ" "ಆಗಲಿ, ಈಗೊಂದು ಇಪ್ಪತ್ತು ರೂಪಾಯಿ ತೊಗೊಂಡಿರು, ಆ ಮೇಲೆ ಜೋಡಿಸುತ್ತೇನೆ."

"ಹುಂ, ಮನೆಗೆ ಯಾವಾಗ ಬರುತ್ತೀಯೆ?"

"ನಾನೇನು ಯಾವಾಗಾದರೂ ಸರಿಯೆ."

"ಭೂತಣ್ಣ! ಗುರುಮೂರ್ತಿಗೆ ಮಾಟ ಮಾಡಿಸಿದ ವಿಚಾರ ಬಹಳ ಗುಟ್ಟಾಗಿರಬೇಕು."

"ಎಂಥ ಮಾತು ಬಸವರಾಜು? ಇಂಥದನ್ನೆಲ್ಲ ಹರಡೋದುಂಟೆ? ಇವು ಪಿಟಕ್ಕೆಂದರೆ ತಲೆತಲೆಗೆ ಹೋಗಿ ಮುಟ್ಟುತ್ತವೆ."

"ನಿಜ. ಅದಕ್ಕೆಂದೇ ಹೇಳಿದ್ದು."

"ಇಬ್ಬರಿಗೂ ಮಾಡಿಬಿಡಲೇ, ಏನು ಒಬ್ಬನಿಗೋ?"

"ಮೊದಲು ಆ ಗುರುಮೂರ್ತಿಗೆ ಮಾಡಿಬಿಡು. ಆಮೇಲೆ ಆ ಮರಿ ರೇಣುಕನವೇನು ನೋಡೋಣಂತೆ."

"ನೀನು ಏನಾದರೂ ಅನ್ನು, ದುಡ್ಡಿಗೆ ಸಾಯುತ್ತೀ. ಇಬ್ಬರೂ ಹೋಗೋ ಕೈಲಿ ಹೋಗಿ ಬಿಡಲಿ, ನಿಕಾಲಾಗಿ ಬಿಡಬೇಕು ನೋಡು" ಎಂದು ಭೂತಪ್ಪ ಈರ್ವರಿಗೂ ಮಾಟಮಾಡಿಸಲು ಪ್ರೇರೇಪಿಸಿದ. ಬಸವ ರಾಜ ಅದೇನನ್ನೋ ಕೊಂಚ ಸಮಯ ಧೇನಿಸಿದ. ಆಮೇಲೆ ತಟಕ್ಕನೆ ನುಡಿದ:

"ಭೂತಣ್ಣ ಆ ರೇಣುಕನದು ಇರಲಿ. ಮೊದಲು ಅವನೊಬ್ಬನನ್ನು ಕೊಲ್ಲೋಣ. ನಂತರ ಮುಂದೆ ನೋಡೋಣಂತೆ" ಎಂದು ಸಮಾಧಾನ ಪರನಾಗಿ ಮಾತಾಡಿದ. ಮತ್ತೆ ಅವನೇ ನುಡಿದ.

"ನಮ್ಮ ಜಿಲ್ಲೆಯಲ್ಲಿಯೇ ಘಟ್ಟಿಗನೆಂತ ನಂಬಿಕೆಯಿಂದ ಈ ಕೆಲಸಕ್ಕೆ ವಹಿಸಿದೇನೆ ನಂಬಿಕೆಯಿಂದ ಕೆಲಸ ಮಾಡಿಕೊಡಬೇಕು."

"ಆಗಲಿ ಮಹಾರಾಯಾ. ಇಂಥವೆಷ್ಟು ಮಾಡಿಲ್ಲ!" ಎಂದು ಭೂತಪ್ಪ ಬೀಡಿ ಹಚ್ಚಲಿಕ್ಕೆ ಪೊಟ್ಟಣ ತೆಗೆದ ಏತನ್ಮಧ್ಯೆ ಬಸವರಾಜ ತಡೆದು, "ಚಹಕ್ಕೆ ಇಡಿನರೆ? ನಿಲ್ಲು ಆಮೇಲೆ ಎಳೆಯುವಂತೆ" ಎಂದ.

"ಅದಕ್ಕೇನಂತೆ ಇಡಿಸು. ಈಗ ಒಂದು ಎಳೀತೇನೆ, ಚಾ ಕುಡಿದ ಮೇಲೊಂದು ಹೊಡಿತೇನೆ," ಎಂದ ಭೂತಪ್ಪ ಗಂಭೀರದ ಕಂಠದಲ್ಲಿ. ಬಸವರಾಜ ಮಾಡದಲ್ಲಿಟ್ಟಿದ್ದ ಕೀಲಿ ಕೈ ತೆಗೆದುಕೊಂಡು ಅಟ್ಟಕ್ಕೆ ಬಂದ. ಬೇಗ ಬೇಗ ಬೀಗ ತೆಗೆದು ಹಾಲಮ್ಮನನ್ನು ಹೊರಕ್ಕೆ ಎಳೆದ. ಅವಳು ಅತ್ತೂ ಅತ್ತೂ ನಿದ್ದೆ ಹೋಗಿದ್ದಳು. ಇವನ ಶಬ್ದದಿಂದ ಆಕೆಗೆ ಥಕ್ಕನೆ ಎಚ್ಚರವಾಯಿತು. ಅಸ್ತವ್ಯಸ್ತ ಉಡಿಗೆಗಳನ್ನು ಸರಿಮಾಡಿಕೊಂಡು ಒಂದೆಡೆ ಅಪರಾಧಿಯಂತೆ ನಿಂತಳು.

"ಹಾಲಿ, ಚಹಕ್ಕಿಡುತ್ತೀಯಾ?"

"ಹೂ, ಇಡೂಂದರೆ ಇಡ್ತೇನೆ"

"ಹೋಗು, ಇಡು ಹೋಗು. ನನ್ನ ಮಾತು ಕೇಳಿದ್ದರೆ ನಾನ್ಯಾಕೆ ಹೊಡೆಯುತ್ತಿದ್ದೆ. ಗುರುಹಿರಿಯರ ಮಾತಿಗೆ ಬೆಲೆ ಕೊಡಬೇಕು."

"ನೀವು ಒಳ್ಳೆಯ ಕೆಲಸಕ್ಕಾಗಿ ಹೊರಗೆ ಕಳಿಸಿದ್ದರೆ ನಾನು ಸಂತೋಷದಿಂದ ಹೋಗುತ್ತಿದ್ದೆ. ನನ್ನ ಮೇಲೆ ದಬ್ಬಿ ನೀವು ಕೆಳಗೆ ."

ಅವಳ ಮಾತಿನ ಜಾಡನ್ನು ಬದಲಾಯಿಸಲು ಅವನು "ಹೋಗು, ಚಹಕ್ಕಿಡು" ಎಂದ ರೇಗಿ ಹೇಳಿದ.

"ಶರಿಯಮ್ಮ ಬಂದು ಹೋದಳು. ನನ್ನ ಮುಂದೆ ಯಾಕೆ ಬಡಿವಾರ ಮಾಡ್ತೀರಿ. ಹಾಗೆ ಉರಿಸಿಕೊಂಡು ತಿನ್ನಬೇಡಿರಿ. ಹೆಂಗಸಿನ ಉಸಿರು ಮಹಾ ಕೆಟ್ಟದು ಅವನೂ ಶನಿಗೇಡಿ ಉಮಾಪತಿ ಹೀಗೆ ಮಾಡ್ತಾನೆ."

"ಬಹಳ ಉಸಿರು. ಹೋಗೆ ಮಹಾ ಪತಿವ್ರತಿಯೆ. ಈಕೆ ಹೇಳಿಬಿಟ್ಟರೆ ಕೆಟ್ಟದಾಗಿ ಹೋಗುತ್ತೆ .. ಓಹೋ! ..."

"ನನ್ನ ಪತಿವ್ರತಾ ಸುದ್ದಿ ಬಗ್ಗೆ ಬರಬೇಡರಿ. ಅದೊಂದು ಬಿಟ್ಟು ಮಾತನಾಡಿ. ಇವ್ರೊತ್ತೇ ಸಾಯಲಿ ನಾನೇನಾದರೂ ಮಾಡಿ ಬಿಟ್ಟೇನು" ಎಂದು ಚಾಮುಂಡಿಯಂತೆ ಆಕೆ ಘೋರ್ಜಿಸಿದಳು. ಬಸವರಾಜ ಅವಾಕ್ಕಾದ ವಿಷಯ ಹಾರಿಸಲು "ನೀನೊಳ್ಳೆ ಹೆಂಡತಿ, ಹೋಗು" ಎಂತ ಅಟ್ಟದಿಂದ ಮೃದುವಾಗಿ ಕೆಳಗಿಳಿಯಲು ಅವಳನ್ನು ದೂಡಿದ.

ಭೂತಪ್ಪ ಬಸವರಾಜನನ್ನು ಕಾಯುತ್ತಲೇ ಇದ್ದ. ಇನ್ನು ಮುಂದೆ ಬಸವರಾಜ ಮಾಟದ ಕೆಲಸಕ್ಕೆ ಒದಗಿಸಬೇಕಾಗಿರುವ ಸಾಮಾನುಗಳನ್ನು ಕುರಿತಾಗಿ ಯೋಚಿಸುತ್ತಿದ್ದ. ಅವನಿಗೆ ಅತಿ ಮುಖ್ಯವಾಗಿ ಬೇಕಾಗಿದ್ದ ವಸ್ತುವಿನ ಜ್ಞಾಪಕ ಬಂದು ತಟ್ಟನೆ ಬಸವರಾಜನನ್ನು ಕೂಗಿದ. ಬಸವರಾಜ ಬಂದು "ಏನು ಭೂತಣ್ಣ?" ಎಂದ.

"ಏನೂ ಇಲ್ಲ. ಗರ್ಭಿಣಿ ಹಸ್ತಕ್ಕೆ ಏನು ಮಾಡುವುದೂಂತ?"

ಬಸವರಾಜನ ಮುಖ ಕಪ್ಪಿಟ್ಟಿತು. ಗರ್ಭಿಣಿ ಹಸ್ತ ಸುಲಭವಾಗಿ ದೊರೆಯಲಾಗದ ವಸ್ತು. ತನ್ನ ಕೆಲಸವೆಲ್ಲಿ ವಿಫಲವಾಗುವುದೋ ಎಂದು ಅವನು ಯೋಚಿಸಿದ.

"....ಅದೇ ಒಂದು ನೋಡು ಭೂತಣ್ಣ. ನಮ್ಮ ಕೈಯಿಂದಾಗದ ಕೆಲಸ. ನೀನೆ ಎಲ್ಲಿಯಾದರೂ ನೋಡಬಾರದೆ ?"

"ನೋಡುವೆ. ಸಿಕ್ಕದೇ ಇದ್ದರೆ ನಮ್ಮ ಕೆಲಸ ಆಗುವುದಿಲ್ಲ ಬಸವರಾಜು."

"ಯಾವ ರೀತಿಯಾದರೂ ತರಿಸಬೇಕಲ್ಲ."

"ಅಯ್ಯೋ ಶಿವನೇ, ಅದು ಅಂಗಡಿಯಲ್ಲಿ ವ್ಯಾಪಾರಕ್ಕೆ ಸಿಕ್ಕುವ ಸಾಮಾನೆ?"

"ಹಂಗಿದ್ದರೆ ಯಾಕಷ್ಟು ಯೋಚನೆ ಮಾಡಬೇಕಾಗಿತ್ತು."

"ಊರಿನಲ್ಲಿ ಯಾರಾದರೂ ಗರ್ಭಿಣಿ ಹೆಂಗಸರು ಸತ್ತಿದಾರೆಯೊ ಎಂತ ನೋಡಿಕೊಂಡಿದ್ದು ಅವರೇನಾದರೂ ಹೂಳುವ ನೇಮುದವರಿರ ಬೇಕು. ಸುಡುವ ಜನರಾದರೆ ಏನು ಬಂತು ಹೇಳು?"

"ಸತ್ತಿದ್ದನ್ನು ಹೂಳಿದನಂತರ ತೆಗೆದು ಕೈ ಕಡಿದುಕೊಂಡು ಬರ ಬೇಕೆಂತಿಯಾ ?"

"ಹುಂ, ಅಲ್ಲದೆ ಏನು ?"

"ನೀನು ತುಂಬಾ ಧೈರ್ಯದವನು ಭೂತಣ್ಣ" ಎಂದ ಬಸವರಾಜ. ಭೂತಪ್ಪ ರೋಮಾಂಚಯುಕ್ತನಾಗಿ ಹೇಳಿದ :

"ಇಲ್ಲದೆ ಇದ್ದರೆ ನಮ್ಮ ಕೆಲಸ ನಡೆಯಲ್ಲ. ಇಂಥವೆಷ್ಟೋ ಮಾಡಿ ದೇವೆ. ದೇವರು ನಮ್ಮನ್ನು ಅದಕ್ಕಾಗಿ ಹುಟ್ಟಿಸಿದ್ದಾನೆ. ಚಹ ತೆಗೆದುಕೊ, ತಾಯಿ ತಂದಳು. ಸುಟ್ಟೀತು ಅಲ್ಲೇ ಇಟ್ಟು ಬಿಡಮ್ಮ. ಯಾಕೆ ಬಸವ ರಾಜು, ಯಾಕೋ ತಾಯಿ ಬಹಳ ಕೃಶಳಾಗಿ ಹರಿಗೆಟ್ಟಿದಾಳೆ."

"ಆಕಿರುವುದೇ ಹಾಗೆ. ಒಬ್ಬೊಬ್ಬರ ಹುಟ್ಟುಗುಣ."

"ಹಾಗೆಂದರೆ ಹೇಗೆ ? ಗ್ರಹಗಳ ಚೇಷ್ಟೆ ಇದ್ದರೆ ...ಅಮ್ಮನ ಹೇಳಿಕೆ ಕೇಳಿಸು ಒಂದು ದಿನ."

"ಹುಂ ಆಗಲಿ. ಅಲ್ಲಾ, ಸತ್ತ ಗರ್ಭಿಣಿ ಸಿಗದಿದ್ದರೆ ಹೇಗೆಂದು ಯೋಚನೆ ?...."

"ನಮ್ಮ ಕೆಲಸವಾಗಬೇಕಾದರೆ ದುಡ್ಡು ಕೊಟ್ಟು ಕಡಿಸಬೇಕು" ಎಂದ ಸುಪ್ರಸಿದ್ಧ ಮಾಟಗಾರ ಭೂತಣ್ಣ.

೧೯

ಶಿವಶಂಕರ ಪಾಟೀಲರು ಮಾಲಿನಿಯನ್ನು ಬಿಳಿಸನೂರಿಗೆ ನಾಲ್ಕು ದಿವಸಗಳ ಮಟ್ಟಿಗಾದರೂ ಕರೆದುಕೊಂಡು ಬರಬೇಕೆಂದು ಹವಣಿಸುತ್ತಿದ್ದರು; ಇದಕ್ಕೆ ಉಮಾಪತಿಯೂ ಒಪ್ಪಿಗೆಯಿತ್ತಿದ್ದ. ಶಿವಶಂಕರ ಪಾಟೀಲರು ಶಿವಣ್ಣಯ್ಯನವರ ಕೈಯಲ್ಲಿ ಓದಿದವರು. ಇತ್ತೀಚಿಗಂತೂ ಗುರು ಶಿಷ್ಯರಲ್ಲಿ ಅಪಾರ ಆತ್ಮೀಯ ಭಾವ ಬೆಳೆದು ಬಂದಿತ್ತು. ಆದ್ದರಿಂದ ಗುರುಗಳ ಮಗಳನ್ನು ನಾಲ್ಕುದಿವಸ ಕರೆದು ತರಬೇಕೆಂದು ಅವರು ನಿರ್ಧರಿಸಿದ್ದರು. ಶಿವಶಂಕರ ಪಾಟೀಲರ ಸಂಬಂಧ ಹೊಸಳ್ಳಿಯಲ್ಲೂ ಇತ್ತು. ಆ ಒಡನಾಟದಿಂದ ಅವರಿಗೆ ಉಮಾಪತಿ ಚಿರಪರಿಚಿತನಾಗಿದ್ದ. ಒಮ್ಮೆ ಬಿಳಿಸನೂರಿನ ತೇರಿಗೆಂದು ಉಮಾಪತಿ ಬಂದಾಗ ಪಾಟೀಲರು ಮಾಲಿನಿಯನ್ನು ಕಳುಹಿಸಿಕೊಡಲಿಕ್ಕೆ ಅವನನ್ನು ಕೇಳಿದರು.

"ಯಾರು ಬೇಡಾಂತಾರೆ ಶಂಕರಣ್ಣ, ಅಗತ್ಯ ಕಳಿಸಿಕೊಡುತ್ತೇನೆ. ನಾಲ್ಕು ದಿನ ಸ್ಥಳಬಿಟ್ಟು ಬೇರೆಕಡೆ ಹೋದರೆ ಆಕೆಗೂ ಸ್ವಲ್ಪ ಬೇಸರ ಹೋಗುತ್ತದೆ!"

"ಮತ್ತೆ ಯಾವಾಗ ಕಳುಹಿಸಿಕೊಡುತ್ತೀಯೆ?"

"ನಾನು ಊರಿಗೆ ಹೋದಕೂಡಲೆ ಹೇಮಗಿರಿಯ ಸಂಗಡ ಕಳಿಸುತ್ತೇನೆ. ಬೇಕಾದರೆ ಮುದೇನೂರಿಗೂ ಹೋಗಿಬರಲಿ."

"ಮುದೇನೂರಿನಲ್ಲಿ ಯಾರಿದಾರೆ?"

"ನಮ್ಮ ತಂಗಿ ಕೊಟ್ಟಿದ್ದೇವೆ."

"ಯಾರ ಮನೆಗೆ?"

"ಶಿವಮೂರ್ತಿ ಅಂತ ಇದಾನೆ"

"ಆ ಮೇಷ್ಟ್ರು ಶಿವಮೂರ್ತಿ"

"ಹೂಂ, ಹೌದು. ತಿಳ್ದಗಿದಾನೆ ನೋಡು"

"ಗೊತ್ತಾಯಿತು. ನಮಗೂ ಅಲ್ಪ ಪರಿಚಯ ಇದೆ ಸ್ವಾಮಿ."

ಬಿಳಿಸನೂರಿನ ತೇರು ಮುಗಿದನಂತರ ಉಮಾಪತಿ ಹೊಸಳ್ಳಿಗೆ ಹೋದ. ಒಂದೆರಡು ವಾರ ಕಳೆದಾದಮೇಲೆ ಹೇಮಗಿರಿಯ ಸಂಗಡ

ಮಾಲಿನಿಯನ್ನು ಕಳುಹಿಸಿಕೊಟ್ಟ. ಈಗ ಪರ ಊರಿಗೆ ಬಂದಿದ್ದರಿಂದ, ಹವಾಗುಣದ ವ್ಯತ್ಯಾಸದಿಂದ, ಪಾಟೀಲರ ಮನೆಯ ಸೌಮ್ಯ ವಾತಾವರಣ ದಿಂದ, ರಸಪುಷ್ಟ ಆಹಾರದಿಂದ ಮಾಲಿನಿಯ ಆರೋಗ್ಯಭಾಗ್ಯ ತುಂಬಾ ಸುಧಾರಿಸಿತು. ಗೌರಮ್ಮ ಶಿವಶಂಕರ ಪಾಟೀಲರ ಪತ್ನಿ, ಆಕೆ ಒಂದು ದಿನ ಮಾಲಿನಿಯನ್ನು ಕೇಳಿದಳು:

"ನಿನಗೆ ಅಲ್ಲಿ ಸುಖವಾಗಿದೆಯೇ?"

"ಹುಂ. ಯಾವುದಕ್ಕೂ ಕೊರತೆಯಿಲ್ಲಕ್ಕ" ಎಂದು ಮಾಲಿನ ತನ್ನ ಕಷ್ಟಮಯ ಜೀವನವನ್ನು ಮುಚ್ಚಿ ಹೇಳಿದಳು.

"ತಾಯಿ! ನಿನಗೆ ತಂದೆ ನೋಡುವಂತಾಗುವುದಿಲ್ಲವೆ?" ಎಂದು ಗೌರಮ್ಮನ ಮೃದು ಸವಾಲು.

"ಇಲ್ಲ. ನಾನು ತೌರುಮನೆಯ ಆಸೆ ಬಿಟ್ಟಿದ್ದೇನಕ್ಕ "

"ಸುಳ್ಳು ಹೇಳಬೇಡ. ನಿನ್ನ ಖಾಸ 'ಅಕ್ಕ' ಎಂತ ತಿಳಿದುಕೊಂಡು ಹೇಳು, ತಾಯಿ."

"ಅಕ್ಕಾ, ನೀನು ಯಾರೆದುರಿಗೂ ಹೇಳುವುದಿಲ್ಲೆಂದು ಭರವಸೆ ಕೊಟ್ಟಗೆ ಮಾತ್ರ ಹೇಳುತ್ತೇನೆ" ಎಂದು ಮೆಲುದನಿಯಲ್ಲಿ ಹೇಳಿದಳು.

"ಛೆ! ಎಂಥ ಮಾತು ತಂಗಿ. ಅಷ್ಟು ಪ್ರೇಮವಿಲ್ಲದಿದ್ದರೆ ನಾವ್ಯಾಕೆ ಕರೆದುಕೊಂಡು ಬರುತ್ತಿದ್ದೆವು ಹೇಳು ನಾಚಬೇಡ"

"............ ..."

"ಹೇಳು, ತಾಯಿ ಹೇಳು. ಅದಕ್ಕೇನಂತೆ"

ಎಂದು ಗೌರಮ್ಮ ಮಾಲಿನಿಯನ್ನು ಹೇಳಲು ಪ್ರೇರೇಪಿಸಿದಳು. ಮಾಲಿನಿ ಒಮ್ಮೆ ಸುತ್ತಲೂ ನೋಡಿದಳು. ತದನಂತರ ಗೌರಮ್ಮನ ಬಳಿ ಹೋಗಿ ಕುಳಿತುಕೊಂಡು "ಅಕ್ಕಾ! ಯಾರಿಗೆ ತೌರುಮನೆ ಎಂದರೆ ಆಸೆ ಇರುವುದಿಲ್ಲ? ರೇಣುಕಣ್ಣ, ಅಪ್ಪನ್ನ ನೋಡಬೇಕೆಂತ ಬಹಳ ಆಸೆ ಯಾಗಿದೆ. ನೀನು—ನಾನು ಹೇಳಿದೆಂತ ಕರೆಯಿಸಬೇಡ. ಯಾವುದೋ ಕೆಲಸದ ನೆವ ಹೇಳಿ ಒಂದುದಿನವಾದರೂ ಕರೆಸು.... ನನಗಾದರೂ ಅಂತಹ ಯಾವ ವರ್ಷ. ನನ್ನ ಜೊತೆಗೆ ಓದುತ್ತಿದ್ದ ಹೆಣ್ಣುಮಕ್ಕಳಿಗೆ ಸುಮಾ ರಾಗಿ ಯಾರಿಗೂ ಲಗ್ನವಾಗಿಲ್ಲ ಆ ನಾಗರತ್ನ ಇನ್ನೂ ಹೈಸ್ಕೂಲು ಮೊದಲನೆಯ ತರಗತಿಯಲ್ಲಿ ಓದುತ್ತಿದ್ದಾಳೆ."

"ಉಮಾಪತಿ ನಿನ್ನ ಆನೆ ವ್ರಾಪ್ತಿಸಲು ಏನೆಂದು ಅನ್ನುತ್ತಾನೆ?"

"ಅವರಿಗೆ ಕೋಪ ಮೂಗಿನ ಮೇಲೆ ಈ ವಿಷಯ ಎತ್ತಿದರೆ ಅದೆಂಥಾದ್ದೋ ವಿಷದ ಇಂಜಕ್ಷನ್ ಕೊಟ್ಟು ಸಾಯಿಸುತ್ತೇನೆ ಎಂದು ಹೆದರಿಸಿದ್ದಾರೆ" ಎಂದಳು. ಇದೀಗ ಗೌರಮ್ಮನಿಗೆ ನಿಜಸ್ಥಿತಿ ತಿಳಿಯಿತು. ಉಮಾಪತಿಯ ವಜ್ರ ಹೃದಯದ ಬಗ್ಗೆ ಅತ್ಯಂತ ತಿರಸ್ಕಾರ ಉಂಟಾಯಿತು. ವಿಷಾದದಿಂದ ಗೌರಮ್ಮ ನುಡಿದಳು

"ಎಲ್ಲ ಕರ್ಮಗತಿ. ಒಬ್ಬಳೇ ಒಬ್ಬ ಮಗಳು ಏನೋರಿಗೆ ಛಿ! ಏನನ್ಯಾಯ ." ಎಂದಳು ಗೌರಮ್ಮ ಅವಳ ಕಣ್ಣು ಹನಿಗೂಡಿದ್ದವು. ಮಾಲಿನಿ ತನ್ನ ಕಣ್ಣೀರನ್ನು ಸೀರೆಯ ಅಂಚಿನಿಂದ ಒರೆಸಿಕೊಳ್ಳುತ್ತ

"ಕಣ್ಣೀರು ಹಾಕಬೇಡ ಗೌರಕ್ಕ. ನಾನು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗತಿ. ಗತ ಜನ್ಮದ ಕೃತ್ಯ ಈ ರೀತಿಯ ಫಲಕ್ಕೆ ಕಾರಣ ಆಗಿದೆಯೆಂದು ಅನ್ನಿಸುತ್ತದೆ" ಎಂದಳು.

"ಆಗಲಿ ಅನುಭವಿಸು, ವಿಧಿ ತಂದೊಡ್ಡಿದ್ದನ್ನು. ನಾನು ಪುಟ್ಟಪ್ಪನ ಕೈಲಿ ಹೇಳಿ ಕಳಿಸುತ್ತೇನೆ ಆದಷ್ಟು ಮಟ್ಟಿಗೆ ಬರೋಹಾಗೆ ಮಾಡುತ್ತೇನೆ" ಎಂದು ಗೌರಮ್ಮ ಪುಟ್ಟಪ್ಪನಿಗೆ ಏನೇನೊ ಹೇಳಿ ಕಳುಹಿಸಿದಳು.

"ತಾಯಿ, ನೀನು ಮೂರು ತಿಂಗಳ ಬಸುರಿ. ಸರಿಯಾಗಿ ತಿಂದು, ಮೈ ತುಂಬಿಕೊಂಡಿರಬೇಕು "

"ವ್ಯಸನವೇನೂ ಇಲ್ಲ ಆದರೆ ಮೊದಲನೆಯ ಹೆರಿಗೆ ತೌರು ಮನೆಯಲ್ಲಿ ಆಗುವಂತಿಲ್ಲ ಎಂತ ಯೋಚನೆ ಹೊರತು ಇನ್ನೇನವ್ವ ನನಗೆ!"

"ಇವೊತ್ತು ಪುಟ್ಟಪ್ಪನ ಹತ್ತಿರ ಹೇಳಿ ಕಳಿಸಿದ್ದೇನೆ, ಹೇಳುತ್ತಾರೆ. ಯೋಚನೆ ಮಾಡಬೇಡ. ದೇಹ ಕೊರಗಬಾರದು ನೋಡು" ಎಂದಳು. ಅದೇ ದಿನ ಪುಟ್ಟಪ್ಪ ಹರಿಹರಕ್ಕೆ ಹೋದ. ಹೋದ ಸಾಯಂಕಾಲಕ್ಕೆ ಶಿವಕುಮಾರರು ಬೆಂಗಳೂರಿನಿಂದ ಬಂದರು. ಶಿವಕುಮಾರ ಶಿವಶಂಕರ ಪಾಟೀಲರ ಜ್ಯೇಷ್ಠಪುತ್ರ ಅವರು ಬಿ ಎಸ್‌ಸಿ, ಎಲ್.ಎಲ್.ಬಿ ಪಾಸು ಮಾಡಿಕೊಂಡಿದ್ದರು ಹಿಂದೆ ಸ್ಟೇಷನ್ನಿನಲ್ಲಿ ರೇಣುಕಪ್ರಸಾದನಿಗೆ ಕಳುಸುವ ಏರ್ಪಾಟು ಮಾಡುವೆ ಎಂಬ ಭರವಸೆಯಿತ್ತು, ಸಮಾಧಾನಪಡಿಸಿದ್ದರು. ಮಾಲಿನಿಯ ಕರುಣಾಮಯ ದುರಂತ ಜೀವನವನ್ನು ಈ ಹಿಂದೆ

ಶಿವಣ್ಣಯ್ಯನವರಿಂದ ಅವರು ಕೇಳಿ ತಿಳಿದುಕೊಂಡಿದ್ದರು. ಈಗ ಅದರ ಬಗ್ಗೆ ಹೆಚ್ಚಿನ ವಿವರಗಳು ತಿಳಿದಹಾಗಾಯಿತು. ಉಮಾಪತಿಯನ್ನು ಕಂಡು ಆದಷ್ಟುಮಟ್ಟಿಗೆ ಬುದ್ಧಿವಾದವನ್ನು ಹೇಳುತ್ತೇನೆಂದು ಅವರೂ ಮಾಲಿನಿಗೆ ಭರವಸೆ ಕೊಟ್ಟಿದ್ದರು. ಆದರೆ ಶಿವಕುಮಾರ ನಾಟಕಕಾರರು. ರಾತ್ರಿ ಹನ್ನೆರಡು ಘಂಟೆಯವರೆವಿಗೆ ಏಕನಿಷ್ಠೆಯಿಂದ ಬರೆಯುತ್ತಿದ್ದರು. ಪಕ್ಕದಲ್ಲಿ ಕಾಫಿಯ ಥರ್ಮ್ಯಾಫ್ಲಾಸ್ಕ್ ಇದ್ದೇ ಇರಬೇಕು. ಈ ಹಲವು ಕಾರಣಗಳಿಂದಾಗಿ ಹರಿಹರಕ್ಕೆ ಬರುವುದಾಗಲಿ, ಹೊಸಳ್ಳಿಗೆ ಹೋಗುವುದಾಗಲಿ ಅವರಿಗೆ ಆಗಲಿಲ್ಲ. "ಅಣ್ಣಾ! ಆದಷ್ಟು ಅಪ್ಪಾವರನ್ನು ಕಳಿಸಿಕೊಡಲಿಕ್ಕೆ ಪ್ರಯತ್ನಮಾಡಣ್ಣ" ಎಂದು ಮಾಲಿನಿ ಅವರಿಗೆ ಕಾಟ ಕೊಡುತ್ತಿದ್ದಳು.

ಒಂದು ದಿನ ಉಮಾಪತಿ ಮಾಲಿನಿ ನೋಡಲು ಬಿಳಿಸನೂರಿಗೆ ಬಂದ. ಮನೆಯಲ್ಲಿ ಗಂಡಸರು ಯಾರೂ ಇರಲಿಲ್ಲ. ಶಿವಕುಮಾರರು ವಿಹಾರ ಹೋಗಿದ್ದರು. ಮನೆಯಲಿದ್ದ ಹೆಣ್ಣುಮಕ್ಕಳು ಅವನಿಗೆ ಚಹಾ ಮಾಡಿಕೊಟ್ಟರು. ಅವನು ಶಿವಕುಮಾರರನ್ನು ಹುಡುಕಿಕೊಂಡು ಹೊರಟ. ಹರಿಹರದ ರಸ್ತೆಯಲ್ಲಿ ವಿಶಾಲವಾದ ಮಾವಿನತೋಪುಗಳ ಬಳಿ ನಾಲ್ಕೈದು ಜನಗಳು ಕಂಡರು. ದೂರದಿಂದಲೇ ಶಿವಕುಮಾರ ಉಮಾಪತಿಯನ್ನು ನೋಡಿ ಹುಸಿನಕ್ಕ.

"ಉಮಾಪತಿ, ಯಾವಾಗ ಬಂದೆ, ಊರಕಡೆಗೆ ಚೆನ್ನಾಗಿದ್ದಾರೆಯೆ?"

"ಹುಂ. ಚೆನ್ನಾಗಿದ್ದಾರೆ" ಎಂದು ಉಮಾಪತಿ ಕಂದಾಚಾರದ ಮಾತುಗಳನ್ನಾಡಿದ. ಬೆಳಕು ಕಳೆದು ಕತ್ತಲಾಗುತ್ತ ಬಂತು. ಸೂರ್ಯನು ಕೆಂಪು ಬಟ್ಟೆಗಳ ಪರದೆಯಿಂದ ಆವೃತನಾದ. ಪಕ್ಷಿಗಳು ಚಿಲಿಪಿಲಿಗುಟ್ಟುತ್ತಾ ಗೂಡು ಸೇರುತ್ತಿದ್ದುವು ದಾವಣಗೆರೆಗೆ ನದಿಯು ಮರಳನ್ನು ಹೇರಿಕೊಂಡು ಹೋಗುವ ಬಸ್ಸು ಧೂಳನ್ನೆಬ್ಬಿಸಿಕೊಂಡು ಹೋಯಿತು.

"ಇಲ್ಲಿಂದ ಹರಿಹರ ಎಷ್ಟಾಗುತ್ತೆ?" ಉಮಾಪತಿ ಕೇಳಿದ.

"ಐದು ಮೈಲಿ" ಎಂದರು ಶಿವಕುಮಾರ.

"ಹರಿಹರದಲ್ಲಿ ಚಿತ್ರ ಯಾವುದಿದೆ ಎಂತ ಗೊತ್ತೇನು ?"

"ತೀನ್ ಬತ್ತಿ. ಚಾರ್ ರಾಸ್ತಾ. ಶಾಂತಾರಾಮರ ದಿಗ್ದರ್ಶನ."

"ಹಾಗಾದರೆ ಹೋಗೋಣವೆ ?"

"ನನಗೆ ಯಾವ ಚಿತ್ರ ನೋಡುವ ಇಷ್ಟವಿಲ್ಲ. ನೀನು ಮಾಲಿನಿ ಕಳಿಸಿಕೊಡುತ್ತೇನೆಂತ ಭರವಸೆ ಕೊಟ್ಟರೆ ಮನಸ್ಸಿಗೆ ನೆಮ್ಮದಿಯಾದೀತು"

"ಅದೊಂದು ಬಿಟ್ಟು ಬೇರೆ ಯಾವುದಾದರೂ ಕೇಳಿ ಶಿವಕುಮಾರ್. ಅದೊಂದನ್ನು ಬಿಟ್ಟು "

"ಅದೊಂದನ್ನು ಬಿಟ್ಟು ನನಗೆ ಮಾತನಾಡಲಿಕ್ಕೆ ಬರೋದಿಲ್ಲ."

"ಇರಲಿ ಬಿಡಿ ಶಿವಕುಮಾರ. ಏನಂಥ ಅವಸರ. ಮನೆಯಲ್ಲಿ ಆ ವಿಚಾರ ಮಾತಾಡುವ."

"ಆಗಲಿ. ಮನೆಯಲ್ಲೇ ಆ ವಿಚಾರ ಎತ್ತೋಣಂತೆ" ಎಂದು ಶಿವಕುಮಾರ ಆ ಮಾತನ್ನು ಅಲ್ಲಿಗೇ ಸಮಾಪ್ತಿಮಾಡಿದರು. ಆದಿನ ರಾತ್ರಿ ಊಟ ಮಾಡಿದಮೇಲೆ ಪಾಟೀಲರು ಮತ್ತು ಗೌರಮ್ಮ ಮತ್ತೆ ಮಾತು ತೆಗೆದರು. ಮಾಲಿನಿ ಅಡುಗೆ ಮನೆಯಲ್ಲಿಯೇ ಅವರ ಮಾತನ್ನು ಲಾಲಿ ಸುತ್ತಿದ್ದಳು.

"ಏನು ಉಮಾಪತಿ, ಕಳಿಸಿಕೊಡುವ ನಿರ್ಧಾರ ಆಯಿತಷ್ಟೆ."

"ಎಲ್ಲಿಗೆ ಗೌರಕ್ಕ? ಎಲ್ಲಿಗೆ ಕಳುಹುವ ವಿಚಾರ?"

"ಎಲ್ಲಿಗೇಂತ ಏನೂ ಗೊತ್ತಿಲ್ಲದವರು ಮಾತನಾಡಿದಹಾಗೆ ಅನ್ನುತ್ತಾನೆ" ಎಂದರು ಶಿವಕುಮಾರ. ಮಗನ ಮಾತನ್ನು ಕೇಳಿ ಶಿವಶಂಕರರೂ ಕೂಡ ಹೇಳಿದರು:

"ಮನುಷ್ಯ ಸ್ವಲ್ಪ ದೊಡ್ಡ ಸ್ಥಾನಕ್ಕೆ ಬಂದರೆ ಸಾಕು, ಬಡವರು ಬಗ್ಗರು ಎಂಬೋದನ್ನೇ ಮರೆತು ಬಿಡುತ್ತಾನೆ "

"ನಾನ್ಯಾವ ಅಂಥ ದೊಡ್ಡ ಕೆಲಸದಲ್ಲಿದ್ದೇನೆಂದು ಹೇಳ್ತಿದ್ದೀರಿ. ಒಳ್ಳೇ ಮಾತು "

"ಹಾಗಲ್ಲ ಉಮಾಪತಿ. ನಿನ್ನ ಹಿಡಿದು ಲಗ್ನಮಾಡಿದವರನ್ನು ಪ್ರತಿಯೊಂದು ತುತ್ತು ಅನ್ನ ಇಟ್ಟುಕೊಳ್ಳುವಾಗಲೂ ನೆನೆಸುತ್ತಿರಬೇಕು. ಇಲ್ಲದೇ ಇದ್ದರೆ ದೇವರು ಮೆಚ್ಯಾನೆ. ಸಾವಿರ ವರ್ಷದ ಸಂಬಂಧ ಅಂತ ಯಾಕೆ ಹೇಳುತ್ತಾರೆ. ಕಳಿಸಬೇಕು; ಕರೆಯಿಸಬೇಕು; ನೀನೂ ಪ್ರೇಮದಿಂದ ಹೋಗಿ ಬಂದು ಮಾಡುತ್ತಿರಬೇಕು."

"ಕಳಿಸುವ ಅದೊಂದು ವಿಚಾರ ಎತ್ತಲೇಬೇಡಿ. ಮೈಯಲ್ಲಿ ಉರಿ

ಬಿದ್ದಂತಾಗುತ್ತೆ ಆ ಕಾಗದಗಳನ್ನು ತಂದಿಡುವೆ. ನನ್ನ ಕಾಗದ ಮತ್ತು ಅವರ ಕಾಗದ ಹೋಲಿಸಿ ನೋಡಿ ಎಂದ. ಈ ಮುಂಚೆ ಶಿವಶಂಕರರು ಇಬ್ಬರೆಯಲ್ಲಿ ನಡೆದ ಕಾಗದಗಳನ್ನು ಓದಿ, ಸಮಾಲೋಚಿಸಿದ್ದರು. ಅದಕ್ಕೆಂದೇ ಉಮಾಪತಿ ಸುಳ್ಳು ಹೊಡೆಯುವುದರಲ್ಲಿ ಪ್ರವೀಣ ಎಂಬುದೂ ಗೊತ್ತಿತ್ತು. ಅವರು ಹೇಳಿದರು

"ನಾನು ನೋಡದಿರುವ ಕಾಗದಗಳಲ್ಲ ಬಿಡಯ್ಯ. ಎಂಥ ಒರಟು ನಿನ್ನ ಕಾಗದ. ಗುರುಹಿರಿಯರೂ ಎಂಬೋ ದೃಷ್ಟಿ ಸ್ವಲ್ಪವಾದರೂ.... ಧೂತ್!"

"ಆಗಿ ಹೋಗಿದ್ದೆಲ್ಲಾ ಒಳ್ಳೆಯದೇ ಶಂಕರಣ್ಣ. ಯಾಕೆ ಆ ಘಟನೆಗಳ ಕಹಿ ನೆನಪು."

"ಪುನಃ ಕೂಡಿದರೆ ಒಡನಾಟ ಬೆಳೆಯುತ್ತದೆ" ಎಂದು ಕುಕ್ಕಲಾತಿಯಿಂದ ಗೌರಮ್ಮ ಹೇಳಿದಳು.

"ನೀವು ಏನೇ ತುಪ್ಪ ಹಚ್ಚಿ, ನಾನು ಕಳಿಸೋದಿಲ್ಲ ಎಂದಮೇಲೆ ಒಂದು ಮಾತು" ಎಂದು ಅದರ ಬುಡವನ್ನು ಹೇಳ ಹೆಸರಿಲ್ಲದೆ ಉಮಾಪತಿ ಕಿತ್ತು ಹಾಕಿದ. ಶಿವಶಂಕರ ಪಾಟೀಲರಿಗೂ ಸ್ವಲ್ಪ ರೇಗಿತು.

"ನಿಮ್ಮ ತಂಗಿಗೂ ಹೀಗೆ ನಡೆಸಿಕೊಳ್ಳುತ್ತಾರೇನು?"

"ಹೇಗೆ?" ಎಂದ ಉಮಾಪತಿ ಬೀಡಿ ಹಚ್ಚಿಕೊಳ್ಳುತ್ತ.

"ತೌರುಮನೆಯವರ ನೆನಪು ತೆಗೆಯಬಾರದೆಂಬ ನಿರ್ಬಂಧ."

"ಅವಳಿಗೆ ಅತ್ತೆಮನೆಯಲ್ಲಿ ಯಾರೂ ಅನ್ನುವಂತಿಲ್ಲ"

"ಯಾಕೆ ಅನ್ನುತ್ತಾರೆ? ಗಟ್ಟಿಗರನ್ನು ಕಂಡರೆ ಹೆದರಿದ ಇಲಿಯಂತಾಗುವುದು. ಅಳ್ಳೆದೆಯವರ ಮೇಲೆ ಗುರ್ರೆಂದು ಬೀಳೋದು. ಏನೋ ನಿನ್ನ ಪುಣ್ಯ ವಿಶೇಷದಿಂದ ಸಂಪನ್ನ ಬೀಗರು ಸಿಕ್ಕಿದಾರೆ. ಸರಿಯಾದ ವರ್ತನೆಯಿಂದ ಹೋಗಬೇಕು. ಹೆಣ್ಣುಕೊಡುವುದು ಅಳಿಯನಿಂದ ಹೊಲಸು ಮಾತುಗಳನ್ನು ಅನ್ನಿಸಿಕೊಳ್ಳುವುದಕ್ಕಲ್ಲ. ಸುಸಂಸ್ಕೃತ ತರುಣರೆಂದೆನ್ನಿಸಿಕೊಂಡಿರುವ ನಿಮ್ಮಂಥ ಮಹಾನುಭಾವರುಗಳೇ ದುರ್ವಾರ ಪರಿಣಾಮ ಮಾಡಿದರೆ ನಮ್ಮ ಹಳ್ಳಿ ಕಗ್ಗ ಜನಗಳು ಯಾವ ರೀತಿ ನರ್ತಿಸಲಿಕ್ಕಿಲ್ಲ?"

"ಇನ್ನೊಂದು ಸಾರಿ ಆ ಮಾತು, ಆ ಮಾವನ ಮನೆಯ ಸುದ್ದಿ

ದಯವಿಟ್ಟು ತರಬೇಡಿ"

"ಒಬ್ಬರ ಮಕ್ಕಳನ್ನು ಉರಿಸಿದರೆ ನಿಮಗೂ—ಈಗಿಲ್ಲ ಮುಂದಿನ ಜನ್ಮದಲ್ಲಿ—ಉರಿಸುವವರು ಹುಟ್ಟೇ ಹುಟ್ಟುತ್ತಾರೆ. ಹುಚ್ಚ ಅಂದಾರ. ತಿಳಿದವನು ಯೋಚಿಸಿ ನೋಡು"

ಎಂದರು ಶಿವಶಂಕರ ಪಾಟೀಲರು. ಆದರೂ ಅವರ ಸರ್ವ ಪ್ರಯತ್ನ ಮೊಳಕೆಯೊಡೆಯಲಿಲ್ಲ. ಉಮಾಪತಿ ಅವರ ಸೌಮ್ಯ ಪ್ರಶ್ನೆಗೆ ಬಿರುಸಾದ ಉತ್ತರಗಳೊಡನೆ ಅಸಂಬದ್ಧ ಶಬ್ದಗಳನ್ನು ಉಪಯೋಗಿಸುತ್ತಿದ್ದುದರಿಂದ ಆದರ ಗೊಡವೆಯನ್ನು ನಿರ್ವಾಹವಿಲ್ಲದೆ ಅವರು ಬಿಡಬೇಕಾಯಿತು. ಇದರಿಂದ ಮಾಲಿನಿಯ ಮುಖ ಮೋಡಗಳಿಂದ ಲಿಪ್ತನಾದ ಚಂದ್ರ ನಂತಾಯಿತು. ತಾನು ತನ್ನ ಜನ್ಮದಲ್ಲಿ ಒಮ್ಮೆಯಾದರೂ ತೌರುಮನೆ, ತಂದೆ, ಅಣ್ಣಂದಿರನ್ನು ನೋಡಲು ಸಾಧ್ಯವಿಲ್ಲ. ಆ ಕಡೆಯ ದಿಕ್ಕನ್ನು ಕೂಡ ನೋಡಬಾರದೆಂಬ ಪತಿಯ ಕಟ್ಟಾಜ್ಞೆ, ಅವಳನ್ನು ಬಂದೀಖಾನೆಯ ಅಪರಾಧಿಗಿಂತ ಹೆಚ್ಚಾಗಿರಿಸಿತ್ತು. ಈ ಬಗ್ಗೆ ಗಂಡನ ಮುಂದೆ ಚಕಾರ ವನ್ನು ಸಹ ಆಡಳು. ಆಕೆ ಒಳಗೊಳಗೆ ನಿತ್ಯ ಕೊರಗುತ್ತಿದ್ದಳು ತನ್ನ ಕೊರಗಿನ ಜೊತೆಗೆ ಗರ್ಭದಲ್ಲಿರುವ ಶಿಶುವೂ ಕಂದುತ್ತಿತ್ತು.

ಮಾರನೆಯದಿನ ಸಾಯಂಕಾಲ ಪುನಃ ಶಿವಕುಮಾರ ಉಮಾಪತಿಗೆ ಬುದ್ಧಿ ಹೇಳಲು ಪ್ರಯತ್ನಿಸಿದ. ಅವರೊಂದೂ ಉಪಾಯದ ಬಾಣಗಳು ಇವನ ದೇಹದಲ್ಲಿ ನಾಟಲಿಲ್ಲ, ಎಲ್ಲವೂ ವ್ಯರ್ಥವಾಯಿತು ಕೊನೆಗೆ ತುಂಬ ಪಶ್ಚಾತ್ತಾಪಪಟ್ಟುಕೊಂಡು ಅವರು ಹೇಳಿದರು

"ಗರ್ಭಿಣಿಯಾಗಿದಳಲ್ಲಾ ಉಮಾಪತಿ ?"

"ಗರ್ಭಿಣಿಯಾಗಿದಾಳೆ, ನಿಜ. ಹೊಸಳ್ಳಿಯಲ್ಲೇ ಹೆರಿಗೆಯಾಗಲಿ. ಅವರ ಚಿಕ್ಕಪ್ಪ ಮುದೇನೂರಿಗೆ ಕೊಂಡೊಯ್ಯಬಹುದು."

"ಮುದೇನೂರು ಚಿಕ್ಕಪ್ಪ ಯಾರು ?"

"ಮುದೇನೂರಿಗೇ ನಮ್ಮ ತಂಗಿ ಕೊಟ್ಟಿರುವುದು ಶಿವಮೂರ್ತಿ ಅಂತ ಮೇಷ್ಟ್ರು."

"ನಿನ್ನ ತಂಗಿ ಒಟ್ಟಿನಲ್ಲಿ ಪುಣ್ಯವಂತಳು" ಎಂದರು ಶಿವಕುಮಾರ

"ಏನು ಪುಣ್ಯ, ಗಂಡನನ್ನು ಹೆದರಿಸಿಕೊಳ್ಳುತ್ತಾಳೆ. ನಾವು ಹೊಸಳ್ಳಿ ಯವರು ಗೊತ್ತಿಲ್ಲ! ಹೊಸಳ್ಳಿ ಗುರಪ್ಪಯ್ಯನವರ ವಂಶವೇ ಹೀಗೆ"

ಎಂದ ಉಮಾಪತಿ. ಶಿವಕುಮಾರರಿಗೆ ಉಮಾಪತಿಯ ಮಾತು ಅತ್ಯಾಶ್ಚರ್ಯಕರವಾಯಿತು ತಟಕ್ಕನೆ ಏನೋ ಶಿವಕುಮಾರರಿಗೆ ಜ್ಞಾಪಕ ಬಂತು.

"ನಿನ್ನೆ ರಾತ್ರಿ ಮಾಲಿನಿಗೆ ತುಂಬಾ ಹೊಡೆದೆಯೆಂದು ಕೇಳಿದೆ."

"ನೀವು ಏನೇ ತಿಳಿದುಕೊಳ್ಳಿ. ಈ ಪ್ರಸ್ತಾಪ ಮಾಡಲು ಅವಳ ಕೈವಾಡ ಇಲ್ಲದಿಲ್ಲ"

"ಪಾಪ! ಏನು ಮಾಡೀತು ಆ ಸಾಧು ಪ್ರಾಣಿ."

"ಮೇಲೆ ಹಾಗಿದಾಳೆ. ತೌರು ಮನೆಯ ಸುದ್ದಿ ತೆಗೆದು ಮಾತಾಡುವುದಿಲ್ಲೆಂದು ಹೇಗೆ ನಂಬುತ್ತೀರಿ ?"

"ಒಂದುವೇಳೆ ತೆಗೆದರೂ ಏನು ತಪ್ಪು ಉಮಾಪತಿ ಯಾರೂ ದೇಶದಲ್ಲಿಲ್ಲದ್ದು ನಡೆಸುತ್ತೀ !"

"ಒಟ್ಟಿನಮೇಲೆ ಆಕೆ ಹೇಗೇ ಇರಲಿ, ನನ್ನಂತೆ ವರ್ತಿಸುತ್ತಿದಾಳೆ. ಇಲ್ಲದೇ ಇದ್ದಿದ್ದರೆ ವಿಷದ ಇಂಜಕ್ಷನ್ ಕೊಡಿಸುತ್ತಿದ್ದೆ"

ಎಂದ ಧೈರ್ಯ ತುಂಬಿದ ಧ್ವನಿಯಲ್ಲಿ ಉಮಾಪತಿ. ಶಿವಕುಮಾರರಿಗೆ ಕಂಠ ಬಿಗಿದು ಬಂತು. ಹೆಣ್ಣಿನಬಾಳಿನ ಸಮಸ್ಯೆ ಬಿಡಿಸಲಾರದ ಜಟಿಲ ಸಮಸ್ಯೆಯಾಗಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಅದೆಷ್ಟು ಹೆಣ್ಣುಮಕ್ಕಳು ಸಿಕ್ಕಿ, ನಿತ್ಯ ಆ ಬಾಳಿನಲ್ಲಿ ತೊಳಲುತ್ತಿದ್ದಾರೋ. ಅದೆಷ್ಟು ಹೆಣ್ಣುಮಕ್ಕಳು ಅತ್ತೆಯ ವಕ್ರನೋಟಕ್ಕೆ ಸಿಕ್ಕಿ ಗದಗದ ನಡುಗುತ್ತ ಜೀವ ಹಿಡಿದು ಕೊಂಡಿದ್ದಾಗೋ—ಎಂದು ಯೋಚಿಸಿದರು. ಮನಸ್ಸು ಇಂತಹವರ ಮೇಲೆ ಸೇಡನ್ನು ತೀರಿಸಿಕೊಳ್ಳಬೇಕೆನ್ನಿಸುತ್ತಿತ್ತು. ಯಾವರೀತಿ ಪ್ರತಿ ಸೇಡು ತೆಗೆದುಕೊಳ್ಳಬೇಕು? ಹೌದು ; ಅದೇದಾರಿ ...... !

ಅವರಿಗೀಗ ನಾಟಕ ಬರೆಯಲು ಕಥೆಯ ವಸ್ತು ಸಿಕ್ಕಿತ್ತು. ಅದನ್ನು ಹೃದಯ ಕರಗಿ ನೀರಾಗುವಂತೆ ಚಿತ್ರಿಸಬೇಕಾಗಿತ್ತು. ಮನೆಗೆ ಈರ್ವರೂ ಕತ್ತಾಲಾಗುತ್ತಿದ್ದಂತೆ ಮೆಲು ಅಡಿಗಳನ್ನಿಡುತ್ತಾ ಹೊರಟರು. ಮಾರ್ಗದಲ್ಲಿ ಪೀಡಿಸಿ ಪೀಡಿಸಿ ಉಮಾಪತಿ ಅವರೊಡನೆ ಮಾತನಾಡಿಸಲು ಯತ್ನಿಸುತ್ತಿದ್ದ. ಅವಶ್ಯಕವಾಗಿ ಉತ್ತರಿಸುವ ಪ್ರಶ್ನೆಗಳಿಗೆ ಮಾತ್ರ ಅವರು ಉತ್ತರಕೊಡುತ್ತಿದ್ದರು. ಇನ್ನುಳಿದವುಗಳಿಗೆ 'ಹಾ ಹೂ' ಗುಟ್ಟುತ್ತಿದ್ದರು. ಆದಿನ ಪ್ರಾರಂಭ ಮಾಡಬೇಕಾಗಿದ್ದ ನಾಟಕದ ಕಥಾನಕವನ್ನು ಅವರು

ಮನಸ್ಸಿನಲ್ಲಿ ಕಲ್ಪಿಸುತ್ತಿದ್ದರು. ಮೊದಲಿನ ದೃಶ್ಯದಿಂದ ಹಿಡಿದು ಕೊನೆಯ ದೃಶ್ಯದವರೆವಿಗೆ ನಡೆಯಬೇಕಾಗಿದ್ದ ಕಥಾನಕ ನೆರಳಿನಂತೆ ಅವರ ಮನೋ ಪಟಲದಲ್ಲಿ ಸುಳಿಯುತ್ತಿತ್ತು:

ಕನ್ಯಾಮಣಿಯೋರ್ವಳನ್ನು ದುಡುಕಿ ಬೀದಿಯಲ್ಲಿ ಹೋಗು ತ್ತಿರುವ ಮನುಷ್ಯನೊಬ್ಬನಿಗೆ ಕೊಡುತ್ತಾರ. ಕೊಡುವುದಕ್ಕಿಂತ ಪ್ರಥಮ, ಅವನ ವಂಶ ಗುಣ, ವೈಯಕ್ತಿಕ ನಡವಳಿಕೆಗಳ ಮೇಲೆ ಬೆಳಕು ಚೆಲ್ಲು ವಂತಹ ಪರಿಶೀಲನೆ ಇತ್ಯಾದಿ ಯಾವುದನ್ನೂ ನೋಡುವುದಿಲ್ಲ. ರಾತ್ರಿ ಯಲ್ಲಿ ನೋಡಿದ ಹಾಳು ಬಾವಿಯಲ್ಲಿ ಹಗಲು ಬಿದ್ದ ಪರಿಸ್ಥಿತಿಯಾದಂತಾ ಗಿರುತ್ತದೆ ಅವರ ಪರಿಸ್ಥಿತಿ. ಲಂಗಕಟ್ಟಿಕೊಂಡು ಆಡುವ ಮಗುವಿಗೆ ದಟ್ಟಿ ಉಡಿಸಿ ಲಗ್ನ ಮಾಡುತ್ತಾರೆ. ಸಂಪ್ರದಾಯದ ಪ್ರಕಾರ ಗಂಡನ ಮನೆಗೆ ಒಂದು ದಿನ ಆಕೆಯನ್ನು ಕಳುಹಿಸಿಕೊಡುತ್ತಾರೆ.

ಸರಿ, ಅತ್ತೆಯ ಕಟಕಟಿ ಪ್ರಾರಂಭವಾಯಿತು "ನಿಮ್ಮ ತಂದೆ ಏನು ಮುಯ್ಯಿ ಮಾಡಿದ? ಒಂದು ವಾಚು ಕೊಟ್ಟನೆ? ಒಂದು ಸೈಕಲ್ ಕೊಟ್ಟನೆ? ಒಂದು ಕೊರಳಲ್ಲಿ ಹಾಕುವ ಬಂಗಾದ ,ಚೈನು ಕೊಟ್ಟನೆ?" ಎನ್ನುವ ಅತ್ತೆ ಮತ್ತು ಗಂಡನ ದಿನಂಪ್ರತಿಯ ಕೂರಲಗಿ ನಂತಹ ಮಾತುಗಳಲ್ಲಿ, ಆ ಕನ್ಯೆಯ ದೇಹ ದಿನದಿನಕ್ಕೂ ಬಳಲುತ್ತಿದೆ. ಅವಳನ್ನು ಆ ಕ್ರೂರಿಗಳು ತೌರುಮನೆಗೆ ಕಳುಹಿಸುವುದಿಲ್ಲ. ನಿತ್ಯವೂ ಗಂಡನ ಮತ್ತು ಅತ್ತೆಯ ಇಂತಹ ಮನನೋಯುವ ಪ್ರಕರಣಗಳಿಂದ ಅವಳಿಗೆ ಅರ್ಧ ಹುಚ್ಚು ಬರುತ್ತದೆ. ಆ ಹುಚ್ಚು ಬಂದಾಗ ಮಾತ್ರ ತನ್ನ ದುರ್ದೈವಿ ಜೀವನದ ಬಗೆಗೆ ಹುಚ್ಚು ಹುಚ್ಚಾಗಿ ಆಕೆ ಆಡಿಕೊಳ್ಳು ತ್ತಿದ್ದಳು ಕೆದರಿದ ಕುರಚಲು ಗಿಡದಂತಹ ಕೂದಲುಗಳಲ್ಲಿ ಕೈಗಳನ್ನಿಟ್ಟು ಕೊಂಡು ಆಕಾಶದ ಕಡೆಗೆ ನೋಡುತ್ತಾ ಆಗಾಗ ಹೇಳುತ್ತಿದ್ದಳು! "ಹೇ ಆಕಾಶ! ಥೂ....ಹಹಹ ...ನೀನು ಬೀಳು ಬೀಳು ನೀನು....ಈ ಪಾಪಿ ಜನ ಗಳ ಮೇಲೆ ಬಿದ್ದು ಕೊಲ್ಲು ಅವರನ್ನು....ಹಹಹ" ಎಂದು ಮನೆಯ ಮುಂದಿನ ಮಣ್ಣನ್ನು ತನ್ನ ಗಂಡನ ಮನೆಯ ಮೇಲೆ ತೂರಿ ಶಪಿಸುತ್ತ ಕೂಗುತ್ತಿದ್ದಳು. ಈ ವಿಚಾರ ಊರಿನವರಿಗೂ ತಿಳಿದು, ಅವರು ತುಸು ಕಾಲದವರೆಗೂ ತೌರುಮನೆಗೆ ಕಳುಹಿಸಲು ಸೂಚಿಸಿದರು. ಆದರೆ ಆ ವೇಳೆ ಗಾಗಲೆ ತೌರು ಮನೆಯವರು ಬೇಸತ್ತು ಇವರ ಒಡನಾಟವನ್ನು ತಪ್ಪಿಸಿ

ಕೊಂಡಿದ್ದರು. ಈ ಹಿಂದೆ ಮಗಳೆಂಬ ಪ್ರೇಮದಿಂದ ಕನ್ಯೆಯನ್ನು ತಂದೆ ನೋಡಲು ಬಂದಾಗ, ಅಳಿಯನೂ ಮನೆಯವರೂ ಮಾತನಾಡಿಸದೇ ಇದ್ದುದಲ್ಲದೆ, ಅವರೇನ ಮುಪ್ಪು ಮರ್ಯಾದೆಗೆ ಚ್ಯುತಿ ಬರುವ ಮಾತ ಗಳನ್ನಾಡಿ ಕಳುಹಿದ್ದರು! ಆದುದರಿಂದ ಅಲ್ಲಿಗೂ ಆ ಹುಚ್ಚಿಯನ್ನು ದಬ್ಬು ವಂತಿದ್ದಿಲ್ಲ. ಊರಿನವರು ಅವಳ ಆದರ್ಶ ಜೀವನದ ಬಗ್ಗೆ ಹೊಗಳಿ, ಇವರ ದುರ್ನಡತೆ ತೆಗಳುತ್ತಿದ್ದರೇ ವಿನಾ ಯಾರೂ ಗಂಡನ ಮನೆಯವ ರನ್ನು ಎತ್ತಿಕಟ್ಟಿ ಮಾತನಾಡುತ್ತಿದ್ದಿಲ್ಲ. ಅಲ್ಲಿಯವರೆವಿಗೆ ಹೇಗೋ ಅವರು ತಮ್ಮ ದುರ್ನಡತೆಯನ್ನು ಮುಚ್ಚಿಕೊಂಡಿದ್ದರು. ಪರಂತು ಅವಳು ಹುಚ್ಚಿಯಾದ ಮೇಲೆ ಎಲ್ಲರ ಬಾಯಲ್ಲೂ ಇದೇ ಮಾತು. ಗಂಡನ ಮನೆಯವರಿಗೂ ಆ ಹುಚ್ಚಿಯ ಕುಟಿ ತಡೆಯಲಾಗಲಿಲ್ಲ. ಅವರ ಜೀವ ನವೂ ಬೇಸರವಾಗಿದ್ದಿತು. ಒಂದಿರುಳಿನಲ್ಲಿ ಆ ದುರ್ದೈವಿ ಹುಚ್ಚಿಯನ್ನು ಬಾವಿಯಲ್ಲಿ ತಳ್ಳಿಬಂದು "ಅಯ್ಯೋ, ನಮ್ಮ ಕೂಸು ಹುಚ್ಚಿನಿಂದ ಯಾವಾಗಲೋ ಬಾವಿಯಲ್ಲಿ ಬಿದ್ದಿದೆ...ಅಯ್ಯೋ ಅದೃಷ್ಟವೆ ...ಹೀಗಾಗ ಬೇಕೆಂತ ಅವಳ ಹಣೆಯ ಬರಹದಲ್ಲಿದ್ದಿತೇ?" ಎಂದು ಬೆಳಕು ಹರಿಯು ತ್ತಲೇ ನಟನೆಯ ರೋದನ ಪ್ರಾರಂಭ ಮಾಡಿದರು. ಆದರೇನು, ಹೋದ ಜೀವ ಬಹುದೂರ ಹೋಗಿತ್ತು. ಅವಳ ಜೀವನ ನೆರೆ ಹರಿದುಕೊಂಡು ಪವಿತ್ರತಮವಾಗಿತ್ತು. ಆ ಬಾವಿಯಲ್ಲಿ ಮಿಂದು, ಬೇರೆ ಉತ್ತಮರ ಹೊಟ್ಟೆಯಲ್ಲಿ ಹುಟ್ಟಬೇಕಾಗಿತ್ತು ಆ ಜೀವ, ಆಕೆ ಆ ಮುಳ್ಳಿನ ಬೇಲಿ ಯಿಂದ ಪಾರಾಗಿದ್ದಳು.

ಇಲ್ಲ! ಬೆಂಕಿಯ ಬಲೆಯಿಂದ ತಪ್ಪಿಸಿಕೊಳ್ಳಲು ಜೀವ ಬಿಟ್ಟರೂ ಆಕೆಗೆ ಮುಕ್ತಿಯಿಲ್ಲ!........

ಅವಳೋರ್ವ ದೆವ್ವವಾಗಿ ಅತ್ತೆ ಗಂಡನನ್ನು ಕಾಡಿ ಕಾಡಿ ಕೊಂದಳು. ಅವಳ ಮೈದುನನ ಕಾಲಿಗೆ ಹುಳುಗಳು ಬಿದ್ದು ಸತ್ತುಹೋದ. ಒಂದು ದಿನ ಅವರ ಮನೆ ಬೆಂಕಿಯಿಂದ ಉರಿದು ಭಸ್ಮವಾಯಿತು! ಆ ಬೆಂಕಿ ಆ ಮನೆಗೆ ಹೇಗೆ ತಗುಲಿತೋ ಏನೋ—ಎಲ್ಲರಿಗೂ ತುಂಬಾ ಕೌತುಕದ ಘಟನೆಯಾಗಿತ್ತು. ಆ ಕಥಾನಕದ ಅಂತ್ಯವನ್ನು ಯೋಚಿಸುತ್ತಿದ್ದ ಹಾಗೆಯೇ ಮನೆ ಬಂತು. ಪುಟ್ಟಪ್ಪ ಬಂದಿದ್ದ.

"ಪುಟ್ಟಣ್ಣ, ಸ್ವಾಮಿಯವರು ಏನೆಂದರು!"

"ಬರುವುದಿಲ್ಲವಂತೆ. ಮಾಲಕ್ಕ ಹೊಸಳ್ಳಿಯಿಂದ ಬರುವಾಗ ಬಸ್ಸಿನಲ್ಲಿ ಹರಿಹರದ ಹೆಣ್ಣುಮಕ್ಕಳು ಯಾರೋ ಕಂಡಿದ್ದರಂತೆ. "ತಾಯಿ ನಿಮ್ಮಂದೆ ಕಳಿಸೋಣವೆ ನೀ ಹೇಳಿದಾಳೆಂದು, ಎಂದ ರಂತೆ. ನಾನು ಹೇಳಿರುವೆನೆಂಬ ಅಂಶ ಅವರಿಗೇನಾದರೂ ಮುಟ್ಟಿದರೆ ನನ್ನ ಬಾಳು ಹರಿದು ಹಂಚೀತು. ಆದ್ದರಿಂದ ಹಾಗೇನೂ ತಿಳಿಸುವುದು ಬೇಡಲ್ಲ, ಎಂದಿದ್ದಳಂತೆ. ಅದಕ್ಕಾಗಿ ಅವರು ಬರುವುದಿಲ್ಲ ಎಂದರು" ಎಂದನು ಆ ಮಾತನ್ನು ಕನಸಿನಲ್ಲಿ ಕೇಳಿದಹಾಗೆ ಶಿವಕುಮಾರ ಕೇಳಿ ದರು. ಇವು ಯಾವ ಕಡೆಗೂ ಅವರ ಲಕ್ಷ್ಯವಿರಲಿಲ್ಲ. ತಮ್ಮ ನಾಟಕದ ಕಥನದ ಬಗ್ಗೆ ಅವರು ಯೋಚಿಸುತ್ತಿದ್ದರು. ಈಗೊಂದು ವರ್ಷದ ಹಿಂದೆ ಈ ಘಟನೆ ವಾಸ್ತವಿಕವಾಗಿ ನಡೆದಿತ್ತು. ಅದನ್ನು ಬರೆಯಲು ಸ್ಫೂರ್ತಿ ಬಂದದ್ದು ಮಾಲಿನಿಯ ಕರುಳುಕೊಯ್ಯುವ ಸ್ಥಿತಿಯಿಂದ. ತಮ್ಮ ಕಥಾನಕಕ್ಕೆ ಅವಳ ಜೀವನ ಪುಟಗೊಟ್ಟಿತ್ತು. ಅದರ ಶಿರೋನಾಮೆ ಯನ್ನು ನಿರ್ದಿಷ್ಟಮಾಡಲು ಬೆಳುದಿಂಗಳ ಬೆಳಕಿನಲ್ಲಿ ನಿಂತು, ದುಂಡು ಚಂದ್ರಮನನ್ನು ಸವಿಾಕ್ಷಿಸುತ್ತಾ ಯೋಚಿಸಿದರು. ನಾಟಕದ ಶಿರೋ ನಾಮೆ ಮಿಂಚಿತು : "ವನಿತಾ ಜ್ವಾಲೆ."

# ೨೦

ಡಾಯಾದಿ ಬಸವರಾಜ ಗುರುಮೂರ್ತಿಗೆ ಮಾಟಮಾಡಿಸಲು ಸರ್ವ ಸಿದ್ಧತೆಗಳನ್ನು ಮಾಡಿದ್ದರೂ, ಅವನಿಗೆ ಮುಖ್ಯವಾದ ವಸ್ತು ಸಿಕ್ಕಿರಲಿಲ್ಲ. ಗರ್ಭಿಣಿ ಸ್ತ್ರೀಯ ಹಸ್ತ ಬೇಕಾಗಿತ್ತು. ಮಾಟಗಾರ ಭೂತಪ್ಪ ಅಲ್ಲಲ್ಲಿ ಅದಕ್ಕಾಗಿ ಹುಡುಕಿಸುತ್ತಿದ್ದ; ಅದು ಬೇಗ ಸಿಕ್ಕಿರಲಿಲ್ಲ ಹೀಗಿರುವಲ್ಲಿ ಭೂತಪ್ಪ ಕೈಯಲ್ಲಿ ಲಾರಿಯನ್ನು ಹಿಡಿದುಕೊಂಡು ಬಂದ. ಮುಖದಲ್ಲಿ ತೇಜಸ್ಸು ತುಂಬಿ ತುಳುಕುತ್ತಿತ್ತು. ಹಣೆಗೆ ವಿಭೂತಿಹಚ್ಚಿಕೊಂಡು ಎಂಟಾಣೆ ಅಗಲದ ಕುಂಕುಮ ಹಚ್ಚಿಕೊಂಡಿದ್ದ. ಕೊರಳಲ್ಲಿ ರುದ್ರಾಕ್ಷಿಯ ಸರ ಎದ್ದು ಕಾಣಿಸುತ್ತಿತ್ತು.

"ಭೂತಣ್ಣ ಬಾರಣ್ಣ ಈ ಕಡೆ. ಏನು ಹಸನ್ಮುಖಿಯಾಗಿ ಬಿಟ್ಟಿರುವೆಯಲ್ಲ!...."

"ಹು, ಇರದೇನು ಕೆಲಸವಾದರೆ ಯಾರಿಗೆ ತಾನೆ ಸಂತೋಷ ವಿರುವುದಿಲ್ಲ? ರಾತ್ರಿ ಅಡಿಕೆಲೆ ಕೆಂಚಪ್ಪನ ಮನೆಯಲ್ಲಿ ಒಬ್ಬ ಗರ್ಭಿಣಿ ತೀರಿದಳು ಕೇಳಿಗೊತ್ತೆ?"

"ಹೆಣ್ಣೊಂದು ಮಾತ್ರ ತಿಳಿದಿತ್ತು"

"ಗರ್ಭಿಣಿ ಹೆಂಗಸು ಕಣಪ್ಪ. ಏನೆಲ್ಲ ಆಗಲಿ ಕೆಲಸಗಳು ಸುರಳಿತ ವಾಗಿ ನಡೆಯುತ್ತಲಿವೆ" ಎಂದ ಭೂತಪ್ಪ. ಬಸವರಾಜ ಮುಂದಿನದನ್ನು ಯೋಚಿಸುವ ಅಗತ್ಯವಿರಲಿಲ್ಲ. ಎಲ್ಲಾ ತರಾತುರಿಯನ್ನು ಭೂತಪ್ಪ ಮಾಡಿಕೊಂಡು, ಅದನ್ನು ತರಲು ತನ್ನ ಸಹಾಯಕ್ಕಾಗಿ ಬಂದಿರಬಹು ದೆಂದು ಯೋಚಿಸಿ ಹೇಳಿದ: "ಒಳ್ಳೆಯದು. ಯಾವಾಗ ಕೊಂಡು ಬರು ವುದು?"

"ಹೋಗರಿ, ಯಾವಾಗಲೋ ಕತ್ತರಿಸಿ ತಂದಿದ್ದಾಯಿತು" ಬಸವ ರಾಜ ಸುತ್ತಲೂ ಒಮ್ಮೆ ನೋಡಿದ. ಯಾರೂ ಇರಲಿಲ್ಲ.

"ಭೂತಣ್ಣ ಒಡಗಡೆ ಬಾ. ಯಾಕೆಂದರೆ ವಿಷಯ ಗುಟ್ಟಾಗಿರ ಬೇಕು."

"ನನ್ನ ಹತ್ತಿರ ಹೆಂಗಸರ ಒಡಕ ಸ್ವಾರಿ ಅಂಥ ಬಾಯೇ ಇಲ್ಲ. ಆ

ಶಶಿಕಲಾ ಏನಾದರೂ ಹೇಳಿದರೆ..."

"ಆಕೆಗಾದರೂ ಏನು ಗೊತ್ತು? ಗುರುಮೂರ್ತಿಯು ಕೂದಲು, ಉಗುರು ಬೇಕೂಂತ ಹೇಳಿದ್ದ; ಅಷ್ಟೆ."

"ಹಾಗೆನ್ನ ಬೇಡ ಬಸವರಾಜ. ಆ ರಾಗಿಣಿಗಳಿಗೆ ಏನೂ ಗೊತ್ತಿಲ್ಲಂತ ತಿಳಿದಿರುವೆಯೇನು?"

"ನಮ್ಮ ಹುಷಾರಿ ನಮಗಿರಬೇಕು, ಅಲ್ಲವೆ?"

"ಆ ಮಾತು ಸದ್ಯಕ್ಕಿರಲಿ. ಭೂತಣ್ಣ, ಅವನಿಗೆ ಮಾಟ ಮಾಡಿಸುವ ದಿನವೆಂದು?"

"ನೀನು ಝಣ ಝಣ ಎಣಿಸಿದ ಕೂಡಲೆ."

"ಆಗಲಿ ಪುಣ್ಯಾತ್ಮ, ತೆಗೆದುಕೋ. ನಿನ್ನ ಗೆಯ್ತಕ್ಕೆ ತಕ್ಕಂತೆ ಕಾಸು ಕೊಡದಿದ್ದರೆ ಕಾರ್ಯ ಸಾಗುವುದೆಂತು? ಆ ಗರ್ಭಿಣಿಯ ಹಸ್ತ ಸಿಕ್ಕುವ ಅನುಮಾನ ತುಂಬಾ ಇತ್ತು."

"ಸಿಗದೇನು ಮಾಡುತ್ತೆ ಬಸವರಾಜ? 'ಷಡ್ಭಿಃ ಮನುಷ್ಯ ಚಿಂತಾನಾಂ ಸಪ್ತಮಂ ದೈವಚಿಂತನಂ' ಎಂಬಂತೆ, ಮನುಷ್ಯ ಆರು ಪ್ರಯತ್ನಮಾಡಿ ನೋಡಬೇಕು, ಏಳನೆಯದು ದೇವರ ಕೈಯಲ್ಲಿದೆ" ಎಂದು ವೇದಾಂತಿ ಭೂತಣ್ಣ ಗಂಭೀರವಾಗಿ ಹೇಳಿದ. ಬಸವರಾಜ ಪ್ರತಿಯಾಗಿ ತಲೆಯಲ್ಲಾಡಿಸುತ್ತಾ "ದೊಡ್ಡ ಮಾತು—ದೊಡ್ಡ ಮಾತು. ಹಿರಿಯರ ಅನುಭವದ ಮಾತು. ಕೋಶ ಓದಿರುವೆಯೇನು ಹಾಗಾದರೆ?"

"ಓಹೋ, ಎಲ್ಲಾ ಮಗುಚಿ ಹಾಕಿದೇನೆ. ಕೋಶ ಓದಿದರೆ ಬಾಯಿ ತಿರುಗತೈತಿ."

"ಇರಬಹುದಪ್ಪ, ಇರಬಹುದು. ನಮ್ಮ 'ಕಕ್ಕ' ಎಂಬೋನ ಮನೆಯಲ್ಲಿ ಕೆಂಪು ರೊಟ್ಟಿನ ಕೋಶ ಇದೆ" ಎಂದು ಹೇಳಿ ಅಡುಗೆಮನೆ ಕಡೆ ಮುಖ ತಿರುಗಿಸಿ "ಏ ರೋಗಿ ಮುಂಡೇದೆ, ಚಹ ಆಯ್ತೇನೆ?" ಎಂದ.

"ಏನು ಕರೆದಿರಾ ?" ಎಂದು ಮಾರ್ದನಿಗೊಟ್ಟಳು ಹಾಲಮ್ಮ.

"ಹೂನೇ, ಚಾಹ ಆಗಿದ್ದರೆ ಎರಡು ಕಪ್ಪು ಕೊಂಡು ಬಾ"

"ಗಂಡ—ಹೆಂಡರು ಎಷ್ಟೊಳ್ಳೆ ಹಾಸ್ಯವಾಗಿ ಮಾತನಾಡುತ್ತೀರಿ ?" ಎಂದ ನಗುತ್ತಾ ಭೂತಪ್ಪ.

"ನಾವ್ಯಾವಗಲೂ ಹಾಗೇಯೇ"

"ಹಾಗಿರಬೇಕು ಸಂಸಾರವೆಂದರೆ. ನೋಡು ಸಂಸಾರ ಎಂಬೋದು

ಒಂದು ಸಾಗರವಂತೆ ;ಅದರಲ್ಲಿ ಅಪ್ಪಳಿಸಿ ಬರುವ ತೆರೆಗಳು ನಮಗೆ ಅಡ್ಡವಾಗಿ ಬರುವ ವಿಘ್ನಗಳು. ಅಂಥ ಕಷ್ಟಗಳು ಬಂದು ಎದುರಿಸಿದಾಗ ನಮ್ಮ ಬುದ್ಧಿಯೆಂಬ ಹುಟ್ಗೋಲಿನಿಂದ ಅದನ್ನು ದಾಟುವ ಪ್ರಯತ್ನ ಮಾಡಬೇಕು."

"ಹೌದು; ನೀನು ಹೇಳುತ್ತಿರುವುದು ನಿಜ. ಆ ತೆರೆಗಳು ನಮ್ಮ ದೋಣಿಯಲ್ಲಿ ನುಗ್ಗುತ್ತವೆ."

"ನಿಜ. ಆ ತೆರೆಗಳು ನುಗ್ಗಿ ನಮ್ಮ ದೋಣಿ ಮಗುಚಿ ಹಾಕಿದರೆ?"

"ಸರಿಯಾದ ಪ್ರಶ್ನೆ ಕೇಳಿದೆ ; ಒಪ್ಪಿದೆ ನಾನು. ತೆರೆಗಳು ನಮ್ಮಂತಹವರ ದೋಣಿಗೆ ನುಗ್ಗುವುದಿಲ್ಲ. ಅವೆಲ್ಲಾ ಹಣಬರಹ ಖೊಟ್ಟಿ ಇದ್ದವರಿಗೆ ಮಾತ್ರ ಆಗುತ್ತದೆ. ಉದಾಹರಣೆಗೆ ಗುರುಮೂರ್ತಿಯಂಥವರು."

"ಹಹಹ....ನಿಜ ಹಹಹ .." ಸ್ಮಶಾನದ ಬೀಭತ್ಸವನ್ನು ಅವನ ನಗು ಅಣಕಿಸಿತು. ಆ ವೇಳೆಗೆ ಹಾಲಮ್ಮ ಚಹ ತಂದಿಟ್ಟಳು. ಬಸವರಾಜ ಚಹ ಗುಟುಗರಿಸುತ್ತಾ" ಯಾಕೆ ಭೂತಣ್ಣ ? ಸುಮ್ಮನೆ ಕುಳಿತಿಯಲ್ಲ. ಕುಡಿಯ ಬಾರದೆ ?" ಎಂದ ಬಸವರಾಜ ಅವನ ಮಾತಿನ ಕಡೆಗೆ ಲಕ್ಷ್ಯಕೊಡದವನಂತೆ "ಚಹದಲ್ಲಿ ಬಿದ್ದು ಸತ್ತಿರುವ ನೊಣದಂತೆ ಈ ಗುರುಮೂರ್ತಿಯಂಥವರ ಬಾಳು. ಏ ಗುರ್ಯ, ಸ್ವಲ್ಪ ತಡಿ ತಡಿಯೋ ರಾಜಾ...." ಎಂದು ಒರಲಿದ. ಭೂತಣ್ಣ ಕೊಂಚ ನಡುಗಿದ.

"ಯಾಕೋ? ಹುಚ್ಚು ಬಂತೇನು? ಹೀಗ್ಯಾಕೆ ಮಾಡ್ತೀಯೆ...."

"ನಾನೇನು ಮಾಡಿದೆ ಏ! ಚಹ ಇನ್ನೊಂದು ಕಪ್ಪಿನಲ್ಲಿ ತೊಗೊಂಡು ಬಾರೆ" ಎಂದು ಹೆಂಡತಿಯನ್ನು ಗದರಿಸಿದ.

" ಭೂತಣ್ಣನಿಗೆ ಹೊತ್ತಾಯಿತೂಂತ ಕಾಣುತ್ತೆ" ಎಂದಳು ಹಾಲಮ್ಮ.

"ಹ್ಞಾ ಆಗಲಿ ಪರವಾ ಇಲ್ಲ. ಬೆಳಿಗ್ಗೆ ಸ್ನಾನವಾದನಂತರ ತಿಂಡಿ ಹೊಟ್ಟೆ ತುಂಬ ಬಿದ್ದಿದೆ. ಈಗ ಒಂದು ನೀರುವಂಚೆ, ಟವಲ್ ಕೊಂಡೊಯ್ದು ಸ್ನಾನಮಾಡಿಕೊಂಡು ಬಾ. ನೀನು ನಿತ್ಯ ಸಾನಮಾಡುವ ರೀತಿಯಲ್ಲ."

"ಹೂಂ, ಇವತ್ತು ನೀರಿನೊಳಗೆ ಹಾರಾಡಿ, ಅದರ ಜೊತೆಗೆ ಜಗಳಾಡಿಕೊಂಡು ಬರಬೇಕೇನು ಮತ್ತೆ?"

"ಬರಿಯ ಹಾಸ್ಯದ ಮಾತನಾಡುತ್ತೀ ಮಹರಾಯ. ಮಡಿಹುಡಿ ಯಿಂದ ಬರಬೇಕು."

"ಆಗಲಿ, ಬರುತ್ತೇನೆ ಹೋಗು. ನೀನು ಮನೆ ಸೇರುವುದರಲ್ಲಿಯೇ ಬಂದರಾಯಿತಲ್ಲ "

"ನಾನು ಒಳಗಡೆ ಪೂಜೆ ನಡೆಯಿಸಿರುತ್ತೇನೆ. ಇಲ್ಲೆಂತ ಮಾಡಿ ಹೋದುಗೀದೀಯೆ."

"ಹಹ್ಹ. ನಿನ್ನ ನೋಡಿದರೇನು, ನೋಡದಿದ್ದರೇನು ಹೊರಗಡೆ ಕುಳಿತಿರುತ್ತೇನೆ. ಆಯಿತೇ ?"

ಆ ದಿನ ತುಂಗಭದ್ರೆಯಲ್ಲಿ ಸ್ನಾನಮಾಡಿ, ಮಡಿಯುಟ್ಟುಕೊಂಡು ಮಾಟಗಾರ ಭೂತಪ್ಪನ ಮನೆಗೆ ಹೋದ. ಅವನು ಈ ಮೊದಲು ಹೇಳಿದ ಪ್ರಕಾರ ಮನೆಯಲ್ಲಿ ಭೂತಪೂಜೆಗೆ ಕುಳಿತುಕೊಂಡಿದ್ದ. ಸ್ವಲ್ಪ ಸಮಯ ಕಳೆದಮೇಲೆ ಭೂತಪ್ಪ ನಗುತ್ತಾ ಬಂದು ಹುಬ್ಬುಹಾರಿಸಿದ.

"ಓ! ಇಷ್ಟುಬೇಗ ಬಂದುಬಿಟ್ಟೆಯಾ?" ಎಂಬ ಭಾವದಲ್ಲಿ ಬಸವರಾಜನ ಮುಖಾವಲೋಕನಮಾಡಿದ.

"ಭೂತಣ್ಣ ಮತ್ತೆ ಹೇಳಿದ: ಅಂದಹಾಗೆ ಬೆಳಿಗ್ಗೆ ನೀನು ದುಡ್ಡು ಕೊಡಲೇ ಇಲ್ಲ."

"ಅಯ್ ಹೌದು! ಮಾತಿನಲ್ಲಿ ಮರೆತುಬಿಟ್ಟೆವಲ್ಲಾ."

"ಇರಲಿ ಬಾ. ಸಾಯಂಕಾಲ ತಪ್ಪಿಸದ ಹಾಗೆ ನೂರೊಂದು ರೂಪಾಯಿ ಕೊಡಬೇಕು."

"ಛೆ! ಎಂಥ ಮಾತು ಭೂತಣ್ಣ. ಏನು ಮಾತನಾಡುತ್ತೀಯೆ. ಕೆಲಸ ಪೂರ್ಣಗೊಳ್ಳುತ್ತಿರುವಾಗ ವಂಚಿಸುವುದುಂಟೇ?"

"ಅದು ಸರಿ. ಊಟದಲ್ಲಿ, ನೆಂಟಸ್ತನದಲ್ಲಿ ದಾಕ್ಷಿಣ್ಯ ಇಡೋಣಂತೆ. ಆದರೆ ಇದರಲ್ಲಿ ಬೇಡ. ಖರೇವೈತೋ ಸುಳ್ಳೈತೊ?"

"ನಿಜ, ನಿಜ."

"ಬಾ, ಇತ್ತ ದೇವಿಯ ಮುಂದೆ ಕುಳಿತುಕೋ" ಎಂದು ಭೂತಣ್ಣ ಅವನನ್ನು ದೇವಿಯ ಮುಂದುಗಡೆ ಕುಳ್ಳಿರಿಸಿದ. ಆ ಬಳಿಕ ಅವನು ಅರ್ಧ ಘಂಟೆಯವರೆಗೆ ಏನನ್ನೋ ಮಂತ್ರಗಳನ್ನು ಪಠಿಸಿದ. ಅವನಿಂದ ಅರ್ಘ್ಯ ಬಿಡಿಸಿದ. ಎಳೆತೆಂಗಿನ ಕಾಯಿಯೊಂದಕ್ಕೆ ಅತಿ ಚಿಕ್ಕ ರಂಧ್ರ

ವೊಂದು ಮಾಡಲ್ಪಟ್ಟಿತ್ತು. ಅದನ್ನು ಭೂತಪ್ಪ ಕೈಯಲ್ಲಿ ಹಿಡಿದು ಕೊಂಡು,

"ಎಲ್ಲಿ ಹೀಗೆ ಬಾ, ಬಸವರಾಜು" ಎಂದು ಆಜ್ಞೆಯಿತ್ತ

"ಹ್ಞಾ, ಬಂದೆ" ಎಂದು ಬಸವರಾಜ ಭೂತಪ್ಪನ ಬಳಿ ಬಂದು ನಿಂತುಕೊಂಡ.

"ಅಮ್ಮನಿಗೆ ನಾಲ್ಕು ಪ್ರದಕ್ಷಿಣೆ ಮಾಡಿ ಅವನ ಉಗುರು, ಕೂದಲು. ಈ ರಂಧ್ರದಲ್ಲಿ ಹಾಕು .."

"ಹು...." ಎಂದು, ಬಸವರಾಜ ಪೂಜೆಮಾಡಿದ್ದ ಚಿಕ್ಕಗಿಂಡಿಯಲ್ಲಿನ ಉಗುರು, ಕೂದಲುಗಳನ್ನು ಹಾಕಲು ಅವಸರದಿಂದ ಕೈ ಹಾಕುತ್ತಿದ್ದ. ಏತನ್ಮಧ್ಯೆ ಭೂತಪ್ಪ ಬಾಯಿ ಹಾಕಿ

"ನಿಲ್ಲು, ನಿಲ್ಲು ಅವಸರಬೇಡ. ಇನ್ನೊಂದು ಬಾರಿ ಆ ಗಿಂಡಿಗೆ ಪೂಜೆ ಸಲ್ಲಿಸು,"

ಭೂತಪ್ಪ ಮಂತ್ರಗಳನ್ನು ಪಠಣಮಾಡುತ್ತಾ ಹೇಳಿದ. ಪುನಃ ಇನ್ನೊಂದು ನಾರಿ ಬಸವರಾಜ ಅದನ್ನು ಪೂಜೆಗೈದ. ಭೂತಣ್ಣ ಅವನಿಗೆ ಅಮ್ಮನ ಮುಡಿಯಲ್ಲಿದ್ದ ಜಾಜಿ ಹೂವನ್ನೂ "ಕುಂಕುಮವನ್ನೂ ತೆಗೆದು ಕೊಟ್ಟ. ಬಸವರಾಜ ಕುಂಕುಮ ಹಚ್ಚಿಕೊಂಡು "ಆಯಿತೆ ಭೂತಣ್ಣಾ?" ಎಂದನು.

"ಆದಂತೆಯೇ. ರಾತ್ರಿ ಒಂದು ಯಾಮದಷ್ಟು ಪೂಜೆಯಾಗಬೇಕು. ರಾತ್ರಿ ಒಂದು ಹೊತ್ತು ಹೊಳೆಯಲ್ಲಿ ಮುಳುಗಿ ಹಾಕಿಕೊಂಡು ಬರಬೇಕು."

"ಇನ್ನೊಂದು ನಾರಿ ಪೂಜೆ ಇದೆಯೊ?" ಬಸವರಾಜ ಆಶ್ಚರ್ಯದಿಂದ ಕೇಳಿದ.

"ರಾತ್ರಿಯ ಪೂಜೆಯೊಂದು ಮುಗಿದರೆ ತೀರಿತು."

"ನಾನು ಹೋಗಲೆ ಇನ್ನು."

"ಮನೆಯಲ್ಲೇನಂಥ ಕೆಲಸ. ಕುಳಿತಿಕೋ" ಎಂದು ಭೂತಪ್ಪ ಒಳಕ್ಕೆ ಹೋಗಿ ಕೋಸಂಬರಿ ತಂದು, ಬೆಳ್ಳಿಯ ಲೋಟದಲ್ಲಿ ಪಾನಕವನ್ನೂ ಕೊಟ್ಟ.

"ದೇವಿ ಒಲಿದಳೇನು ಭೂತಣ್ಣಾ; ನಿನಗೆ ಹೇಗೆನಿಸುತ್ತದೆ?"

"ಒಲಿಯೋದೇನು. ಮಾಡುವ ಶಾಸ್ತ್ರಮಾಡಿ ಬಿಟ್ಟರಾಯಿತು.

ಅವಳೇ ಒಲಿಯುತ್ತಾಳೆ."

"ಇದನ್ನೆಲ್ಲಾ ಹೇಗೆ ಕಲಿತುಕೊಂಡ್ಯೋ ಏನೋ!

—ಹುಂ. ಇದನ್ನು ಕಲಿಯುಲು ಬಹಳ ಕಷ್ಟಪಟ್ಟಿರುವೆ ಬಸವ ರಾಜು. ಮಂತ್ರಗಳನ್ನೆಲ್ಲಾ ಸಿದ್ಧಿಮಾಡಿಕೊಂಡಿದ್ದೇನೆ" ಎಂದು ಭೂತಣ್ಣ ಗಟಗಟ ಪಾನಕ ಕುಡಿದ.

"ಸಿದ್ಧಿ ಅಂದರೆ ?...."

"ಸಿದ್ಧಿ ಎಂದರೆ ಮಂತ್ರಗಳನ್ನು ಸೂರ್ಯ ಗ್ರಹಣ, ಚಂದ್ರಗ್ರಹಣ ಬಂದಾಗ ಪಠಣಮಾಡಿಕೊಂಡು ನಮ್ಮಂತೆ ಮಾಡಿಕೊಂಡಿರಬೇಕು."

"ನಿನ್ನದು ಬಹಳ ಆಚಾರ ಮತ್ತು ಕಟ್ಟು! ."

"ಹಾಗಲ್ಲದೆ ಮತ್ತೆ. ನೋಡು! ನಮ್ಮ ಗುರುಗಳ ಗುರುಗಳು ಈ ಮಾಟ ತಂತ್ರದಲ್ಲಿ ಬಹಳ ಪರಿಣೀತರಿದ್ದರು, ಬಹಳ ಅಂದರೆ ಬಹಳ. ಅದನ್ನು ಇಷ್ಟೊಂತ ವರ್ಣಿಸಲಸಾಧ್ಯ. ಅಷ್ಟು ಚುರುಕು ಅವರಲ್ಲಿ. ಮತ್ತೆ ಆಚಾರವಂತರೇನೋ ಆಗಿದ್ದರು ಯಾವುದೋ ಒಂದು ದೊಡ್ಡ ದೆವ್ವ ನನ್ನು ಅವರು ವಶಮಾಡಿ ಕೊಂಡಿದ್ದರು. 'ಹೂ' ಅನ್ನು"

"ಹೂಂ, ಹೇಳು ಭೂತಣ್ಣ" ಎಂದ ಬಸವರಾಜ ನಿದ್ದೆ ತಿಳಿದು ಎದ್ದ ವನಂತೆ. ಭೂತಗಳ ಭಯಂಕರ ಕಥೆಗಳನ್ನು ಕೇಳುತ್ತಾ ಅವನು ಬಾಹ್ಯ ಪ್ರಪಂಚವನ್ನೇ ಮರೆತುಬಿಟ್ಟಿದ್ದ.

"ಯಾವುವೋ ಒಂದು ದೊಡ್ಡ ದೆವ್ವ ಎಂತ ಇಟ್ಕೋ. ಅದನ್ನು ಅವರು ವಶೀಕರಣ ಮಾಡಿಕೊಂಡಿದ್ದರು. ಶೌಚಕ್ಕೆ ಹೋದಾಗ, ತಂಬಿಗೆಯಿರುತ್ತಲ್ಲ .."

ಶೌಚಕ್ಕೆಂದು ಹೋದಾಗ ತಂಬಿಗೆಯಲ್ಲಿ ನಡುಬೆರಳು ಇಟ್ಟು ಕುಳಿತುಕೊಳ್ಳಬೇಕೆಂಬ ನಿಯಮ ಉಂಟು. ಇದರೆ ಒಂದು ದಿನ ಮರೆತು ನಡುಬೆರಳನ್ನು ಇಡದೆ ಅವರು ಕುಳಿತಿದ್ದರಂತೆ. ಆ ಪಾಪಿ ದೆವ್ವ ಅವ ರನ್ನು ಸಾಯಿಸಿಬಿಟ್ಟಿತು.

'ಏನೋ ವಿಚಿತ್ರ ಪ್ರಪಂಚ ಭೂತಣ್ಣ. ನಾನು ಬರಲೇ ಇನ್ನು?"

"ಹುಂ, ನಡೆಯಪ್ಪ. ಇನ್ನು ಸಾಯಂಕಾಲ ಸ್ನಾನ ಮಾಡಿಕೊಂಡು ಮಡಿಯಿಂದ ಬರುವುದನ್ನು ಮಾತ್ರ ಮರೆಯ ಬೇಡ—ಜೊತೆಗೆ ದುಡ್ಡು ತರುವುದನ್ನು ಮರೆತೀಯೆ"

"ಆಗಲಿ ಮಹರಾಯ.... ನೆನಪಿನಿಂದ ತರುವೆ."

"ನಾನು ದುಡ್ಡುಕೊಂಡು ಕೆಲಸ ಪೂರೈಸಿದರೆ ಆ ದ್ರೋಣಾಚಾರಿ ಏಕಲವ್ಯನ ಬೆಟ್ಟನ್ನೇ ಕೇಳಿದನಲ್ಲ, ಹಾಗೆ ಅನ್ಯಾಯ ಅಲ್ಲವೆ?" ಎಂದ ಭೂತಪ್ಪ. ಬಸವರಾಜ ತಲೆ ಕೆರೆಯುತ್ತ,

"ಆ ಹಿಂದಿನ ಪುಣ್ಯಾತ್ಮರ ಮಾತು ಹೋಗಲಿ ಬಿಡಿ. ನಾನಿನ್ನು ಬರುತ್ತೇನೆ" ಎಂದು ಅವನು ಹೊರಟಹೋದ. ಆ ದಿನವೆಲ್ಲಾ ಬಸವ ರಾಜ ಭೂತಪ್ಪನಿಗೆ ಕೊಡಬೇಕಾಗಿದ್ದ ದುಡ್ಡಿನ ಸಲುವಾಗಿ ಓಡಾಡಿದ. ಎಪ್ಪತ್ತು ರೂಪಾಯಿ ಮಧ್ಯಾಹ್ನದ ಹೊತ್ತಿಗೆ ಕೂಡಿತ್ತು. ಇನ್ನು ಮೂವತ್ತು ರೂಪಾಯಿ ಸಾಲದು ಬಂದಿತ್ತು. ಮನೆಯಲ್ಲಿನ ಚಿಕ್ಕ ಪುಟ್ಟ ಸಾಮಾನುಗಳು, ಹೆಂಡತಿಯ ತಾಳಿ ಮುಂತಾದವುಗಳನ್ನು ಮಾರಿದರೂ ಹಣ ಸಾಲದು ಬಿತ್ತು. ಇವನ ಈ ಅಡಾಉಡಿ ನೋಡಿ ಹಾಲಮ್ಮ ಕೇಳಿ ದಳು :

"ಕಾಸು ಯಾಕಾಗಿ ಬೇಕು ?"

"ಅದೇ ಬೆಳಿಗ್ಗೆ ಹೇಳಿದೆನಲ್ಲ, ಜಾಗ ಹರಾಜಿನಲ್ಲಿ ಹಿಡಿಯೋದಕ್ಕೆ."

"ಕಟ್ಟಿಸುವಂತಿದ್ದರೆ ಹಿಡಿಯಬೇಕು. ಇಲ್ಲದಿದ್ದರೆ ಅಷ್ಟಾಗಿ ಉಪಯೋಗ ಕಾಣೆ."

"ಉಪಯೋಗ ಬೀಳದೇನು ಮಾಡುತ್ತದೆ. ಸ್ಥಳ ಕೊಂಡಾದ ಮೇಲೆ ಒಂದು ದೊಡ್ಡ ಕಟ್ಟಡ ಕಟ್ಟಿಸಿ ಒಂದು ನೂರು ರೂಪಾಯಿ ಬಾಡಿಗೆ ಬರುವಂತೆ ಮಾಡುತ್ತೇನೆ. ಆ ಮೇಲೆ ಈ ಹಾಳು ದಲ್ಲಾಲಿ ವ್ಯಾಪಾರ ಬಿಟ್ಟು ಯಾವಾಗಲೂ....ಆs ...ನಿನ್ನ ಜೊತೆಗೆ ."

ಗಂಡನ ಉದ್ಯಮದ ಆಕಾಂಕ್ಷೆಯನ್ನು ಕೇಳಿ ಹಾಲಮ್ಮ ಸಾಸಿವೆ ಡಬ್ಬಿಯಲ್ಲಿನ ಐದು ರೂಪಾಯಿನ ನೋಟು ತಂದುಕೊಟ್ಟಳು.

"ಚಿನ್ನ, ನನ್ನ ಪಾಲಿಗೆ ನೀನು ಅಮೃತ ನೋಡೆ"

''ಹೋಗರಿ ನೀವು! ...'' ಎಂದು ಹಾಲಮ್ಮ ಮುಖ ಮುದುರಿ ಕೊಂಡಳು. ಬಸವರಾಜ ತನ್ನ ಕರಡಗಿಯಲ್ಲಿನ ಲಿಂಗವನ್ನು ಮುಖ ತೊಳೆದಾದ ಮೇಲೆ ತೆಗೆದು, ವಸ್ತ್ರದಲ್ಲಿಟ್ಟು ರಟ್ಟೆಗೆ ಕಟ್ಟಿಕೊಂಡ. ಉಳಿದ ಹಣಕ್ಕೆ ಕರಡಿಗೆ ಅಂಗಡಿ ಸೇರಿತು.

ಅವೊತ್ತು ಸಾಯಂಕಾಲ ಪುನಃ ಸ್ನಾನಮಾಡಿ ಬಸವರಾಜು

ಮಡಿಯಿಂದ ಭೂತಪ್ಪನ ಮನೆಗೆ ಹೋದ. ಭೂತಪ್ಪ ಇವನಿಗಾಗಿ ಕಾದುಕೊಂಡೇ ಕುಳಿತಿದ್ದ. ಹೋಗುತ್ತಲೇ ಭೂತಪ್ಪ, "ಝಣ ಝಣ ರೂಪಾಯಿ ನನ್ನ ಪ್ರೇಮದ " ಎಂದು ಗಹಗಹಿಸಿ ನಕ್ಕು,

"ಮೊದಲು ಎಣಿಸಿಕೊಂಡೇ ಮುಂದಿನ ಕೆಲಸ"ಎಂದು ನೂರೊಂದು ರೂಪಾಯಿ ಎಣಿಸಿಕೊಟ್ಟ ಬಸವರಾಜ.

''ಬಾ ಇನ್ನು, ಅಮ್ಮನ ಮುಂದೆ ಕುಳಿತುಕೊ'' ಎಂದೊಡನೆಯೇ ಬಸವರಾಜ ಆ ಕಡೆ ಪಾದರಸದಂತೆ ಹರಿದು ಬಂದ.

''ಈ ಮಣಿಕಟ್ಟಿನ ಚೂರು ಮತ್ತು ಈ ಜಿನಸುಗಳನ್ನು ಕಾಯಿಯ ರಂಧ್ರದಲ್ಲಿ ಹಾಕು.''

''ಇದರ ತೂತಿನಲ್ಲಿ ಇಳಿಬಿಡಬೇಕು ?''

"ಹುಂ. ರಂಧ್ರ ಅಂದರೆ ತಿಳಿಯೋದಿಲ್ಲವೆ ?" ಭೂತಪ್ಪ ಬಿದ್ದು ನಕ್ಕ. ಬಸವರಾಜ ಆ ಮಣಿಕಟ್ಟಿನ ಮತ್ತು ಹಸ್ತದ ಕತ್ತರಿಸಿದ ಚೂರುಗಳನ್ನು ಹಾಕಿ ಕೈಕೊಡವಿದ.

"ಇಲ್ಲಿಟ್ಟಿರುವ ತಾಯಿತ ತೆಗೆದುಕೊಂಡು ಶಿವದಾರದಲ್ಲಾದರೂ ಯಾ ಉಡದಾರದಲ್ಲಾದರೂ ಕಟ್ಟಿಕೊ. ಇದು ರಕ್ಷಾ ಕವಚ" ಹೀಗೆಂದು ಹೇಳುತ್ತಾ ಆ ತೆಂಗಿನಕಾಯಿಯನ್ನು ಹೆಣದ ಬುರುಡಿಯ ಮೇಲೆ ಐದು ಬಾರಿಯಿಟ್ಟು ಬಸವರಾಜನಿಗೆ ಕೊಡುತ್ತಾ ಹೇಳಿದ. "ಇವುಗಳನ್ನು ಬಾವಿಯಲ್ಲಿ ಹಾಕಿ ಬಿಡು."

"ಯಾವುದಾದರೂ ಬಾವಿಗೆ?...."

"ಯಾವುದಾದರೂ ಬಾವಿಗೆ ಅಂದರೆ ಅಲ್ಲಿ ನೀರಿರಬೇಕು."

"ಮಳೆ ಜೋರಾಗಿ ಬರುತ್ತಲಿದೆಯೆಂದು ಕಾಣುತ್ತೆ "

"ಹಣ್ಣಿ, ಎಂಥ ಮಳೆ ಒಮ್ಮೆಗೇ ಪ್ರಾರಂಭವಾಯಿತು" ಎಂದು ಬಸವರಾಜ ಭೂತಪ್ಪನ ಅಂಗಳಕ್ಕೆ ಬಂದು ನೋಡಿದ. ಮಳೆ ಜೋರಾಗಿ ಹೊಡೆಯುತ್ತಿತ್ತು. ಆಗಾಗ ಹೊಳೆಯುತ್ತಿದ್ದ ಮಿಂಚು ಭೀಕರತೆಯನ್ನುಂಟು ಮಾಡುತ್ತಿತ್ತು. ಗುಡುಗು ಆರ್ಭಟಿಸುತ್ತಿತ್ತು. ಇರಚಲು ಹನಿಗಳು ಬಸವರಾಜನಿಗೆ ಬಡಿಯುತ್ತಿದ್ದವು ಪುನಃ ಒಳಕ್ಕೆ ಹೋಗಿ

"ಆನೆಕಲ್ಲು ಬಿಳ್ತಾ ಇದಾವೆ ಭೂತಣ್ಣ" ಎಂದ.

"ಆಗಲಿ ಬಿಡು ಮಹರಾಯಾ, ಸೊಂಪಾಗಿ ಮಳೆ ಬಂದ ಬಂದರೆ,

ಸಾಕು"

ಮಳೆ ನಿಲ್ಲುವವರೆವಿಗೆ ಬಸವರಾಜ ತಡೆಯಬೇಕಾಗಿತ್ತು. ಸುತ್ತಲೂ ಒಮ್ಮೆ ನೋಡಿದ. ಎಂಥವರ ಎದೆಯನ್ನೂ ನಡುಗಿಸುವಂತಹ ವಸ್ತುಗಳಿಂದ ಆ ಕೊಟಡಿ ತುಂಬಿತ್ತು. ಏನೇನೋ ಮಾಟದ ಸಾಮಾನುಗಳು. ಇವು ಬಸವರಾಜನಿಗೆ ವಿಲಕ್ಷಣ ನೀರವತೆಯನ್ನು ತಂದೊಡ್ಡಿತ್ತು. ತನ್ನಷ್ಟಕ್ಕೆ ತಾನೆ ಧೈರ್ಯತುಂಬಿಕೊಳ್ಳಲು ಅವನು ಮಾತಿಗೆ ಮೊದಲು ಮಾಡಿದ.

"ಭೂತಣ್ಣ, ಆ ಎಳೆದೆಂಗಿನ ಕಾಯಲ್ಲಿ ಏನು ಹಾಕಿರುವೆ?"

"ಗುರುಮೂರ್ತಿ ಕೂದಲು, ಉಗುರು, ಗರ್ಭಿಣಿ ಹೆಂಗಸಿನ ಹಸ್ತ, ಒಂದೆಂತ್ರ ಇನ್ನೂ ಕೆಲವೊಂದು ಸಾಮಾನು"

"ಇವನ್ನು ಕೊಂಡೊಯ್ದು ಏನು ಮಾಡಬೇಕು?"

"ಆಗಲೇ ಹೇಳಿದೇನಲ್ಲೋ ಬಾವಿಯೊಳಗೆ ಹಾಕಬೇಕೂಂತ"

"ಹುಂ ಸರಿ. ಮಳೆ ಸ್ವಲ್ಪ ಕಡಿಮೆಯಾದರೆ ಸಾಕು. ಹೋಗುವೆ"

"ಹೂ ಹಾಗೆ ಮಾಡು ಈ ಕಾಯಿ ನೀರಿನಲ್ಲಿ ಕೊಳೆತಂತೆಲ್ಲಾ ಅವನು ನರಳಿ ನರಳಿ ಸಾಯುತ್ತಾನೆ" ಎಂದು ಇನ್ನೂ ಏನನ್ನೋ ಅರ್ಧ ಘಂಟೆಯವರೆಗೆ ಇರುವೆ ಓಡಾಡಿದಷ್ಟು ಶಬ್ದಬರುವಂತೆ ಗುಟ್ಟಾಗಿ ಮಾತಾಡಿದರು ಆ ಮೇಲೆ ಬಸವರಾಜ ಅದನ್ನು ಒಂದು ಅರಿವೆಯಲ್ಲಿಟ್ಟು ಕೊಂಡು ಹೊರಬಿದ್ದ. ಮಳೆಯ ಹೊಡೆತ ಕೊಂಚ ಕಮ್ಮಿಯಾಗಿತ್ತು. ಆದರೂ ಗುಡುಗು ಮಿಂಚಿನ ಹಾವಳಿ ಕಮ್ಮಿಯಾಗಿರಲಿಲ್ಲ. ಅಲ್ಲಲ್ಲಿ ಯಾವುದೋ ಪ್ರಾಣಿಗಳು ಕೂಗುತ್ತಿದ್ದವು. ಮಳೆ ಸಣ್ಣಗಾಗಿ ಬರುತ್ತಿತ್ತು. ಈಗ ಅವನು ಹಾಳುಬಾವಿಯ ಬಳಿ ಬಂದ. ಆ ಬಾವಿಯಿಂದ ಯಾರೂ ನೀರು ಬಳಸುತ್ತಿದ್ದಿಲ್ಲ. ನೀರೂ ಹೆಚ್ಚಿರಲಿಲ್ಲ. ಅರಿವೆಯಿಂದ ಆ ಮಾಟದ ಎಳೆದೆಂಗಿನ ಕಾಯಿಯನ್ನು ಹೊರಕ್ಕೆ ತಗೆದು ಹಾಕಬೇಕೆನ್ನುವಷ್ಟರಲ್ಲಿ ಜೋರಾಗಿ ಗುಡಗಿತು. ಒಂದೇ ಸಾರಿಗೆ ಹೆದರಿ ಅದನ್ನು ಬಿಟ್ಟ. ತೆಂಗಿನಕಾಯಿ ಬಾವಿಯ ತಳವನ್ನು ಸೇರಿತ್ತು. ಅಲ್ಲಲ್ಲಿ ಪಾದರಸದೋಪಾದಿ ನೀರು ನಿಂತಿತ್ತು. ಕಪ್ಪೆಗಳ ವಟವಟ ಶಬ್ದ ವಿಲಕ್ಷಣವಾದ ಭೀಕರತೆಯನ್ನುಂಟುಮಾಡಿತು. ನಾಯಿಗಳು ಬೊಗಳುತ್ತಿದ್ದವು. ಆರಿದ ವಿದ್ಯುಚ್ಛಕ್ತಿ ದೀಪಗಳು ಇನ್ನೂ ಹತ್ತಿರಲಿಲ್ಲ.

ಎಲ್ಲೆಲ್ಲೂ ನಿಶ್ಶಬ್ದ. ಎಲ್ಲರೂ ಉದಯಕಾಲಕ್ಕೆ ತಮ್ಮ ನಿತ್ಯ ಕೆಲಸಗಳ ಮೇಲೆ ಉಪಸ್ಥಿತರಾಗಬೇಕಾಗಿದ್ದರಿಂದ ನಿದ್ದೆ ಹೋಗಿದ್ದರು ಜೀರುಂಬೆಗಳು 'ಝೀ' ಎನ್ನುತ್ತಿದ್ದವು ಆಗಸದಲ್ಲಿ ಎಲ್ಲಾ ಕಡೆಗೂ ಕರಿಯ ಮೋಡಗಳಿದ್ದವು. ತಾಲ್ಲೂಕು ಕಛೇರಿಯಲ್ಲಿ ರಾತ್ರಿಯ ಹನ್ನೆರಡು ಘಂಟೆ ಹೊಡೆಯಿತು! ಆಗ ಬಸವರಾಜನಿಗೆ ತನ್ನ ವೇಳೆಯನ್ನು ಹರಟೆಯಲ್ಲಿ ಎಷ್ಟು ನಿಷ್ಕಾರಣವಾಗಿ ಕಳೆದೆನಲ್ಲಾ, ಎನ್ನಿಸಿತು ಆ ದಿನವೇ ಅವಶ್ಯಕವಾದ ಕೆಲಸದಮೇಲೆ ಅವನು ಹುಬ್ಬಳ್ಳಿಗೆ ಹೋಗಬೇಕಾಗಿತ್ತು.

ಅವನಿಗೀಗ ಹೊಟ್ಟೆ ತುಂಬಾ ಹಸಿವಾಗಿತ್ತು. ಕಣ್ಣು ಎಳೆಯುತ್ತಿತ್ತು. ಎಡವುತ್ತ ತಡವರಿಸಿಕೊಳ್ಳುತ್ತಾ ಆ ಅಂಧಕಾರದಲ್ಲಿ ಅವನು ಮನೆಗೆ ಸೇರಿ ಕದ ತಟ್ಟಿದ. ಹಾಲಮ್ಮ "ಯಾರು ಇಷ್ಟು ಹೊತ್ತಿನಲ್ಲಿ?" ಎಂದಳು

"ನಾನು" ಎಂಬ ಧ್ವನಿ ಗೊತ್ತಾದರೂ ಅವನು ತನ್ನ ಗಂಡನೇ ಎಂದು ಖಚಿತಮಾಡಿಕೊಳ್ಳಲು "ನಾನು ಅಂದರೆ?" ಎಂದಳು.

"ನಾನೇ, ಈ ಊರಿನ ಸುಪ್ರಸಿದ್ಧ ವ್ಯಾಪಾರಿ ಕೆಚ್ಚೆದೆಯ ಬಸವರಾಜ" ಎಂದು ಆಕೆಗೆ ಅವನು ತನ್ನ ಪರಿಚಯ ಹೇಳಿದ.

"ಎಷ್ಟೊತ್ತು ಬನ್ನಿ, ಊಟಕ್ಕ ಬೇಗ" ಎಂದು ಹಾಲಮ್ಮ ಗಂಡನಿಗೆ ನೀರು ಕೊಟ್ಟಳು. ಅವನು ಊಟ ಮಾಡುತ್ತಿದ್ದಾಗ "ಹರಾಜಿನಲ್ಲಿ ಜಾಗ ಹಿಡಿದಿರಾ?" ಎಂದಳು.

"ಹೌಹೋ ಹಿಡಿದು ರಿಜಿಸ್ಟರ್ ಸಹ ಆಯಿತು. ಇನ್ನೇನು ಕಟ್ಟಿಸುವುದೊಂದೇ ಬಾಕಿ ನನ್ನ ಮುಂದೆ ಯಾರ್‍ಯಾರು ಏನೆಲ್ಲ ಆಗುತ್ತಾರೆ ನೋಡಿಕೊ" ಎಂದ ಅನ್ನವನ್ನು ಅವಸರದಲ್ಲಿ ತಿನ್ನುತ್ತ. ಬಸವರಾಜನ ಅರ್ಥಾರ್ಥ ಸಂಬಂಧವಿಲ್ಲದ ಮಾತು ಹಾಲಮ್ಮನಿಗೆ ಅರ್ಥವಾಗಲಿಲ್ಲ. ಅವನ ಮಾತು ಅವಳಿಗೆ ಒಗಟಾಗಿತ್ತು!

# ೨೧

ನದಿಯಲ್ಲಿ ಮಿಂದು, ಹರಿಹರೇಶ್ವರನಿಗೆ ದಣ್ಣಿಕ್ಕಿ, ವಿಶ್ವನಾಥ ಮನೆ ಸೇರಿದಾಗ ಪ್ರೇಮ ಗಿಡಗಳಿಗೆ ನೀರು ಹಾಕುತ್ತಿದ್ದಳು. ವಿಶ್ವನಾಥ ಬಂದು ದನ್ನು ನೋಡಿ ಬೇರೆ ಕಡೆ ಮುಖ ತಿರುಗಿಸಿದಳು. ಅವನು ಅವಳ ಕಡೆ ನೋಡುವ ಸಾಹಸ ಮಾಡಲಿಲ್ಲ.

ಪ್ರೇಮ ಮನೆಗೆ ಬಂದು ಮೂರುತಿಂಗಳಾಗಿದ್ದವು. ಅವಳು ಮನೆಗೆ ಬಂದಾಗಿನಿಂದ ಅವನು ರಾಹು ಬಡಿದವರಂತೆ ಮಂಕು ಮಂಕಾಗಿರುತ್ತಿದ್ದ. ಈಗ ಅವನು ಮೊದಲಿಗಿಂತಲೂ ಮೌನ ಮನೆಗೆ ಬಂದವನೇ ಬಟ್ಟೆ ಹರವಿ ದಿವಾನಖಾನೆಯಲ್ಲಿ ಹೋಗಿ ಕುಳಿತುಕೊಂಡ. ಪ್ರೇಮ ನೀರು ಹಾಕಿದಮೇಲೆ ಕೊರಡಿಗೆ ಕಾಫಿ ತಂದಿಟ್ಟಳು. ವಿಶ್ವನಾಥ ತಗ್ಗಿಸಿದ್ದ ಮುಖವನ್ನು ಅರ್ಧದಷ್ಟು ಮೇಲಕ್ಕೆತ್ತರಿಸಿ, "ನಾನೇ ಅಡುಗೆ ಮನೆಗೆ ಬರುತ್ತಿದ್ದೆ" ಎಂದ.

"ಇರಲಿ ಬಿಡೀಂದ್ರೆ, ಇಲ್ಲಿಗೇ ತಂದದ್ದೇನು ತಪ್ಪು" ಎಂದು ಸೆರಗು ಹೊದ್ದುಕೊಂಡು ಹೋದಳು ಆಕೆ. ಪ್ರೇಮಳ ದುಂಡಾದ ಮುಖ, ಕುಳ್ಳನೆಯ ಶರೀರ, ಬಲಗಡೆಗೆ ತೆಗೆದಿರುವ ಬೈತಲೆ, ಕೆಂಪಗಿರುವ ತುಟಿಗಳು ಅಚ್ಚೊತ್ತಿದ ಭಾವಚಿತ್ರದಂತೆ ಇವನ ಮನಸ್ಸಿನಲ್ಲಿ ಬಂದು ನಿಂತು ಕೊಂಡಿತು. ಈ ರೀತಿ ಅವನು ಕಲ್ಪನಾಸಾಮ್ರಾಜ್ಯದಲ್ಲಿ ಭಾವಪರವಶನಾಗಿದ್ದಾಗ ಮಾಧು ಮತ್ತು ರೇಣುಕ ಬಾಗಿಲು ತಟ್ಟಿದರು. ವಿಶ್ವನಾಥ ಹೋಗಿ ಬಾಗಿಲು ತೆಗೆದ. ಬಸವ್ವಬಾಯಿ ಅವರಿಗೂ ಕಾಫಿಕೊಡಲು ಪ್ರೇಮ ಹೇಳಿದರು. ಮತ್ತೆರಡು ಬೆಳ್ಳಿಯ ಲೋಟಗಳಲ್ಲಿ ಪ್ರೇಮ ಕಾಫಿತಂದಿಟ್ಟು, ತನ್ನ ಗಂಡನ ಸ್ನೇಹಿತರನ್ನು ನೋಡಿದಳು ಅವರಿಬ್ಬರಿಗೂ ತನ್ನ ಗಂಡನಿಗೂ ಅದೆಷ್ಟು ವ್ಯತ್ಯಾಸ ? ಎಲ್ಲದರಲ್ಲೂ ತಾರತಮ್ಯಗಳು ಕಂಡು ಬರುತ್ತಿದ್ದವು. ವ್ಯಕ್ತಿತ್ವದಲ್ಲಿ, ದೇಹದಲ್ಲಿ, ಮನಸ್ಸಿನಲ್ಲಿ ವಿಶ್ವನಾಥ ಇಬ್ಬರಿಗೂ ಹೊರತಾಗಿದ್ದ. ಅವರು ಸಂಸಾರದ ಬವಣೆಗೆ ಸಿಕ್ಕಿ ನೊಂದ ಜೀವಿಗಳಾಗಿದ್ದರೆ, ಇವರು ದುರ್ನಡತೆಯ ವಿಷಪಾಶಕ್ಕೆ ಸಿಕ್ಕಿ ಬೆಂದಜೀವಿಯಾಗಿದ್ದಾರೆ—ಎಂದು ಆಕ್ಷಣ ಪ್ರೇಮಳಿಗೆ ಅನ್ನಿಸಿತು. ಕಾಫಿ ಇಟ್ಟು ಅವಳು ಹೊರಟು ಹೋದಳು. ಅವಳ ಬಳೆಗಳ ಶಬ್ದ ವಿಶ್ವನಾಥನ ಕಿವಿ

ಯಲ್ಲಿ ಇನ್ನೂ ಶಬ್ದ ಮಾಡುತ್ತಿದ್ದವು

''ಮಾಧು, ಮತ್ತೇನು ವಿಶೇಷ'' ಎಂದು ಮಾತಿಗೆ ಪೀಠಿಕೆ ಹಾಕಿದ ವಿಶ್ವನಾಥ.

''ಎಲ್ಲಾ ನಿಮ್ಮದೆ'' ಎಂದ ಮಾಧು

ಅಷ್ಟರಲ್ಲೇ ಬಸವ್ವಬಾಯಿ ''ಯಾರು ನಿನ್ನ ಕೂಡ ಒಳಗಿರೋರು ವಿಶ್ವ ?" ಎಂದು ಕದ ತೆಗೆದು ಒಳಗೆ ಬಂದಳು

''ನಾವರಿ ಮಾಧು—ರೇಣುಕ. ವಿಶ್ವನಾಥನ ಹತ್ತಿರ ಬಂದಿದ್ದೆವು'' ಎಂದ ಮಾಧು.

"ಮಾಧು ಏನು! ಓಹೋ ಯಾಕೋ ಮನೆಕಡೆ ಬರುವುದೇ ಇಲ್ಲ."

"ಕೆಲಸ ತುಂಬ ಇರುತ್ತೆ ...ಬಿಡುವಿರೋದೆ ಇಲ್ಲ"

"ಮಾಧು, ನಮ್ಮ ವಿಶ್ವನಾಥನಿಗೆ ಸ್ವಲ್ಪ ಬುದ್ಧಿ ಹೇಳಬಾರದೆ? ನೀವು ಸ್ನೇಹಿತರು"

"ಏನಂತ ಹೇಳಬೇಕು" ಎಂದ ಮಾಧು.

"ಹೆಂಡತಿ ಮನೆಗೆ ಬಂದಾಳೆ. ಇನ್ನಾದರೂ ಅವನು ಮೈಕೈ ತುಂಬಿಕೊಳ್ಳುವುದನ್ನು ನೋಡಬೇಕೆಂತ ಅನ್ನಿಸುತ್ತದೆ ಎಷ್ಟು ಇಳಿದು ಹೋಗಿದಾನೆ ತೀರ. ಸಣ್ಣವನಿದ್ದಾಗಿನಿಂದ ಹೀಗೇನೆ ನೋಡು ರೇಣುಕ"

"ನಮ್ಮ ಪ್ರೇಮಚಂದ್ರ ಮೇಷ್ಟ್ರ ಹತ್ತಿರಾದರೂ ತೋರಿಸಬಹುದು. ಅವರಿಗೆಲ್ಲಾ ಗೊತ್ತುಂಟು. ಮನೋವಿಶ್ಲೇಷಣಶಾಸ್ತ್ರ, ಆಯುರ್ವೇದ ಜ್ಯೋತಿಷ್ಯ, ರಮಲವಿದ್ಯೆ—ಒಂದೂಂತ ಹೇಳುವಂತಿಲ್ಲಜ್ಜಿ. ಅವರಿಗಾದರೂ ತೋರಿಸಿದರೆ ಇಷ್ಟು ಹೊತ್ತಿಗೆ ಅವನ ಮೈಯಲ್ಲಿ ಏನಾದರೂ ರೋಗ ಇದ್ದಿದ್ದರೆ, ಹೇಳದೆ ಹೋಗಿ ಬಿಡುತ್ತಿತ್ತು" ಎಂದ ರೇಣುಕ ಮುಖ ಕಿವಿಚಿಕೊಂಡು.

"ಅವರು ತೋರಿಸು ಎಂತ ಬಹಳ ದಿನಗಳಿಂದ ಹೇಳುತ್ತ ಬಂದಿದ್ದಾರಜ್ಜಿ. ಇವನೇ ಬೇಜವಾಬ್ದಾರಿ ಮಾಡಿಕೊಂಡು ಸುಮ್ಮನೆ ಬಂದಿದ್ದಾನೆ" ಎಂದ ಮಾಧವರಾವ್.

"ಅಪ್ಪಾ ಎತ್ತಾದರೇನು, ನಮ್ಮ ಹುಡುಗ ಸರಿಯಾಗಾದರೆ ಸಾಕು. ಜಂಗಮಾರಾಧನೆ ಮಾಡಿಸುತ್ತೇನೆ" ಎಂದು ಎದುರಿಗಿದ್ದ ರೇಣುಕಾಚಾರ್ಯರ ಲಿಂಗೋದ್ಭವ ಭಾವಚಿತ್ರಕ್ಕೆ ಕೈ ಮುಗಿಯುತ್ತಾ ಹೇಳಿದಳು ಬಸವ್ವ.

"ಅಜ್ಜಿ, ನಾನೆಲ್ಲಾ ತೋರಿಸುತ್ತೇನೆ, ಹೋಗಜ್ಜಿ" ಎಂದು ವಿಶ್ವನಾಥ ರೇಗಿದ.

"ಅಗೋ ಸಿಟ್ಟು ಬಂತು. ಮಾತು ಮಾತಿಗೆ ಕೋಪ"

"ನಾನೆಲ್ಲಿ ಸಿಟ್ಟು ಮಾಡಿದೆನಜ್ಜಿ?"

"ತಮ್ಮಾ, ನಿನ್ನ ಆರೋಗ್ಯಕ್ಕೆ ಹೇಳ್ತೀನೆಯೋ ವಿನಾ ನನಗೆ ಬರುವ ಭಾಗ್ಯವಾದರೂ ಏನು?"

"ಮೊದಲು ಪ್ರೇಮಚಂದ್ರ ಮೇಷ್ಟ್ರರಿಗೆ ತೋರಿಸುತ್ತೇನೆ. ಅನಂತರ ಇನ್ನೊಂದ ಡಾಕ್ಟರೊ, ವೈದ್ಯರೂ ನೋಡೋಣ"

''ಇನ್ನೊಂದು ಮಾತು: ನನ್ನ ಆರೋಗ್ಯದ ಬಗ್ಗೆ ನಾನೇ ಪ್ರಸ್ತಾಪ ಮಾಡುವೆ, ನೀವು ಸುಮ್ಮನಿರಬೇಕು.''

"ಅಗತ್ಯವಾಗಿ ನೀನೇ ಹೇಳು ಅವರವರ ಕಷ್ಟಸುಖಗಳನ್ನು ಅವರೇ ಹೇಳಬೇಕು."

"ಎಸ್. ಹಾಗಾದರೆ ಹೋಗಿ ನೀವು ಅವರನ್ನು ಕರೆತನ್ನಿ ಇನ್ನು"

"ಸುಮಾರಾಗಿ ಈ ಹೊತ್ತಿನಲ್ಲಿ ಮನೆಯಲ್ಲಿದ್ದೇ ಇರುತ್ತಾರೆ. ಆದಷ್ಟು ಬೇಗ ಕರೆದುಕೊಂಡು ಬರ್ತೀವೆ. ಆದರೆ ನೀನೆಲ್ಲಿಗೂ ಹೋಗ ಬೇಡ" ಎಂದು ಅವರಿಬ್ಬರೂ ಹೊರಟು ಹೋದರು ವಿಶ್ವನಾಥ ಮತ್ತೆ ಯೋಚನೆಯಲ್ಲಿ ಮಗ್ನನಾದ. "ನನ್ನ ಈ ನಿಶ್ಯಕ್ತತೆ ಬೇಗ ಪರಿಹಾರವಾಗ ಬೇಕು. ಹೊಸ ಉತ್ಸಾಹ, ಹೊಸ ಚೈತನ್ಯ ಅಳವಡಬೇಕು. ಪ್ರೇಮ ಳನ್ನು ಈಗ ಅಪರಿಚಿತ ವ್ಯಕ್ತಿಯಂತೆ ನಡೆಸಿಕೊಳ್ಳುತ್ತಿದ್ದೇನೆ. ವಿವಾಹ ವಾಗಿದ್ದರೂ ಬಾಳ ಗೆಳತಿಯಾಗಿ ಜೆಂಗಡಿ ಬಂದಿದ್ದರೂ ಇಬ್ಬರ ಹೃದಯ ಒಂದಾಗಿಲ್ಲ. ಮನ ಬಿಚ್ಚಿ ತೆರೆದ ಹೃದಯದಿಂದ ನಾನೇಕೆ ಮಾತ ನಾಡುತ್ತಿಲ್ಲ. ಅದೇಕೋ ಅವಳೊಡನೆ ಮಾತನಾಡಲು ಅಂಜಿಕೆ. ಅವಳು ನನ್ನವಳಾಗಿದ್ದರೂ ಬದಿಗಿದ್ದಾಗ ಹೃದಯಮಥನದಿಂದ ನರಳು ತ್ತೇನೆ. ಈ ಬೇಗುದಿಗೆ ಕಾರಣವಾದ ನನ್ನ ದುರದೃಷ್ಟಕ್ಕೆ ಮನೆಯವರು ಹೊಣೆಯೆ? ಅವರ ಮೇಲೆ ಸದಾ ಸಿಡಿಮಿಡಿಗೊಳ್ಳುತ್ತಿರುವೆನೇಕೇ? ಪ್ರೇಮ ನನ್ನ ಮೇಲೆ ನಿಜವಾದ ಪ್ರೇಮ ಇಟ್ಟಿದ್ದಾಳೆ. ಅವನು ಅಕಸ್ಮಾತ್ ಅನ್ಯರೊಡನೆ...ಛೆ! ನನ್ನ ಪ್ರೇಮ ಎಂದಿಗೂ ಆ ರೀತಿ ಮಾಡಲು ಸಾಧ್ಯವಿಲ್ಲ. ಗ್ರಹಚಾರ ವಶ ಅವಳು ತಾನು ಬಯಸಿ ಬಂದ ಆಕೆಯ

ಕಲ್ಪತರುವನ್ನು ಹೊಂದವೆ ನಿರಾಶಳಾಗಿ, ತನ್ನ ಚಾರಿತ್ರ್ಯವನ್ನು ಹಾಳು ಮಾಡಿಕೊಂಡರೆ ಆಗ? ." ಇದಕ್ಕೆ ಏನನ್ನೂ ಉತ್ತರಿಸದಾದ. ಅವನ ಪ್ರತಿಯೊಂದು ರೋಮಕೂಪಗಳಲ್ಲಿ ಬೆವರಡರಿತು. ಬಿಸಿಲಿನ ಬೇಗೆ ಯಿಲ್ಲದಿದ್ದರೂ ಮೈ, ಅಂಗೈ—ಎರಡೂ ಬೆವೆತವು. ಆ ವಿಲಕ್ಷಣ ವಾತಾವರಣ ನೀರಿನಲ್ಲಿ ಮುಳುಗುತ್ತಿರುವವರ ಪರಿಸ್ಥಿತಿಯನ್ನು ನೆನಪಿಗೆ ತರುತ್ತಿತ್ತು. ಉರಿಯುವ ಕಟ್ಟಿಗೆಯ ಮೇಲೆ ನೀರು ಹಾಕಿದಾಗ ಬರುವ ಉಗೆಯಂತೆ ಅವನು ನಿಟ್ಟುಸಿರು ಏನೋ ಒಂದು ತರಹೆ ತತ್ತರಗೊಳಿಸುವ ದೆಯ್ಯ ಬೆಂಗಡೆ ಬಿದ್ದಂತೆ ವಿದಿತವಾಗುತ್ತಿತ್ತು. ತನ್ನ ಮತ್ತು ಪ್ರೇಮಳ ಜೀವನದ ಸಮಸ್ಯೆ ಚಕ್ರವ್ಯೂಹ ಕೋಟೆಯನ್ನು ನುಗ್ಗುವ ಕಷ್ಟದ ನೆನಪನ್ನು ತಂದೊಡ್ಡಿತ್ತು. ಅಸಹನೀಯವಾದ ವೇದನೆ ಪ್ರತಿ ನರಗಳನ್ನೂ ಕೂಕ್ಕಿಯಂತೆ ಹಿಡಿದೆಳೆಯುತ್ತಿತ್ತು ಪ್ರೇಮಚಂದ್ರ, ರೇಣುಕ, ಮಾಧು ಮಾತನಾಡುತ್ತಾ ಬರುವ ಸಪ್ಪಳ ಅವನಿಗೆ ಕೇಳಿಸಿತು. ಬೇಗ ತಲೆ ಹಿಕ್ಕಿಕೊಂಡು ಕುಳಿತ ಅವರು ಬರುತ್ತಲೇ

"ನಮಸ್ಕಾರ, ಸಾರ್" ಎಂದ

"ನಮಸ್ತೆ. ಎಲ್ಲಿ, ಇಂದು ಅಂಗಡಿಗೆ ಹೋಗಿಲ್ಲವಲ್ಲ" ಎಂದರು ಪ್ರೇಮಚಂದ್ರ.

"ಇವತ್ತು ಮನೆಯಲ್ಲಿ ಸ್ವಲ್ಪ ಕೆಲಸವಿತ್ತು. ಹೋಗಲಿಕ್ಕಾಗಲಿಲ್ಲ"

"ಮನೆಯಲ್ಲಿ ನಾನೂ ಪತ್ರಿಕೆ ಓದುತ್ತಾ ಕುಳಿತುಕೊಂಡಿದ್ದೆ. ಇವರಿಬ್ಬರೂ ಬಂದು ನಿಮ್ಮ ಮನೆಗೆ ಹೋಗಲಿಕ್ಕೆ ಕರೆದರು, ಬಂದೆ."

"ಚೆನ್ನಾಯಿತು. ಬಹಳ ದಿವಸದಿಂದ ಅಡ್ಡಾಡಿದ್ದೇ ಇಲ್ಲ. ಸಾರ್, ನಿಮ್ಮ ಹತ್ತಿರ ಯಾವುದಾದರೂ ಪುಸ್ತಕ ಇದ್ದರ ಕೊಡುತ್ತೀರಾ?"

"ಆಗಲಿ, ನನ್ನ ಹತ್ತಿರ ಅಂಥ ಉತ್ತಮವಾದ ಕಥೆ-ಕಾದಂಬರಿಗಳಿಲ್ಲ ಇಲ್ಲವೆಂದರೆ ಈಗಿಲ್ಲ, ಅಷ್ಟೆ."

"ಏನು ಮಾಡಿದಿರಿ? ಎಷ್ಟು ಪುಸ್ತಕಗಳಿದ್ದವಲ್ಲ?"

"ಸುಮಾರು ಒಂದು ಸಾವಿರದ ನಾಲ್ಕು ನೂರು ಪುಸ್ತಕಗಳನ್ನು ನಮ್ಮ ಅಳಿಯನ ಮನೆಗೆ ಕಳಿಸಿಕೊಟ್ಟಿದ್ದೇನೆ. ಇನ್ನೆಲ್ಲಾ ಆಧ್ಯಾತ್ಮಿಕ ಸಂಬಂಧವಾದವುಗಳು. ಆಗಲಿ, ಯಾವುದಾದರೂ ಉತ್ತಮ ಪುಸ್ತಕ ನೋಡಿಬಿಟ್ಟು ಕಳಿಸಿಕೊಡುತ್ತೇನೆ."

"ಈಗ ವಿಶ್ವನಾಥ ಪುಸ್ತಕಗಳನ್ನು ತುಂಬಾ ಓದುತ್ತಿರುತ್ತಾನೆ" ಎಂದ ರೇಣುಕ.

"ಓದಬೇಕು, ನಮ್ಮಿಂದೆಷ್ಟು ಸಾಧ್ಯವೋ ಅಷ್ಟು"

"ಸಾರ್, ಕಾಫಿ ಕುಡಿದುಕೊಂಡು ಬರೋಣವೆ?'' ಎಂದ ವಿಶ್ವನಾಥ.

"ನಾನು ಇದೇ ತಾನೆ ಕುಡಿದುಕೊಂಡು ಬಂದೆ'' ಎಂದು ಪ್ರೇಮ ಚಂದ್ರರು ಔಪಚಾರಿಕವಾಗಿ ಮಾತನಾಡಿದರು.

"ಲಗ್ನದ ಟಿಫ಼ನ್ ಸಾರ್'' ಎಂದ ವಿಶ್ವನಾಥ

"ಸರಿ. ಲಗ್ನದ ತಿಂಡಿಯಾದರೆ ಅಗತ್ಯ ಬರುತ್ತೇನೆ.''

ಮೂವರೂ ಗಣೇಶಭವನಕ್ಕೆ ಹೋದರು. ಚಿತ್ರಗುಪ್ತ ಪತ್ರಿಕೆಯನ್ನು ಹಿಡಿದುಕೊಂಡು ಪ್ರೇಮಚಂದ್ರ ಕುಳಿತುಕೊಂಡರು. ಮಾಣಿ ವಾಂಗಿ ಭಾತ್ ತಂದಿಟ್ಟು ಹೋದ. ವಿಶ್ವನಾಥ ಮಾಣಿಯನ್ನು ತುಸು ಹೊತ್ತು ನೋಡಿದ. ಹಿಂದೆ ತಾನು ದಾವಣಗೆರೆಯ ಹೋಟೆಲೊಂದರಲ್ಲಿ ಮಾಣಿ ಯಾಗಿದ್ದ ಪರಿಸ್ಥಿತಿ ನೆನಪಿಗೆ ಬಂತು. ಆ ಸ್ಥಿತಿಗೆ ಕಾರಣವಾಗಿದ್ದ ತನ್ನ ಜರ್ಝರಿತವಾದ ಜೀವನ ಪ್ರಶ್ನೆಯೂ ಅವನಿಗೆ ನೆನಪಿಗೆ ಬಂತು.

"ಮಾಧು, ಹಿಂದೆ ಇದೇ ಮಾಣಿ ಸ್ಥಿತಿಯಲ್ಲಿದ್ದೆ ನಾನು. ಈ ಮಾಣಿ ನನಗಿಂತಲೂ ಉತ್ತಮವಾಗಿದಾನೆ" ಎಂದ.

"ನೀನು ಸೇರಿದ ಹೋಟೆಲ್ ಯಾವುದಕ್ಕೂ ಬಾರದು. ಹೊಲಸು ಹೊಟೆಲ್" ಎಂದ ಮಾಧು. ಏತನ್ಮಧ್ಯೆ ಪ್ರೇಮಚಂದ್ರ ಭಾಗವಹಿಸಿ

"ನಮ್ಮ ವಿಶ್ವನಾಥನಿಗೆ ಎಲ್ಲಾ ಜೀವನ ಕ್ಷೇತ್ರಗಳ ಅನುಭವ ಇದೆ" ಎಂದರು.

"ಅವನೀಗ ಕವಿಯಾಗಿದ್ದಾನೆ. ಸುಮ್ಮನೆ ಏನನ್ನೋ ಯೋಚನೆ ಮಾಡುತ್ತಾ ಕುಳಿತುಕೊಳ್ಳುತ್ತಾನೆ" ಎಂದ ರೇಣುಕ.

"ಯಾವಾಗಲೂ ಯೋಚನೆ ಎಂದರೆ, ಯಾವುದಾದರೂ ವಿಷಯದ ಮೇಲೆ ಕುರಿತಾಗಿ ಯೋಚಿಸಬೇಕು. ಆದರೆ ಮಾತ್ರ ಚಿಂತೆ ಮಾಡ ಬಾರದು" ಎಂದರು ಪ್ರೇಮಚಂದ್ರ ಉದ್ದಿನ ಒಡೆ ತಿನ್ನುತ್ತಾ.

"ಒಂದು ವಿಚಾರ ಹೇಳಬೇಕಾಗಿದೆ. ನಿಮ್ಮ ಹತ್ತಿರ" ಎಂದ ವಿಶ್ವನಾಥ.

"ನೀನು ಬೇಕಾದ್ದು ಹೇಳು. ನನ್ನ ಹತ್ತಿರ ಯಾಕೆ ಸಂಕುಚಿತ

ಭಾವನೆ? ನಾನೇ ಎಷ್ಟುಬಾರಿ ನಿನ್ನ ಆರೋಗ್ಯದ ಬಗ್ಗೆ ಕೇಳಿಲ್ಲವೆ. ಮುದುರಿಕೊಳ್ಳಬೇಡ, ಏನಾದರೂ ಹೇಳೋದಿದ್ದರೆ ಹೇಳು" ಎಂದರು.

"ನಾನು ಬಲಶಾಲಿಯಾಗುವದಕ್ಕೆ ಏನು ಮಾಡಬೇಕು ಸಾರ್. ಯಾವುದಾದರೂ ಟಾನಿಕ್ಕಿನ ಹೆಸರು ಗೊತ್ತಿದ್ದರೆ ಹೇಳ್ತೀರಾ ?"

"ಟಾನಿಕ್ಕೇನು, ಪ್ರತಿದಿನ ವ್ಯಾಯಾಮ ಮಾಡಬೇಕು. ಮೊದ ಲಿಂದಲೂ ನಾನು ಹೇಳುತ್ತ ಬಂದಿರುವೆ. ನಿನಗೆ ಗೊತ್ತಾಗಲಿಲ್ಲ".

"ನನ್ನ ಜೀವನದಲ್ಲಿ ಆಸೆ ಎಂಬೋದು ಎಳ್ಳಷ್ಟೂ ಇಲ್ಲ. ಸಾರ್! ಏನಾದರೂ ಮಾಡಿ ನನ್ನ ಬಾಳಿಗೆ ಬೆಳಕು ನೀಡಬೇಕು" ಎಂದ ದೈನ್ಯ ಸ್ವರದಲ್ಲಿ.

"ಆಗಲಿ, ಮಹರಾಯ. ಇಷ್ಟು ದಿನಕ್ಕೆ ಅಷ್ಟಾದರೂ ಒಪ್ಪಿಗೆಕೊಟ್ಟೆ ಯಲ್ಲ. ಅದಕ್ಕೆ ನಾವು ತುಂಬಾ ಸಂತೋಷಪಡಬೇಕಾಗಿದೆ."

"ಇಷ್ಟು ದಿವಸದಿಂದ ಈವೊತ್ತೆ ನಿಮ್ಮಹತ್ತಿರ ಮಾತಾಡಿದ್ದು ನೋಡಿ. ಯಾವಾಗಲಾದರೂ ನಲಿಗೆಯಿಂದ ಮಾತಾಡಿದ್ದು ನೋಡಿದ್ದೀರಾ?" ಎಂದ ರೇಣುಕ ಪ್ರಸಾದ.

"ಹೌದು. ನಾನು ನೋಡೇ ಇಲ್ಲ." ಎಂದ ಮಾಧು.

"ಏನೋ ತಾವು ಎಲ್ಲಾ ತಿಳಿದವರು, ನನ್ನ ಜೀವ ಉಳಿಸಬೇಕು" ಎಂದು ಗದ್ಗದಿತ ಕಂಠದಲ್ಲಿ ಹೇಳಿದ ವಿಶ್ವನಾಥ.

"ನೀನಿಷ್ಟು ವ್ಯಥೆಯಿಂದ ಹೇಳಬೇಕಾಗಿಲ್ಲ ವಿಶ್ವನಾಥ. ನಾನು ನಿನ್ನ ತಮ್ಮ ಎಂತ ಇಟ್ಟುಕೊಂಡು, ನಿನಗೆ ಬಂದಿರುವ ರೋಗ ನಿವಾರಿಸುವೆ"

"ಅಷ್ಟು ಮಾಡಿ. ಹಾಗಾದರೆ ದೇಹ ಪರೀಕ್ಷೆ ಯಾವಾಗ ಮಾಡು ತ್ತೀರಿ?"

"ನೀನು ಎಂದು ಹೇಳುತ್ತೀಯೋ ಅಂದು"

"ನಾಳೆ ಸಾಯಂಕಾಲ ನೋಡಿ"

"ಅದಕ್ಕೇನು ಮುಹೂರ್ತ ನೋಡಬೇಕೇ. ಇವತ್ತೇ ತೋರಿಸು ವಿಶ್ವ ನಾಥ" ಎಂದ ಮಾಧು.

"ಬೇಡ. ನಾಳೆ ಸಾಯಂಕಾಲ ನೋಡಿ."

"ನಿನಗೆ ಯಾವ ರೋಗ ಇದೆಯಪ್ಪ. ಮತ್ತೆ ಯಾವುದೋ ಕಾರಣ ದಿಂದ ಬಲಹೀನನಾಗಿದ್ದೀಯೆ, ಅಷ್ಟೆ"

"—ಹೌದು ಸಾರ್, ಹೌದು ..." ಎಂದು ತಡವರಿಸಿದ.

"ನಾಳೆ ಸಾಯಂಕಾಲ ಪರೀಕ್ಷಿಸಲೆ?"

"ಹುಂ" ಎಂದ ವಿಶ್ವನಾಥ

ನಾಲ್ವರೂ ಕಾಫಿಕುಡಿದು ಹೊರಹೊರಟರು. ಒಂದು ಫರ್ಲಾಂಗ್ ದೂರ ಹೋದಮೇಲೆ "ವಿಶ್ವನಾಥ ಹಾಗಾದರೆ ಯಾವಾಗ ಬರುತ್ತೀಯೆ?" ಎಂದರು ಪ್ರೇಮಚಂದ್ರ.

"ನಾಳೆ ಸಾಯಂಕಾಲ ನಾಲ್ಕು ಘಂಟೆಗೆ ಬರುತ್ತೇನೆ" ಎಂದ.

"ನೀವೂ ಬಂದಿರಿ" ಎಂದು ಪ್ರೇಮಚಂದ್ರರು ಅವನಿಬ್ಬರ ಸ್ನೇಹಿತರಿಗೆ ಹೇಳಿದ ಕೂಡಲೆ ವಿಶ್ವನಾಥ ಮುಖ ಸಣ್ಣನಾಗಿ ಮಾಡಿಕೊಂಡ. ಅವರಿಗೆಲ್ಲಿ ತನ್ನ ದೇಹದ ಒಳ ಮರ್ಮ ಗೊತ್ತಾಗುತ್ತೋ ಎಂದು ಯೋಚಿಸಿದ. ಅವರೂ ತನ್ನ ದೇಹದ ಬಗ್ಗೆ ಕನಿಕರ ಪಡುವವರು ಎಂದರಿವಾದಾಗ ಅವನಿಗೆ ಚಿತ್ತಶಾಂತಿಯುಂಟಾಯಿತು ಆಗ ತಾನೂ ತೇಜಃಪುಂಜ ಮುಖವನ್ನು ಹೊಂದಬಹುದು. ವಿಶಾಲವಾದ ಎದೆಯುಬ್ಬು, ಬಲವಾದ ಭುಜಗಳು ತನಗೂ ಲಭ್ಯವಾಗುತ್ತವೆ ಎಂದು ಕಲ್ಪನಾ ಸಾಮ್ರಾಜ್ಯದ ಸುಂದರ ಹರ್ಮ್ಯಗಳನ್ನು ಕಟ್ಟುತ್ತಿದ್ದಂತೆ ಮನೆಗೆ ಸೇರಿದ. ಅದೇ ವೇಳೆಯಲ್ಲಿ ಪ್ರೇಮಚಂದ್ರರಿಗೊಂದು ಕಾಗದ ಬರೆದು ಮಾರನೆಯ ದಿನ ಬೆಳಿಗ್ಗೆಗೆ ಸರಿಯಾಗಿ ಮುಟ್ಟುವಂತೆ ಹಾಕಿದ

ಪೂಜ್ಯ ಗುರುಗಳಿಗೆ ವಿಶ್ವನಾಥನನ ಮನಸ್ಕಾರಗಳು.

ನಾನು ತಮ್ಮಲ್ಲಿಗೆ ರೋಗ ಪರೀಕ್ಷಗೆಂದು ಬರುವ ವಿಚಾರ ತಮಗರಿಯದುದಲ್ಲ ಇಲ್ಲಿ ಅದರ ಬಗ್ಗೆ ಸ್ಥೂಲವಾಗಿ ವಿವರಿಸುತ್ತೇನೆ. ಅದರಿಂದ ನಾಳೆ ಸಾಯಂಕಾಲದ ಪರೀಕ್ಷೆಯಲ್ಲಿ ತಮಗೆ ಇನ್ನೂ ಅನುಕೂಲವಾಗುತ್ತೆಂತ ನಂಬುವೆ.

ನಾನು ಆಗಿನ್ನೂ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದೆ. ಯಾವ ಯೋಚನೆಗಳೂ ನನಗೆ ಮುತ್ತಿರಲಿಲ್ಲ. ಕೊಳದ ನಡುವಿನ ತಾವರೆಯಂತೆ ಈ ಪ್ರಪಂಚದ ಕಷ್ಟಗಳಿಗೆ ಹೊರತಾಗಿದ್ದೆ.

ಆಗ ನನಗೊಬ್ಬ ಮಿತ್ರನೊಡನೆ ಸ್ನೇಹವಾಯಿತು. ಅವನ ಹೆಸರು ಗಿರಿರಾಜನೆಂದು. ಇಬ್ಬರೂ ಯಾವಾಗಲೂ ಒಬ್ಬರನ್ನೊಬ್ಬರು ಬಿಟ್ಟಿರುತ್ತಿರಲಿಲ್ಲ. ಅವನು ನಮ್ಮ ಮನೆಗೂ ಆಗಾಗ ಬರುತ್ತಿದ್ದ. ಇಬ್ಬರ

ಜೀವಗಳು ಒಂದಾದಮೇಲೆ ಅವನು ನನ್ನೆದೆಗೆ ನಿತ್ಯವೂ ಬಿಡದೆ ಬರುತ್ತಿದ್ದ. ನಮ್ಮ ಸ್ನೇಹ ಇಲ್ಲಿಯವರೆಗೆ ಬಂದಿತ್ತು. ಇಬ್ಬರೂ ನದಿಯಾಚೆಗೆ ಊಟ ಕಟ್ಟಿಸಿಕೊಂಡೊಯ್ದು, ಒಂದೇ ತಟ್ಟೆಯಲ್ಲಿ ಊಟಮಾಡುತ್ತಿದ್ದವು. ಆದರೆ ಅವನಲ್ಲೊಂದು ದುರಭ್ಯಾಸವಿತ್ತು. ಕಂಡ ಕಡೆ ಹೆಂಗಳೆಯರ ಹಿಂದೆ ಬೆನ್ನು ಹತ್ತುವುದು ಅನೇಕ ಸುಂದರಿಯರ ಭಾವಚಿತ್ರಗಳನ್ನು ವಿವಿಧ ಭಂಗಿಗಳಲ್ಲಿ ತರಿಸಿಟ್ಟುಕೊಂಡಿದ್ದ. ಸದಾ ಅವುಗಳನ್ನು ತೆಗೆದು ಮುಖಾವಲೋಕನ ಮಾಡುವುದು ಇತ್ಯಾದಿ. ಇದರಿಂದ ಅವನಿಗೆ ಅಮಿತ ಹರ್ಷ ಉಂಟಾಗುತ್ತಿತ್ತಂತೆ. ನನಗೂ ಕಾಲಾನುಕಾಲಕ್ಕೆ ಅದನ್ನು ಹಿಡಿಸಿದ ಹೀಗೆ ಅವನ ಬೆಂಗಡೆ ಬಿದ್ದು ಅಲೆಯುವುದು ನನಗೊಂದು ದುರಭ್ಯಾಸವಾಗಿ ಪರಿಣಮಿಸಿತು. ಪರಿಣಾಮವಾಗಿ ದೇಹದೌರ್ಬಲ್ಯ ಹೆಚ್ಚಾಗುತ್ತ ಬಂತು. ಜೀವನದಲ್ಲಿ ಬದುಕಿ ಬಾಳಬೇಕೆಂಬ ಆಸೆ ಕನಸಾಯಿತು. ಆಗ ಎಚ್ಚೆತ್ತೆ. ನಾನು ಮಾಡುತ್ತಿರುವ ಕಾರ್ಯ ಮಹಾ ಪ್ರಮಾದವೆಂದರಿವಾಯಿತು.

ಪೂಜ್ಯರೆ! ಇಂಥ ಅನೇಕ ಘಟನೆಗಳು ಜನಜೀವನದಲ್ಲಿ ಅಗಣಿತವಾಗಿ ನಡೆಯುತ್ತಿವೆ. ಉದಾಹರಣೆಗಾಗಿ ಬೀಡಿಕುಡಿಯುವುದೂ ಒಂದು ದುರಭ್ಯಾಸ. ಆದರೆ ಆ ದುರಭ್ಯಾಸ ಪರಮಾವಧಿಯನ್ನು ಮುಟ್ಟಿದಾಗ ಬಿಡಲಿಕ್ಕಾಗುವುದಿಲ್ಲ, ನಾನೀಗ ಬರೆಯುತ್ತಿರುವ ವಿಷಯ ಕ್ಷುಲ್ಲಕ. ಅತಿಕ್ಷುಲ್ಲಕ ಮತ್ತು ಎಲ್ಲರಿಂದ ಬಿಡಿಸುವ ಸಮಸ್ಯೆಯಾಗಿದ್ದರೂ ನನ್ನಿಂದಾಗಲಿಲ್ಲ, ದುಃಖದ ವಿಷಯ!

ನಾನು ಇದರಿಂದ ನಿರ್ಲಿಪ್ತನಾಗುವುದಿಲ್ಲವೆಂದರಿತು, ಪ್ರಾಣತ್ಯಾಗ ಮಾಡಿಕೊಳ್ಳಲು ಹೊರಟೆ. ಆದರೆ ರೇಣುಕಪ್ರಸಾದ ಜೈಲಿನಿಂದ ಬರೆದ ಮಹತ್ವಪೂರ್ಣ ಕಾಗದ ಬಂದು, ನನ್ನನ್ನು ಪುನಃ ಬಾಳನ್ನೆದುರಿಸಲು ಪ್ರೇರೇಪಿಸಿತು. ಆ ವಿಚಾರವನ್ನು ಅಲ್ಲಿಗೇ ಕೈಬಿಟ್ಟೆ. ನಾನು ದಿನದಿನಕ್ಕೂ ಬಡಕಲಾಗುತ್ತಿದ್ದೆ. ನಡೆಯಲೂ ಸಹ ಶಕ್ತಿ ಇಲ್ಲದಂತಾಗುತ್ತಿತ್ತು. ಎತ್ತರವಾಗಿ ಪ್ರದೇಶವನ್ನು ಹತ್ತಿದರೂ ಸಹ ದಮ್ಮು ಬರುತ್ತಿತ್ತು. ಆ ಕಾರಣ ನಾನು ಲಗ್ನ ಮಾಡಿಕೊಂಡು ಸುಖವಾಗಿರಲಾರೆ ಎನ್ನಿಸುತ್ತಿತ್ತು. ನಾನು ಲಗ್ನಮಾಡಿಕೊಳ್ಳಲು ನಿರಾಕರಿಸಿದೆ. ಆದರೂ ನನ್ನ ಪಾಲಿಗೆ ವಿವಾಹದ ಕಟ್ಟು ಬಿತ್ತು....

ಏತನ್ಮಧ್ಯೆ ಅನೇಕ ಒಳ್ಳೆಯ ಕಾದಂಬರಿಗಳನ್ನೂ ಆಧ್ಯಾತ್ಮಿಕ ಗ್ರಂಥಗಳನ್ನೂ ಸಹ ತಿರುವಿಹಾಕಿದೆ. ಅನೇಕ ಔಷಧಿ ಭಸ್ಮಗಳನ್ನು ತರಿಸಿದೆ. ಅದರಿಂದ ಅನುಕೂಲ ತಕ್ಕಮಟ್ಟಿಗಾಯಿತು.

ಕೊನೆಯದಾಗಿ ಇದು ನಿಮ್ಮ ಬಳಿಯೇ ನಿವಾರಣೆಯಾಗುವುದು ಸಾಧ್ಯವೆಂದು ನನ್ನಾತ್ಮ ಒತ್ತಿ ಹೇಳುತ್ತಿತ್ತು. ಈ ಹಿಂದೆ ನೀವು ಹತ್ತಾರು ಬಾರಿ ನನ್ನ ದೇಹದ ಬಗ್ಗೆ ಕಳಕಳಿಯಿಂದ ಕೇಳಿದ್ದಿರಿ, ಆದರೆ ಅವನ್ನು ನಿಮ್ಮೊಡನೆ ಹೇಳಲಾಗಲಿಲ್ಲ. ನಾನು ಮೂರ್ತಿಮಂತ ಮಾನವನಾಗಬೇಕೆಂದು ನಿರ್ಧರಿಸಿ ಆ ದುರಭ್ಯಾಸದಿಂದ ನಿರ್ಲಿಪ್ತನಾಗಿದ್ದೇನೆ. ಇನ್ನು ನನ್ನ ಕೊರತೆಗಾಗಿ ಚಿಕಿತ್ಸೆ ಮಾಡಬೇಕು. ತಮ್ಮಲ್ಲಿ ನಾನು ಏನೂ ಮರೆಮಾಚದೆ ಬರೆದಿದ್ದೇನೆ. ತಿಳಿದವರಿಗೆ ಹೆಚ್ಚಿಗೆ ಬರೆಯಲು ಶಕ್ತನಲ್ಲ. —ಎಂದಿತ್ತು.

ಮಾರನೆಯ ದಿನ ಸಾಯಂಕಾಲ ನಾಲ್ಕು ಘಂಟೆಯ ಹೊತ್ತಿಗೆ ವಿಶ್ವನಾಥ ಪ್ರೇಮಚಂದ್ರರ ಮನೆಗೆ ಹೋದ. ಪ್ರೇಮಚಂದ್ರರು ಇವನ ಬರುವಿಕೆಯನ್ನು ಕಾಯುತ್ತಾ, ಕುಳಿತಿದ್ದರು. ಬಂದಕೂಡಲೆ ಕುರ್ಚಿಯನ್ನು ತಮ್ಮ ಬಳಿ ಎಳೆದು ಕುಳಿತುಕೊಳ್ಳಲು ಅವನಿಗೆ ಹೇಳಿದರು. ಈ ಮೊದಲು ಮಾಧು, ರೇಣುಕ ಬಂದು ಕುಳಿತುಕೊಂಡಿದ್ದರು. ವಿಶ್ವನಾಥ ಬರುತ್ತಲೇ ಹೇಳಿದರು

"ನೀವು ನಾಲ್ಕು ಘಂಟೆಗೇ ಬಂದಿದ್ದು ಅನುಕೂಲವಾಯಿತು. ನಿನ್ನ ದೇಹ ಪರೀಕ್ಷೆಯಾದ ಮೇಲೆ, ಒಂದು ತಾಸು ಅಡ್ಡಾಡುವುದಕ್ಕಾದರೂ ಹೋಗಬಹುದು."

"ಮನೆಯಲ್ಲಿ ನನಗೆ ಕೆಲಸವಾದರೂ ಏನಿರಲಿಲ್ಲ."

"ಕಾಫಿ ತೆಗೆದುಕೊಳ್ಳುವಿಯಾ, ವನಮಾಲಾ ಕಾಫಿ ಕೊಂಡುಬಾ. ಎಲ್ಲಿ ಪಾಂಡುರಂಗ ?" ಎಂದು ಕಾಫಿ ತರಿಸಿಕೊಟ್ಟರು. ವಿಶ್ವನಾಥ ಒಂದು ಲೋಟ ಕಾಫಿ ಕುಡಿದ.

"ಎಲ್ಲಿ ನಿನ್ನ ಕೈ ಕೊಡು" ಎಂದು ಪ್ರೇಮಚಂದ್ರರು ನಾಡಿಗಳನ್ನು ಸಡಿಲಮಾಡಿ ನಾಡಿ ಪರೀಕ್ಷೆಮಾಡಿ, ನಿರಾಶೆಯ ಧ್ವನಿಯಲ್ಲಿ ಹೇಳಿದರು:

"ನೀನು ಅಂದಹಾಗೆ ನಿನ್ನ ಕಾಗದದಲ್ಲಿ ಬರೆದಿರುವಂತೆ ಆ ದುರಭ್ಯಾಸವೇ ಈ ಗತಿಗೆ ತಂದಿದೆ. ನಿನ್ನಲ್ಲಿ ಅಗ್ನಿಯೇ ನಿಲ್ಲದಾಗಿದೆ" ಎಂದರು.

ಅವರ ಮಾತುಕೇಳಿ ವಿಶ್ವನಾಥನ ಮುಖ ಕಪ್ಪಿಟ್ಟಿತು. ಆದರೆ ತಾನು ಬಂದಿರುವುದು ರೋಗ ನಿವಾರಣಾರ್ಥವಾಗಿ, ಸಂದರ್ಭೋಚಿತವಾಗಿ ಎಲ್ಲವನ್ನು ವಿಶದೀಕರಿಸಿದರೂ ತಪ್ಪಿಲ್ಲ ಎಂದುಕೊಂಡ.

"ತುಂಬಾ ಅಸಹ್ಯ. ಯಾವ ಕೆಲಸಮಾಡಲೂ ಮನಸ್ಸು ಚಟುವಟಿಕೆ ಯಿಲ್ಲ."

"ಹೌದು, ಅಗ್ನಿಮಾಂದ್ಯವಿರುವುದರಿಂದ ಲವಲವಿಕೆ ಹುಟ್ಟುವುದಿಲ್ಲ" ಎಂದು ಅವರು ವಿಶ್ವನಾಥನನ್ನು ಆರಾಮ ಕುರ್ಚಿಯಲ್ಲಿ ಕುಳಿತುಕೊಳ್ಳಲು ಹೇಳಿ "ಎಲ್ಲಿ ನಾಲಗೆ ತೆಗೆ" ಎಂದರು. ವಿಶ್ವನಾಥ ನಾಲಗೆ ತೆಗೆದು ತೋರಿಸಿದ. ಅವನ ಹೊಟ್ಟೆಯ ಎರಡೂ ಪಾರ್ಶ್ವಗಳನ್ನು ಹಿಚುಕಿದರು. ಗಡ್ಡೆಗಳಿರುವ ಯಾವ ಲಕ್ಷಣಗಳೂ ಇರಲಿಲ್ಲ. ಕಣ್ಣಿನ ಅಡಿ ರೆಪ್ಪೆಗಳನ್ನು ಮೃದುವಾಗಿ ಎಳೆದು ನೋಡಿದರು,

"ನೀವು ನನ್ನ ದೇಹ ಪರೀಕ್ಷೆ ಮಾಡಿದ್ದಾಯಿತಲ್ಲ, ಯಾವಾಗ ಔಷಧಿ ಕೊಡುತ್ತೀರಿ? ಎಷ್ಟು ಖರ್ಚಾಗಬಹುದು'' ಎಂದು ವಿಶ್ವನಾಥ ಕಣ್ಣೊರಿಸಿಕೊಳ್ಳುತ್ತಾ ಹೇಳಿದ. ಪ್ರೇಮಚಂದ್ರರು ಏನನ್ನೋ ಯೋಚಿಸುವವರಂತೆ ನಟಿಸಿ "ಖರ್ಚೇನೂ ಆಗುವದಿಲ್ಲ. ನಾನೇ ಬೇಕಾದರೆ ಫಾರ್ಮಸಿಯಿಂದ ತರಿಸಿಕೊಡುತ್ತೇನೆ. ನಿನಗೆ ಆಯುರ್ವೇದ ಔಷಧಿಗಳಿಂದ ಚಿಕಿತ್ಸೆ ನಡೆಸುವುದು ತುಂಬಾ ಮೇಲು. ಯಾಕೆ ನರಸಿಂಹ ಶಾಸ್ತ್ರಿಗಳ ಹತ್ತಿರ ಆ ಔಷಧ ಇರಬಹುದು. ಅವರು ಸ್ವಯಂ ತಯಾರಿಸುತ್ತಾರೆಂತಲೂ ಕೇಳಿದ್ದೆ'' ಎಂದರು.

"ಅವು ಯಾವ ಔಷಧಗಳು? ಔಷಧಗಳ ಹೆಸರನ್ನು ಹೇಳಬಾರದೆ?" ಎಂದ ಮಾಧು.

"ಸುವರ್ಣವಂಗ, ಸಿದ್ಧಮಕರಧ್ವಜ ಎಂದು ಎರಡು. ಇವೆರಡೂ ಪಥ್ಯಮಾಡಿ ತೆಗೆದುಕೊಳ್ಳಬೇಕು. ನಂತರ 'ಕೂಷ್ಮಾಂಡಲೇಹ' ಎಂಬ ಶಕ್ತಿವರ್ಧಕ ತೆಗೆದುಕೊಂಡರೆ ಹ್ಯಾಗಾಗುತ್ತೀಯೆ. ನಿಮ್ಮನೆ ಬಾಗಿಲು ಹಿಡಿನೋಡಿಲ್ಲ" ಎಂದರು. ಅವರು ಹೇಳಿದ ಔಷಧಿಗಳಿಗಿಂತ ಅವರ ಭರವಸೆಯ ಮಾತು ಅವನಿಗೆ ಜೀವ ಕಳೆ ತುಂಬಿತು.

"ನಾನು ಇವೊತ್ತು ನರಸಿಂಹಶಾಸ್ತ್ರಿಗಳ ಹತ್ತಿರ ಆ ಔಷಧಗಳನ್ನು ಕೇಳಲೇ?''

"ಅಗತ್ಯವಾಗಿ ಕೇಳುವುದಲ್ಲದೆ ಪ್ರಕೃತಿಯನ್ನೂ ಅವರಿಗೆ ತೋರಿಸು. ಅವರ ಸಲಹೆಗಳನ್ನು ಶಿರಸಾವಹಿಸಿ ಕೇಳು. ಒಂದೆರಡು ಫರ್ಲಾಂಗ್ ದೂರ ಓಡು, ಸಾಮು ತೆಗೆ, ಸೂರ್ಯ ನಮಸ್ಕಾರ ಹಾಕು, ಒಂದಿಪ್ಪತ್ತು ಬಾರಿ ಕೂತೇಳು, ನೀರಿನಲ್ಲಿ ಈಜಾಡು, ಸ್ನಾನವಾದನಂತರ ಆ ಎಳೆಯ ಕಿರಣಗಳಿಗೆ ಮೈಯೊಡ್ಡಿ ಕುಳಿತು ಮನಸ್ಸಿದ್ದರೆ ಪ್ರಾರ್ಥನೆ, ದೇವರ ಸ್ತೋತ್ರಾವಳಿ ಇತ್ಯಾದಿ ಮಾಡು" ಎಂದು ಪ್ರೇಮಚಂದ್ರರು ವ್ಯಾಯಾಮದ ಬಗೆಗೆ ಹೇಳಿದರು.

"ಹಿಂದೆ ನಾವು ನದಿಯಾಚೆಗೆ ಹೋಗುತ್ತಿದ್ದೆವು" ಎಂದ ರೇಣುಕ.

"ಹಿಂದಿನ ಮಾತು ಹಿಂದಾಯಿತು. ಮುಂದಿನ ಮಾತು ಮುಂದಾಡಿರಿ."

"ಆಗಲಿ, ಮೊಟ್ಟಮೊದಲು ಔಷಧ ತೆಗೆದುಕೊಳ್ಳೋಣ" ಎಂದ ವಿಶ್ವನಾಥ.

"ಹಾಗೆ ಮಾಡು" ಉಪಾಧ್ಯಾಯರು ನುಡಿದರು.

"ಸಾರ್, ಈ ಬಲಹೀನತೆ ಹೋದೀತೆ."

"ಖಂಡಿತ ನಿವಾರಣೆಯಾಗುತ್ತೆ, ಅದರಲ್ಲಿ ಒಂದು ಕಾಸಿನ ತೂಕ ಸಂಶಯ ಬೇಡ. 'ಸಂಶಯಾತ್ಮಾ ವಿನಶ್ಯತಿ' ಎಂಬುದು ದೈವವಾಣಿ"

"ಸಂಶಯ, ಹೆದರಿಕೆ ಒಂದರ್ಥ ಮನುಷ್ಯನನ್ನು ಹಾಳುಮಾಡುತ್ತವೆ" ಎಂದ ರೇಣುಕ.

"ರೇಣುಕ, ಆ ಬೀರುವಿನಲ್ಲಿ 'ಬ್ರಹ್ಮಚರ್ಯವೇ ಜೀವನ' ಎಂಬ ಪುಸ್ತಕವಿದೆ ತೆಗೆದುಕೋ"

ಎಂದರು ಗುರುಗಳು ವಿಶ್ವನಾಥನ ಮುಖ ನೋಡುತ್ತ. ಅವನಿಗರಿಯದಂತೆಯೇ ವಿಶ್ವನಾಥನ ಮುಖ ವಿವರ್ಣವಾಯಿತು ರಕ್ತದ ಒತ್ತಡ ಹೆಚ್ಚಾಯಿತು, ಕೊಳದ ನೀರೆಲೆ ಹೊಯ್‌ಗಾಳಿ ಸುಳಿದಾಗ ಓಲಾಡುವಂತೆ ಅವನ ತುಟಿಗಳು ಕಂಪಿಸಿದವು, ತಲೆತಗ್ಗಿಸಿದ. ಆ ಪುಸ್ತಕದ ಹೆಸರೆ, ತನ್ನ ಹೊಲಸು ಜೀವನದ ಚಿತ್ರವನ್ನು ಅಸ್ಪಷ್ಟವಾಗಿ ಕಾಣಿಸುವಂತೆ ಮಾಡಿತು.

ರೇಣುಕ ಬೀರುವಿನಲ್ಲಿ ಹುಡುಕುತ್ತಾ "ಯಾರು ಬರೆದಿದ್ದು? ಎಲ್ಲಿದೆ ಸಾರ್?" ಎಂದ.

"ಮೇಲ್ಗಡೆ ಇದೆ, ಶಿವಾನಂದಸ್ವಾಮಿಗಳು ಬರೆದುದು."

"ಓಹೋ ಸಿಕ್ಕಿತು' ಎಂದು 'ಬ್ರಹ್ಮಚರ್ಯವೇ ಜೀವನ' ಎಂಬ ಹೊತ್ತಿಗೆಯನ್ನು ಎತ್ತಿ ತೆಗೆದು ಅದನ್ನು ತಂದು ಪ್ರೇಮಚಂದ್ರರ ಕೈಯಲ್ಲಿತ್ತ. ಅವರು ಒಮ್ಮೆ ಪುಸ್ತಕದ ಪುಟಗಳನ್ನು ಮಗುಚಿಹಾಕಿ, "ಇದು 'ಬ್ರಹ್ಮಚರ್ಯವೇ ಜೀವನ' ಎಂತ ಪುಸ್ತಕ. ಒಳ್ಳೆಯ ಮಾರ್ಮಿಕವಾಗಿ ಬ್ರಹ್ಮಚರ್ಯ ಜೀವನದ ಬಗ್ಗೆ ಇಲ್ಲಿ ವಿವೇಚಿಸಿದ್ದಾರೆ. ನಿನ್ನೆ ಬೆಳಿಗ್ಗೆ ಪುಸ್ತಕವೊಂದನ್ನು ಕೇಳಿದೆಯಲ್ಲ, ಅದಕ್ಕೆ."

"ಸರಿ....ಜ್ಞಾಪಕವಾಯಿತು" ಎಂದು ವಿಶ್ವನಾಥ ಕರವಸ್ತ್ರದಿಂದ ಮುಖ ಒರೆಸಿಕೊಂಡ. ರೇಣುಕಪ್ರಸಾದನಿಗೆ ಇದಾವುದರಮೇಲೂ ಜ್ಞಾಪಕವಿರಲಿಲ್ಲ. ತನ್ನ ಮಹತ್ವಪೂರ್ಣ ಕಾಗದ ಒಂದು, ಓರ್ವಜೀವಿಯ ಜೀವನವನ್ನು ಉಳಿಸಿತೆಂದು ಆಶ್ಚರ್ಯದ ಜೊತೆಗೆ ಸಂತೋಷ. ಇನ್ನಾದರೂ ವಿಶ್ವನಾಥರಾವ್ ಮನುಷ್ಯನಾಗುವನು—ಎಂದು ಹಿಡಿಯಲಾರದ ಅಮಿತಾನಂದ. ಇದೇ ಪಾಷಾಣದ ಬಲೆ ಅವನನ್ನು ಕೊರಗಿಸಿ ಮನೆ ಬಿಟ್ಟು ಹೋಗುವಂತೆ ಮಾಡಿದೆಯೆಂದು ಅವನಿಗರಿವಾಗದೇ ಇರಲಿಲ್ಲ. ಹೀಗೆ ಯೋಚಿಸುತ್ತ ರಸ್ತೆಯಲ್ಲಿ ಹೋಗುತ್ತಿದ್ದಾಗ ಬ್ರೆಡ್ಡಿನ ಸೈಕಲ್ ಘಂಟೆ ಅವನನ್ನು ಎಚ್ಚರಿಸಿತು. ವೇಳೆಯ ಅರಿವಾಯಿತು.

"ಸಾರ್, ಹೊರಡೋಣವೆ?" ಎಂದ.

"ಹ್ಞಾ, ಹೊರಡೋಣವೆ?" ಎಂದರು. ಅವನ ಲಕ್ಷ್ಯವೆಲ್ಲಾ 'ಬ್ರಹ್ಮಚರ್ಯವೇ ಜೀವನ'ದ ಕೊನೆಯ ಪುಟಗಳಲ್ಲಿನ ವಿವಿಧ ಆಸನಗಳ ಭಾವಚಿತ್ರದತ್ತ ಹೋಗಿತ್ತು. ಇದು ಮೊದಲೇ ಸಿಕ್ಕು, ಮೊದಲಿನಿಂದ ಕೊನೆಯವರೆವಿಗೂ ತಾನು ಅದನ್ನು ಓದಿದ್ದರೆ ಜನ್ಮ ಸಾರ್ಥಕವಾಗುತ್ತಿತ್ತು ಎಂದುಕೊಂಡ. ಅದನ್ನು ಬರೆದ ಲೇಖಕ ಮಹಾಶಯರ ಪ್ರತಿ ಅವನ ಮನಸ್ಸು ಪ್ರಣಾಮ ಮಾಡಿತು. ಅದನ್ನು ಕೊಟ್ಟು ಉದ್ಧಾರ ಮಾಡಿದವರ ಪ್ರತಿಯೂ ಮನಸ್ಸು ಗೌರವ ತಳೆಯಿತು.

"ಸಾರ್, ನಾನು ಇದನ್ನು ಅಗತ್ಯ ಒಂದಕ್ಷರವೂ ಬಿಡದೆ ಹಾಗೆ ಓದಿ ಕೊಡುತ್ತೇನೆ" ಎಂದು ಪುಸ್ತಕ ತೆಗೆದುಕೊಂಡು ಹೊರಟ.

ಅವನ ಜೀವನವಿಂದು ಜೀವರಂಗದ ಹೊಸ ದೃಶ್ಯದಲ್ಲಿ ಕಾಲಿಟ್ಟಿತ್ತು. ಅವನ ಜೀವನದ ಹೊಸ ದೃಶ್ಯಕ್ಕೆ ವಸಂತಮಾಸ ಬಂದು,

ಅತುಲನೀಯವಾದ ಶೋಭೆಯನ್ನಿತ್ತು, ತಿರುಗಿ ತನ್ನ ಗತ ಜೀವನದ ಹೇಯವಾದ ಕೃತ್ಯ ಅವನ ಮನಸ್ಸಿಗೆ ಬಂತು. ಇಂತಹ ಕುತ್ತಿಗೆ ಅದೆಷ್ಟು ದುರಂತ ಜೀವಿಗಳು ಸಿಕ್ಕುವರೋ—ಎಂದು ಯೋಚಿಸುತ್ತ ಅವರೊಡಗೂಡಿ ಅವನು ವಿಹಾರ ಹೊರಟಿದ್ದ.

## ೨೨

"ಸ್ವಲ್ಪ ಹಣ್ಣಿನ ರಸವಾದರೂ ಹೊಗಗೊಳ್ಳಪ್ಪ. ಕಾಯಿಲೆ ಹ್ಯಾಗೆ ಗುಣವಾಗಬೇಕು?" ಎಂದು ಹಣ್ಣನ್ನು ಸುಲಿಯುತ್ತಾ ಗಂಗಮ್ಮ ಗುರು ಮೂರ್ತಿಗೆ ಹೇಳಿದಳು. ಸುತ್ತಲೂ ರೇಣುಕಪ್ರಸಾದ, ಶಿವಣ್ಣಯ್ಯ, ನೀಲಮ್ಮ ಕುಳಿತುಕೊಂಡಿದ್ದರು. ನೊಣಗಳು ಬಾಯಿ ಸುತ್ತಲೂ ಬಂದು ಕುಳಿತಿದ್ದವು.

"ನಮಗೆಂತಹ ದುರ್ದೈವಿ ಮಗನು ಅದೂ ಜೋಕ್ಟಲು ಬಸಿರಿಗೆ ಕರೆದುಕೊಂಡು ಬರುವಂತಿಲ್ಲ ಇಲ್ಲಿ ಇಂಥ ಕಾದಾಟಗಳು, ದೇವರೇ!" ಎಂದು ಅತ್ತಳು ಗಂಗಮ್ಮ.

"ಅಳಬೇಡ ಗಂಗಮ್ಮ, ನೀನು ಅಳುತ್ತಾ ಎಲ್ಲರಿಗೂ ಎದೆ ಒಡೆಸ ಬೇಡ. ಎಲ್ಲರನ್ನೂ ಕಾಪಾಡಲಿಕ್ಕೆ ದೇವರಿದ್ದಾನೆ" ಎಂದು ಪಕ್ಕದಮನೆ ಮುದುಕಿ ನೀಲಮ್ಮ ಸಮಾಧಾನ ಪಡಿಸಿದಳು. ಶಿವಣ್ಣಯ್ಯನವರೂ ಸಣ್ಣ ಹುಡುಗುರಂತೆ ಅತ್ತರು ರೇಣುಕಪ್ರಸಾದನಿಗೆ ಅಳು ತಡೆಯದಾಗ ಲಿಲ್ಲ ದುಃಖಿಸಿ ಅಳುತ್ತಾ ಹೇಳಿದ

"ಇದು ಯಾವ ರೋಗ ಎಂತಲೂ ಗೊತ್ತಾಗಲೊಲ್ಲದು ಕೈಬೆಟ್ಟಿನ ಉಗುರುಗಳು ಹಸಿರುನೆಟ್ಟಿವೆ. ವೈದ್ಯರೂ ಇದಿಂಥ ರೋಗ ಎಂದು ನಿರ್ದುಷ್ಟವಾಗಿ ಹೇಳಲೊಲ್ಲರು"

"ನೋಡ್ರಿ ನೀಲವ್ವ, ಏನೋ ಆವೊತ್ತು ವೈಸುಡುತ್ತೀಂತ ಬಂದ. ಆವೊತ್ತಿನಿಂದ ..ಯಾಕೋ ಹೊಳೆ ಕಡೆಗೆ ಜನಗಳು ಓಡಿಹೋಗುತ್ತಿ ದಾರೆ." ಗಂಗಮ್ಮನ ಮಾತು ಕೇಳಿ ನೀಲಮ್ಮ ಹೋಗುತ್ತಿರುವ ಜನ ಗಳಿಗೆ ಕೇಳಿದಳು: "ಯಾರೋ ಸತ್ತಿದಾರಂತೆ ನಮಗೂ ಗೊತ್ತಿಲ್ಲ" ಅವರು ಹೊರಟು ಹೋದರು. ಇನ್ನೊಬ್ಬನು, ''ನನಗೇನೂ ಗೊತ್ತಿಲ್ಲ. ಯಾಕೋ ಜನಗಳು ಓಡಿಹೋಗಿದ್ದರು, ಅದಕ್ಕೇ ನಾನೂ ಹೊರಟೆ'' ಎಂದ. ಮುದುಕಿಗೆ ಯಾರೋ ಸತ್ತಿರುವರೆಂದು ಮಾತ್ರ ಗೊತ್ತಾಯಿತು.

"ಯಾರೋ ಹೊಳೆ ಬಿದ್ದಾರಂತೆ ಗಂಗಮ್ಮ. ಯಾರೂಂತ ಗೊತ್ತಾಗ ಒಲ್ಲದು."

"ಹುಂ, ಯಾರು ಸತ್ತರು" ಎಂದು ರೇಣುಕ ಪ್ರಸಾದ ಹೊರಡ

ಲನುವಾದ.

"ನೀನ್ಯಾಕೆ ಹೋಗುತ್ತೀಯೆ? ಕೂತುಕೋ ಬಾರೊ" ಎಂದು ಶಿವಣ್ಣಯ್ಯ ಕರೆದರು.

"ಇಲ್ಲ, ಈಗ ಬಂದು ಬಿಟ್ಟೆ" ಎಂದು ಅಂಗಿಹಾಕಿಕೊಂಡು, ಅದರ ಗುಂಡಿಗಳನ್ನು ರಸ್ತೆಯ ಮೇಲೆ ಹಾಕಿಕೊಳ್ಳುತ್ತಾ ಹೊರಟ. ನದಿ ದಂಡೆಯ ಬಳಿ ಮಾಟಗಾರ ಭೂತಪ್ಪನ ಹೆಣವನ್ನೆಳೆದಿದ್ದರು. ಹೊಟ್ಟೆಯ ತುಂಬೆಲ್ಲಾ ನೀರು ತುಂಬಿತ್ತು! ಯಾರೋ ಮಾತಾಡುತ್ತಿದ್ದರು. ಅವರ ಬಳಿಹೋಗಿ ನಿಂತುಕೊಂಡು ಕೇಳಿದ: "ಇವತ್ತು ಬೆಳಿಗ್ಗೆ ನಾನು ನೋಡಿದ್ದೆ. ಪಾಡಿದ್ದ. ಎಲ್ಲಿಗೆ ಹೋಗ್ತೀಯೋ ಭೂತಣ್ಣ ಅಂದೆ. ಹೊಳೆ ಕಡೆಗೇಂತ ಅಂದ"

"ಈಜು ಬರುತ್ತಿತ್ತಲ್ಲ ?" ಎಂದ ರೇಣುಕ.

"ಬರ್ತಿತ್ತು. ಆದರೆ ಸೆಳವಿನ ಜತೆಗೆ ಸುಳಿಗೆ ಸಿಕ್ಕುಬಿಟ್ಟ. ಮೊದಲೇ ಸುಳುವಿನ ಮಡಾಂತ ಹೆಸರಾಗ್ಯೆತಿ ಇದಕ್ಕ."

"ಪಾಪ ಒಳ್ಳೇ ಮನುಷ್ಯ! ನಮ್ಮ ಜಗನ್ನಾಥನಿಗೆ ಏನೋ ಗ್ರಹದ ಚೇಷ್ಟೆಯಾದಾಗ ಭೂತಣ್ಣನೇ ಮಂತ್ರಿಸಿದ್ದ ಪಾಪ!...." ಎಂದು ರೇಣುಕ ಮನೆಕಡೆ ಹೊರಟ. ಗಂಗಮ್ಮ ಅಂಗಳದಲ್ಲಿ ಬಂದು ಅವಸರದಿಂದ ಕೇಳಿದಳು:

"ಯಾರೋ ರೇಣುಕ ಸತ್ತಿರೋರು?"

"ಭೂತ, ದೆವ್ವ ಬಿಡಿಸುತ್ತಿದ್ದನಲ್ಲ, ಆ ಭೂತಪ್ಪ."

"ಅಯ್ಯಯ್ಯೋ ಭೂತಪ್ಪನೇ ಒಳ್ಳೇ ಮನುಷ್ಯ " ಎಂದು ಆಕೆ ನಿಟ್ಟುಸಿರೆಳೆದಳು.

"ಯಾರು ?" ಎನ್ನುತ್ತಾ ಶಿವಣ್ಣಯ್ಯ ಹೊರಕ್ಕೆ ಬಂದರು.

"ಭೂತಪ್ಪ "

"ಭೂತಪ್ಪ ...ಭೂತಪ್ಪನೇ, ಈಜು ಬರುತ್ತಿತ್ತು."

"ಈಜೇನೊ ಬರುತ್ತಿತ್ತು. ಆದರೆ ಸುಳುವಿನ ಮಡುವಿಗೆ ಸಿಕ್ಕುಬಿಟ್ಟು ಸತ್ತನಂತೆ."

"ನಮ್ಮ ಜಗನ್ನಾಥನಿಗೆ ಯಂತ್ರ ಬರೆದುಕೊಟ್ಟಿದ್ದನಲ್ಲ, ಆ ಭೂತಪ್ಪ."

"ಪಾಪ ಒಳ್ಳೆಯ ಮನುಷ್ಯ!" ಎಂದಳು ಗಂಗಮ್ಮ ನೆಲವನ್ನು ನಿಟ್ಟಿಸುತ್ತಾ.

"ಒಳಗ್ಯಾರು ಹೊಸಬರು ?"

"ಗುರುಶಾಂತಶಾಸ್ತ್ರಿಗಳು, ಈಗ ಬಂದರು."

"ಹ್ವಾ ಈಗ ಬಂದರೇನು" ಎನ್ನುತ್ತಾ ರೇಣುಕ ಒಳಗಡೆಗೆ ಹೋಗಿ,

"ಯಾವಾಗ ಬಂದಿರಿ ಅಜ್ಜ" ಎಂದ

"ಇನ್ನೂ ಇದೇ ತಾನೆ ಬಂದೆ ಅಲ್ಲ, ನರಸಿಂಹಶಾಸ್ತ್ರಿಗಳನ್ನಾದರೂ ಕರೆದುಕೊಂಡು ಬಂದು ತೋರಿಸಬಾರದಾಗಿತ್ತೇ ?"

"ತೋರಿಸಿದೇವೆ ಅಜ್ಜ, ಯಾಕೋ ಅವರಿಗೆ ರೋಗ ನಿದಾನವೇ ತಿಳಿಯಲಿಲ್ಲ"

"ರೋಗ ಯಾವುದೆಂಬುವುದು ಅವರಿಗೆ ಹೊಳೆಯಲಿಲ್ಲವೆ? ಛೆ! ಹಾಗಾದರೆ ಡಾಕ್ಟರಿಗೆ ಹೇಗೆ ಗೊತ್ತಾದೀತು. ಇದು ಆಯುರ್ವೇದ ಔಷಧದಿಂದ ಮಾತ್ರವೇ ವಾಸಿಯಾಗುತ್ತೆ."

"ಮುಖ ಎಷ್ಟು ಬೆಳ್ಳಗಿತ್ತು, ಕಪ್ಪು ಹೊಡೆದು ಬಿಟ್ಟಿತು" ಗಂಗಮ್ಮ ಎಂದಳು.

"ರೇಣುಕಾ" ಎಂದರು ಶಾಸ್ತ್ರಿಗಳು.

"ಓ ಬಂದೆ ಅಜ್ಜ, ಏನು ?" ಎಂದ ರೇಣುಕಪ್ರಸಾದ.

"ಬೇಗಹೋಗಿ ಶುಂಠಿ ಕೊಂಡು ಬಾ. ನಾನು ತುಳಿಸಿಯ ಎಲೆ ಯನ್ನು ವಾಟರ್‌ವರ್ಕ್ಸ್‌ಕಡೆ ಹೋಗಿ ಬಿಡಿಸಿಕೊಂಡು ಬರುವೆ" ಎಂದು ಅವನನ್ನು ಪೇಟೆಗೆ ಕಳುಹಿಸಿದರು. ಅವರು ಹೊರಗೆ ಹೋಗುವವನ್ನು ಕಂಡು ಶಿವಣ್ಣಯ್ಯನವರು "ನೀವ್ಯಾಕೆ ಆಯಾಸ ಮಾಡಿಕೊಳ್ಳಲಿಕ್ಕೆ ಹೋಗುತ್ತೀರಿ? ಈಗತಾನೆ ಬಂದಿದ್ದೀರಿ. ಕೊಂಚ ವಿರಾಮ ತೆಗೆದುಕೊಳ್ಳಿ" ಎಂದು ಅವರು ಹೊರಡುವುದನ್ನು ನಿಲ್ಲಿಸಿ ಶಿವಣ್ಣಯ್ಯ ಹೋಗಿ ತುಳಸಿ ಎಲೆಗಳನ್ನು ಬಿಡಿಸಿಕೊಂಡು ಬಂದರು. ರೇಣುಕ ಶುಂಠಿ ತೆಗೆದುಕೊಂಡು ಬಂದ. ಶುಂಠಿ, ತುಳಸಿ ಎಲೆಗಳನ್ನು ಸಮರಸಮಾಡಿ ಗುಳಿಗೆಯೊಂದನ್ನು ಬೆರೆಸಿ ಕೊಡಲು "ಏಳು ಗುರುಮೂರ್ತಿ, ಔಷಧಿ ತೆಗೆದುಕೊ" ಎಂದರು.

"ಈಗ ಔಷಧಿ ಬೇಡಜ್ಜ. ನನಗೆ ಬಹಳ ಬಾಯಾರಿಕೆ ಆಗುತ ಲಿದೆ. ಸ್ವಲ್ಪ ತಣ್ಣೀರು ಕೊಡಿ" ಎಂದ.

"ನೀನು ಔಷಧಿ ತಗೊಳ್ಳಣ್ಣ. ಆಮೇಲೆ ನೀರು ಕೊಡುತ್ತೇನೆಂತ ನಾನೇ ಹೇಳುತ್ತಾ ಇದ್ದೇನಲ್ಲ."

"ನೀರು ನಿಜವಾಗಲೂ ಕೊಡ್ತೀರೇನಪ್ಪ ಹಾಗಾದರೆ?"

"ಹೂ, ನಿಜವಾಗಲೂ ಕೊಡುತ್ತೇವೆ" ಎಂದು ರೇಣುಕಪ್ರಸಾದ ಅಣ್ಣನಿಗೆ ಭರವಸೆ ಕೊಟ್ಟ. ಭರವಸೆ ತೆಗೆದುಕೊಂಡ ಗುರುಮೂರ್ತಿ ಔಷಧಿ ಕುಡಿದು, ನೀರಿಗಾಗಿ ಆಶಾಪೂರ್ಣ ಮುಖವನ್ನೊಡ್ಡಿದ. "ಹಿಡಿ, ನಿನಗೆ ನಾವು ಬೇಡಾಂದೆವೆ" ಎಂದು ಗಂಗಮ್ಮ ಬಿಸಿ ನೀರು ಕೊಟ್ಟಳು.

"ಹೂ. ಬಿಸಿ ನೀರು ಬೇಡ ನನಗೆ"

"ಹಾಗೆ ಮಾಡಬೇಡಪ್ಪ, ಬಿಸಿನೀರು ಕುಡಿ. ಜಡ್ಡು ಹರಿದಮೇಲೆ ತಣ್ಣೀರು ಕುಡಿವೆಯಂತೆ" ಎಂದು ಬೆವೆತಿದ್ದ ಅವನ ಮೈಯನ್ನು ವಸ್ತ್ರ ದಿಂದ ಒರೆಸುತ್ತಾ ಗಂಗಮ್ಮ ಹೇಳಿದಳು.

"ನೀವು ಬಿಸಿನೀರು ಕೊಡ್ತೇವಿ ಅಂತ ಅಂದಿದ್ದರೆ ಮೊದಲೆ ಕುಡೀ ತಿದ್ದಿಲ್ಲ ..." ಎಂದು ಒರಲಿದ ಗುರುಮೂರ್ತಿ ಕಂಠ ಹರಿಯುವವರೆವಿಗೂ.

"ಹಾಳು ಹೊಟ್ಟೆಗೇಕೆ ಬಿಸಿನೀರು. ಕೊಂಚ ಗಂಜಿ ಕುಡಿಯಿರಿ" ಎಂದು ಗುರುಮೂರ್ತಿಯ ಹೆಂಡತಿ ಒಳಕ್ಕೆ ಹೋಗಿ ಗಂಜಿಯ ಬಟ್ಟಲನ್ನು ತಂದಿತ್ತಳು. ಅವನು ಗಂಜಿ ಗುಟುಗರಿಸುತ್ತಾ "ಭೂತಣ್ಣ ಸತ್ತನೆ?" ಎಂದ.

"ನಿನಗೆ ಯಾರು ಹೇಳಿದರು?" ಇದು ಶಾಸ್ತ್ರಿಗಳ ಪ್ರಶ್ನೆ.

"ಅವನೇ ಹೊಳೆಗೆ ಬಂದು ನನ್ನ ಲಿಂಗ ಹುಡುಕಿಕೊಟ್ಟ ದೊಡ್ಡ ಮನುಷ್ಯ. ಅವನನ್ನು ಎಷ್ಟು ನೆನೆಸಿದರೂ ಕಮ್ಮಿಯೇ. ಅವನ ಸತ್ತ ದಿಕ್ಕಿಗೆ ಕೈಮುಗಿದೆ ..."

"ಏನೋ ಗುರುಮೂರ್ತಿ ಎಚ್ಚರ ಇದೆಯೋ ಇಲ್ಲವೊ? ಮಲಗಿಕೊ. ಹಾಗೆ ಕನವರಿಸಬಾರದು" ಎಂದು ಅವನನ್ನು ಹಿಡಿದು ಮಲಗಿಸಲು ಗುರುಶಾಂತಶಾಸ್ತ್ರಿಗಳು ಹೋದರು.

"ಇಲ್ಲಜ್ಜ, ನನಗೆ ಪೂರ್ಣ ಎಚ್ಚರ ಇದೆ. ನಾನು ಹೇಳೋದು ಸುಳ್ಳಲ್ಲ. ದೇವರಾಣೆಯಾಗೂ ಅವನು ಕನಸಿನಲ್ಲಿ ಬಂದಿದ್ದ"

"ಯಾರು ಭೂತಪ್ಪನೆ?" ಪುನಃ ಗಂಗಮ್ಮ ಕೇಳಿದಳು.

"ಹೂ, ನಮ್ಮ ಜಗನ್ನಾಥನನ್ನು ಉಳಿಸಿದ ಭೂತಪ್ಪ. ಅವನಿಗೆ

ನಮೋ ನಮೋ. ಅದೇ ಜಗನ್ನಾಥ ಬಂದ. ಬಾ ಕಳ್ಳಮರಿ ...ಕಳ್ಳ ಮರಿ. ನಮ್ಮ ಕಳ್ಳಮರಿ ಬಂತು. ನಮ್ಮ ಕಳ್ಳಸ್ವಾಮಿ ಬಂತು....ಕಾಚಿ ಕುಪ್ಪೆ ಬಂತು" ಎಂದು ಎತ್ತಿಕೊಳ್ಳಲು ಹೋದ

"ಗಂಗಮ್ಮನ ಹತ್ತಿರ, ಕೊಡು, ನಿನಗೆ ತ್ರಾಣ ಇಲ್ಲ" ಎಂದರು ಶಿವಣ್ಣಯ್ಯ.

"ಅಯ್ಯೋ ಹೊಟ್ಟೆಯಲ್ಲಿ ಉರಿ .ಬೆಂಕಿ!"

"ಭೂತಪ್ಪ ಇದ್ದಿದ್ದರೆ ಏನಾದರೂ ಮಂತ್ರಿಸುತ್ತಿದ್ದ" ಸರಳಮ್ಮ ಹೇಳಿದಳು.

"ರೋಗಕ್ಕೆ ಯಾವ ಮಂತ್ರ-ತಂತ್ರ ಅಂಟವಲ್ಲದು, ತಾಯಿ" ಅಂದರು ಗುರುಶಾಂತಶಾಸ್ತ್ರಿಗಳು.

"ಭೂತಪ್ಪ ನನಗಾಗಿ ಸತ್ತ. ಕನಸಿನಲ್ಲಿಲ್ಲ .ನಿಜವಾಗಲೂ ನನ್ನ ಲಿಂಗ ಹುಡುಕಿಕೊಟ್ಟ."

"ಮತ್ತೇನೋ ತೆಗೆದಿಯಲ್ಲಣ್ಣ, ಮಾತಾಡಬೇಡ ಮಲಗಿಕೊಳ್ಳಣ್ಣ" ಎಂದು ದೈನ್ಯದಿಂದ ರೇಣುಕ ಮಲಗಿಸಿದ.

"ನಾನು ಕಲ್ಲು ಹೊಳೆಯಲ್ಲಿ ಹೋಗಿ ಈಜಾಡುತ್ತಿದ್ದೆ. ಸುಳಿವಿನ ಮಡು ಹತ್ತಿರ ಬರುತ್ತಲೂ ನನ್ನ ಶಿವದಾರ ಹರಿದು, ಲಿಂಗ ಕರಡಿಗೆ ಸಹಿತ ಕಳಚಿ ಹೋಗಿಬಿಟ್ಟಿತು. ಆ ಹಹಹ..."

"ಯಾಕೆ ಅಂತ ಮಾತುಗಳನ್ನಾಡುತ್ತೀ? ಸುಮ್ಮನೆ ಮಲಗಣ್ಣ" ಎಂದು ಶಾಸ್ತ್ರಿಗಳು ಒತ್ತಾಯದಿಂದ ಹೇಳಿದರು.

"ನಿಜವಾಗಲೂ ಶಾಸ್ತ್ರಿಗಳೆ ನಾನು ಹೇಳೋದು, ಸುಳ್ಳು ಯಾಕಾಗಿ ಹೇಳಲಿ. ನಾನು ದಂಡೆಮೇಲೆ ಅಳುತ್ತಾ ಕುಳಿತೆ, 'ಯಾಕೆ ಅಳ್ತೀ ಬಿಡು, ಹುಚ್ಚ ಇನ್ನೊಂದು ಸಾರಿ ದೀಕ್ಷೆಮಾಡಿಸ್ಕೊಂಡು ಕಟ್ಟಿಗ್ಯಾ ಬಾರದೆ?" ಎಂತ ಭೂತಣ್ಣ ಬಂದ. ಆವಾಗ ನಾನಂದೆ: ಲಿಂಗಬಿಟ್ಟು ಒಂದು ನಿಮಿಷ ಆಗಲಬಾರದು. ಹಾಗೇನಾದರೂ ಬಿಟ್ಟಗಲಿದರೆ ಪ್ರಾಣ ಹತ್ಯೆ ಮಾಡಿಕೊಳ್ಳಬೇಕೂಂತ ಇರೋದು ಎಂದೆ. ಅವನು ಕೇಳಲಿಲ್ಲ. ಇದನ್ನು ರೇಣಕರು ಅಗಸ್ತ್ಯರಿಗೆ ಷಟ್‌ಸ್ಥಲ ಉಪದೇಶ ಮಾಡುವಾಗಲೂ ಪ್ರತಿಪಾದಿಸಿದಾರೆ ಅಂದೆ. ಅವನ ಮನಸ್ಸು ಕರಗಿತು, ನಾನು ಜಂಗಮರಿಗಾಗಿ ಪ್ರಾಣತ್ಯಾಗ ಮಾಡುತ್ತೇನೆ, ನಿಮ್ಮ ಲಿಂಗಕ್ಕಾಗಿ ಬಲಿದಾನ

ಮಾಡುತ್ತೇನೆ, ಆದರೆ ಈ ಸುಳುವಿನ ಮಡುವಿನಲ್ಲಿ ಸಿಕ್ಕವರು ಹಿಂದಕ್ಕೆ ಬರೋದಿಲ್ಲ, ನಿಮ್ಮ ಲಿಂಗ ತೆಗೆದು ದೂರದಿಂದಲೇ ಕೈ ಎತ್ತುತ್ತೇನೆ, ನೀವು ಒಂದು ಗಳುವನ್ನು ಹಿಡಿದಿರಿ, ಅದರ ತೂತಿನಲ್ಲಿಟ್ಟು ಸಾಯುತ್ತೇನೆಂದು ಮುಳುಗಲಿಕ್ಕೆ ಹೋದ ನಾನು ಎಷ್ಟು ಪರಿ ಬೇಡಾಂದರೂ ಕೇಳದ ಹಾಗೆ ಮುಳುಗಿ, ಲಿಂಗ ತೆಗೆದು, ತಾನು ಮಾತ್ರ ಸತ್ತ. ನಿನ್ನ ಈ ಲಿಂಗ ಹಿಂತಿರುಗಿ ಕೊಟ್ಟ ಪುಣ್ಯಾತ್ಮನಿಗೆ ಅನಂತ... ಅನಂತ ಶಿರ ಸಾಷ್ಟಾಂಗ ನಮಸ್ಕಾರಗಳು. ಅಯ್ಯೋ ಉರಿ ! ಉರಿ ." ಎಂದು ಪುನಃ ಮಲಗಿದ. ಕೈ ಮಾತ್ರ ಲಿಂಗದ ಕರಡಿಗೆಯನ್ನು ಹಿಡಿದು ಕೊಂಡಿತ್ತು. ಈ ಮಾತುಗಳನ್ನು ಮನೆಯವರು ಮಂತ್ರಮುಗ್ಧರಾಗಿ ಕೇಳುತ್ತಿದ್ದರು.

"ಲಿಂಗವೇಕೆ ಕಳೆದಿದ್ದೀತು ಶಾಸ್ತ್ರಿಗಳೆ?" ಎಂದರು ಶಿವಣ್ಣಯ್ಯ.

"ಅಂತೂ ಕೊನೆಗೆ ಸಿಕ್ಕಿತಂತಲ್ಲ. ಏನೋ ಕೆಟ್ಟಕನಸುಗಳು. ಸಿಕ್ಕಿದ್ದರೆ ಪರವಾಗಿಲ್ಲ. ಒಳ್ಳೆಯದಾಗುತ್ತೆ ಗಂಗಮ್ಮ. ನೀವೇನೂ ಹೆದರುವ ಅವಶ್ಯಕತೆಯಿಲ್ಲ."

"ಆದರೆ ಆ ಸತ್ತ ಭೂತಪ್ಪ ಇವನ ಕನಸಿನಲ್ಲಿ ಯಾಕೆ ಬಂದಿದ್ದಾನೂಂತ?" ಗಂಗಮ್ಮ ಚಕಿತಳಾಗಿ ಕೇಳಿದಳು.

"ಏನೋ ಎಲ್ಲ ಆ ಸಚ್ಚಿದಾನಂದ ಸ್ವರೂಪನ ಲೀಲೆ!" ಎಂದು ಶಾಸ್ತ್ರಿಗಳ ಸಮಾಧಾನದ ಮಾತು.

"ಇರಲಿ ರೇಣುಕ, ಚಂಪಕಧಾಮರನ್ನಾದರೂ ಕರೆತರುತ್ತೀಯಾ? ಅವರು ತುಂಬಾ ಬುದ್ಧಿವಂತರು."

"ಅವರಾದರೆ ಪರವಾಗಿಲ್ಲ" ಎಂದು ಗಂಗಮ್ಮ ತಲೆ ಹಾಕಿದಳು. ರೇಣುಕಪ್ರಸಾದ ಚಂಪಕಧಾಮರ ಆಸ್ಪತ್ರೆಗೆ ಹೋದ. ಇತ್ತ ಅಂಚೆಯವನು ಪುಸ್ತಕ ಒಂದನ್ನಿತ್ತು ಹೋದ. ಶಾಸ್ತ್ರಿಗಳು ಒಡೆದು ನೋಡಿದರು, ನಾಟಕಕಾರ ಶಿವಕುಮಾರಕೃತ 'ವನಿತಾ ಜ್ವಾಲೆ' ಎಂದು ಅದರ ಹೆಸರು ಎದ್ದು ಕಾಣುತ್ತಿತ್ತು. ಶಾಸ್ತ್ರಿಗಳು ಒಮ್ಮೆ ಪುಸ್ತಕದ ಮೇಲೆ ಕಣ್ಣಾಡಿಸಿ, "ಶಿವಕುಮಾರ ಯಾರು ?" ಎಂದರು

"ನಮ್ಮ ಮಾಲಕ್ಕನ್ನ ಇವರೇ ಕರೆದುಕೊಂಡು ಹೋಗಿ ಸೀಮಂತ ಮಾಡಿದ್ದು."

"ಓಹೋ ನೋಡಿರುವಿ. ಅಲ್ಪ ಪರಿಚಯ"

"ಬಿಳಿಸನೂರು ಶಿವಶಂಕರಪಾಟೀಲರ ಮಗ ಶಿವಕುಮಾರ ಉತ್ತಮ ನಾಟಕಕಾರ. ಮೊನ್ನೆ ಯಾವುದೋ ಅಚ್ಚಿನಲ್ಲಿದೆ ಎಂದಿದ್ದರು. ಇದೇ ಇರಬೇಕು. ಹೆಸರು?...."

"'ವನಿತಾ ಜ್ವಾಲೆ' ಎಂದ ಶಿವಣ್ಣ. ಪುಸ್ತಕದ ಹೊರ ಮೈ ಚೆನ್ನಾಗಿದೆ."

"ಅವರು ಬರೆದದ್ದಾದರೆ ಒಳಮೆಯೂ ಚೆನ್ನಾಗಿರಬೇಕು ಏನು ಡಾಕ್ಟರು ಬಂದರೆ?"

"ಅಪ್ಪಾ, ಬಸವರಾಜನ ಮಗಳು ಆ ಕೋಳಿಯಂಥದು ಇತ್ತಲ್ಲ. ಬೆಳಿಗ್ಗೆ ಒಂದೇ ಸಾರಿಗೆ ಏನೋ ಆಗಿ ತೀರಿ ಹೊಯ್ತಂತೆ ಅಲ್ಲದೆ ಅವನಿಗೂ ಮೈಯೆಲ್ಲಾ ಉರಿ ಆಗಿನೆಯಂತೆ"

"ಕಳ್ಳ ಸೂಳೆಮಗ ನಮಗೆಷ್ಟು ಮಾಡಿದ್ದನೋ ಅದು ತಿರುಗದೇ ಬಿಡುತ್ತದೆಯೋ? ಹಾಳಾಗಿ ಹೋಗಲಿ ಬಿಡು, ಡಾಕ್ಟರು ಬಂದರೆ?"

"ಏನೋ ಬರೆಯುತ್ತ ಕೂತಿದ್ದರು, ಈಗ ಬರ್ತೇನೆ ನಡೆ ಎಂದರು. ಈಗ ಬರಬಹುದು"

ಬಸವರಾಜನಿಗೆ ಉರಿ ಅಂತ ಯಾರು ಹೇಳಿದರು?"

"ನೀಲಮ್ಮ ಹೇಳಿದ ಹಾಗಾಯಿತು,"

"ಪುಸ್ತಕ ಯಾವುದಜ್ಜ ಅದು?"

"ಶಿವಕುಮಾರ ಬರೆದ ವನಿತಾ ಜ್ವಾಲೆ"

"ಓ ಹೋ ಶಿವಕುಮಾರನೇ ಬಿಳಿಸನೂರಿನ! ಈಗ ಹದಿನೈಸು ದಿವಸದ ಹಿಂದೆ ಅಚ್ಚಿನಲ್ಲಿದೆ ಎಂತ ಹೇಳಿದ್ದ"

"ಎಷ್ಟು ಅಂಕಗಳಿರೋದು, ಕೊಡಿ ನೋಡೋಣ" ಎಂದು ಪುಸ್ತಕವನ್ನು ಒಂದು ಬಾರಿ ತಿರಿವಿಹಾಕಿ "ಐದು ಅಂಕಗಳಿವೆ, ಪೀಠಿಕೆ ಚೆನ್ನಾಗಿದೇಂತ ಕಾಣುತ್ತೆ, ಓದಲೆ ಅಜ್ಜ?"

"ಓದು ನೋಡೋಣ"

ರೇಣುಕಪ್ರಸಾದ ಓದ ತೊಡಗಿದ,

"'ಇದರ ಕಥಾವಸ್ತು ನಾನು ಬಾಳಿನಲ್ಲಿ ಕಂಡಿದ್ದು. ಸುಸಂಸ್ಕೃತ ತರುಣ ತರುಣರೆಂದೆನ್ನಿಸಿಕೊಂಡು, ನಾಲ್ಕು ಅಕ್ಷರ ಶಾಲೆಯಲ್ಲಿ ಕಲಿತು ದೊಡ್ಡ ಮನುಷ್ಯನಂತೆ ನಟಿಸುತ್ತಾ ಅಂತಃಕರುಣ ಶುದ್ಧಿಯಿಲ್ಲದೆ ನಡೆ

ಯುತ್ತಿರುವ ಮಹಾನುಭಾವರುಗಳ ಚಿತ್ರಣ ಮಾಡಿರುವೆ. ಇಲ್ಲಿ ಒಂದು ಹೆಣ್ಣಿನಮೇಲೆ ನಡೆಸಿದ ದೌರ್ಜನ್ಯ, ಆಟಾಟೋಪ ಮುಂತಾದವುಗಳನ್ನು ಚಿತ್ರಿಸಲು ಯತ್ನಿಸಿದೇನೆ. ಇದರಲ್ಲಿ ನಾನು ಎಷ್ಟು ಸಫಲವಾಗಿರು ವೆನೋ ತಿಳಿಯದು....'" ಎನ್ನುತ್ತಿದ್ದಾಗ ಡಾಕ್ಟರ ಚಂಪಕಧಾಮರು ಸೈಕಲ್‌ನಿಂದ ಇಳಿದರು. ಶಿವಣ್ಣಯ್ಯ ಹೊಸಲು ಬಳಿಗೆ ಹೋಗಿ "ಚಂಪಕಧಾಮರು ದಯಮಾಡಿಸಬೇಕು" ಎಂದು ನಮಸ್ಕಾರ ಮಾಡಿ ದರು. ಚಂಪಕಧಾಮರು ಪ್ರತಿ ನಮಸ್ಕಾರಮಾಡಿ "ಹೇಗಿದೆ, ಗುರು ಮೂರ್ತಿಗೆ?" ಎಂದರು.

"ಹಾಗೇನೆ ಇದೆ. ಹಗಲೆಲ್ಲಾ ಏನೇನೋ ಕನವರಿಸುತ್ತಾನೆ." ಡಾಕ್ಟರರು 'ಟೆಲಿಸ್ಕೋಪ್'ನಿಂದ ಪರೀಕ್ಷಿಸಿದರು ಅಂದವಾದ ಮುಖ ಅರಳಿನ ಬಣ್ಣಕ್ಕೆ ತಿರುಗಿತ್ತು. ನಿರಾಶೆಯ ದೃಷ್ಟಿಯಿಂದ ಹೇಳಿದರು: "ಇದು ರೋಗವಲ್ಲ. ಹೊಟ್ಟೆಯಲ್ಲಿ ವಿಷಸಂಬಂಧದ ಔಷಧ ಸೇರಿದೆ. ನಾನು ಇದಕ್ಕೆ ನನ್ನನುಭವದಲ್ಲಿನ ಸಿದ್ಧೌಷಧ ಕೊಡುತ್ತೇನೆ" ಎಂದರು. ಹೊಟ್ಟೆ ಯಲ್ಲಿ ವಿಷ ಸೇರಿದೆ. ತಮ್ಮ ಮಗ ವಿಷದಿಂದ ಆವೃತನಾಗಿದ್ದಾನೆಂದು ಕೇಳಿದಾಗ, ಶಿವಣ್ಣಯ್ಯನವರ ಮೆದುಳಿನಲ್ಲಿ ತುಮುಲ ಯುದ್ಧ ನಡೆಯಿತು.

"ಅದಕ್ಕೆ ಸರಿಯಾದ ಔಷಧವಿದೆಯೆ? ..." ಎಂದರು. ಅನಿರ್ವಚ ನೀಯವಾದ ನೋವು ಮುಖದಲ್ಲಿ ಸುಳಿದು ಅವರನ್ನು ದುಃಖಕ್ಕೆ ಗುರಿ ಮಾಡಿ ಮನಸ್ಸಿನಲ್ಲಿ ಹುಳುವಿನಂತೆ ಕೊರೆಯುತ್ತಿತ್ತು.

"ಇದೆ. ಇದಕ್ಕೆ ಆಯುರ್ವೇದದ ಗಿಡಮೂಲಿಕೆಗಳು ಮದ್ದು. ಆಡುಮುಟ್ಟದ ಬೇರಿನಲ್ಲಿ ಔಷಧ ಒಂದನ್ನು ಕೊಡುತ್ತೇನೆ. ಭೇದಿಯಲ್ಲಿ ಹೊರಟು ಹೋಗುತ್ತೆ. ನಿಮ್ಮ ರೇಣುಕಪ್ರಸಾದನನ್ನು ಕಳಿಸಿಕೊಡಿ" ಎಂದು ರೇಣುಕಪ್ರಸಾದನನ್ನು ತಮ್ಮ ಆಸ್ಪತ್ರೆಗೆ ಹೋಗಿ ಮದ್ದು ಕೊಟ್ಟರು. ಮಧ್ಯಾಹ್ನದ ಹೊತ್ತಿಗೆ ಎಂಟು ಹತ್ತು ಬಾರಿ ಭೇದಿಯಾಗಿ ಹೊಟ್ಟೆ ತೊಳೆಸಿತು ಗುರುಮೂರ್ತಿಯ ಹೊಟ್ಟೆಯಲ್ಲಿ ಸೇರಿದ ಪಾಷಾ ಣವೂ ಮಧ್ಯಾಹ್ನದ ಹೊತ್ತಿಗೆ ಹೊರಬಿತ್ತು.

"ಯಾರು ಮದ್ದು ಹಾಕಿದರೋ ಅವರ ಮನೆ ಹಾಳಾಗ. ಇನ್ನೂ ಎಷ್ಟುಕಾಡಿದರೂ ಅವರಿಗೆ ಸಮಾಧಾನ ಆಗೋ ಹಾಗಿಲ್ಲಾಂತ ಕಾಣು ತ್ತದೆ ಸೂಳೆಮಕ್ಕಳಿಗೆ. ಯಾವೂರ ಹಾಳುಮಾಡಿ ಬಂದಿದಾವ್ರೋ. ಗತಿ

ಇಲ್ಲದೆ ಊರು ಬಿಟ್ಟು ಬಂದು, ದಾವಣಗೆರೆಗೆ ಬಂಡಿಬಾಡಿಗೆ ಹೊಡೆಯುತ್ತಿದ್ದ ದುಬ್ಬ" ಎಂದ ರೇಣುಕ ಪ್ರಸಾದ ಸಿಟ್ಟಿನಲ್ಲಿ.

"ನೀನು ಸುಮ್ಮನಿರು ರೇಣುಕ ಯಾರು ಎಷ್ಟು ಮಾಡಿದರೂ ಆ ಭಗವಂತ ನಮ್ಮ ಕಡೆಗಿದಾನೆ. ಏನೊಂದೂ ನೀನು ಆಡಬೇಡ." ಶಿವಣ್ಣಯ್ಯ ಮೆಲುಧ್ವನಿಯಲ್ಲಿ ಹೇಳಿದರು ಕಣ್ಣಿನಲ್ಲಿ ನೋವಿನ ಮಂದ ಬೆಳಕು ಸ್ಪಷ್ಟವಾಗಿ ದ್ಯೋತಕವಾಗುತ್ತಿತ್ತು. ತಲೆ ತಿರುಗುತ್ತಿತ್ತು.

ಅಪರಾಹ್ನದ ಹೊತ್ತಿಗೆ ಗುರುಮೂರ್ತಿಗೆ ಹೊಟ್ಟೆ ತೊಳೆಸುವುದು ನಿಂತಿತು. ಆದರೂ ಮೊದಲಿನ ಕನವರಿಕೆ ಹಾಗೆಯೇ ನಡೆದಿತ್ತು. ಚಂಪಕಸ್ವಾಮರು ಮತ್ತೊಂದು ಬಾರಿ ಬಂದು ನೋಡಿಕೊಂಡು ಹೋದರು. ಈಗ ಪುನಃ ಬಂದುದು ಮೂರನೆಯ ಬಾರಿ. ಅವನ ಕನವರಿಕೆ ನಡದೇ ಇದ್ದಿತು

"ನನ್ನ ತಲೆಯಮೇಲೆ ಯಾರೋ ಕಲ್ಲು ಹಾಕಿ—ಕುಳಿತುಕೊಂಡಿದಾರೆ. ಅಯ್ಯೋ, ನಾನು ಬದುಕುವುದಿಲ್ಲ. ಒಮ್ಮೆ ಆ ಹಸುಳೆಯನ್ನು ನೋಡಬೇಕಾಗಿತ್ತು. ಸಾಯೋದಕ್ಕಿಂತ ಮುಂಚೆ ಮಾಲಿನಿ ನೋಡಬೇಕಾಗಿತ್ತು ಅವರು .. ಆಕೆಯ ಗಂಡನ ಮನೆಯವರು ನರರೂಪದ ರಾಕ್ಷಸರು! ಅಲ್ಲ....ಊಹೂ....ಅಲ್ಲ ಕಾಡು ಪಶುಗಳು. ಬದ್ಮಾಷ್ ಸೂಳೆಮಕ್ಕಳು" ಎಂದು ತನ್ನ ತಂಗಿಯ ನೆನಪು ಬಂದಾಗ ಹೀಗೆ ಗುರುಮೂರ್ತಿ ಬಡಬಡಿಸುತ್ತಿದ್ದ.

"ನಿನ್ನ ತಂಗಿ ಕರೆಸುತ್ತೇವೆ. ಮಲಗಿಕೋ ಗುರುಮೂರ್ತಿ. ಈಗ ಬರುತ್ತಾಳೆ, ಯಾಕೆ ಹಾಗೆ ಕನವರಿಸುತ್ತೀಯೆ?" ಎಂದು ಗುರುಶಾಂತ ಶಾಸ್ತ್ರಿಗಳ ಸಮಾಧಾನದ ಮಾತು.

"ಮಾಲಿನಿ ಬರ್ತಾಳೆ! ನಮ್ಮ ತಂಗಿ ಬರ್ತಾಳೆಯೇ. ಅಯ್ಯೋ, ಇನ್ನೂ ಆಡೋ ಹುಡುಗಿಯನ್ನು—ನಮ್ಮನೆಯ ಗೋವು, ನಮ್ಮನೆಯ ನಂದಾದೀಪ--ಮಾಲಿನಿಯನ್ನು ಒಬ್ಬ ಹಳ್ಳಿಯ ಕಟುಕನಿಗೆ ಗಂಗವ್ವ ಕೊಡಿಸಿದಳು. ಗಂಗಕ್ಕನನ್ನು ಹೊಳೆಯಲ್ಲಿ ಹಾಕಿ ಸಾಯಿಸಿರಿ. ಭೂತಣ್ಣ, ನನ್ನ ಇಷ್ಟಲಿಂಗ ಹುಡಕಿ ಕೊಡದಿದ್ದರ ನನಗೂ ಚಟ್ಟ ಕಟ್ಟಿದ್ದರೂ...."

"ಸುಮ್ಮನೆ ಮಲಗಿಕೋ ತಮ್ಮ. ಆಕೆಯ ಹಣೆಯ ಬರಹದಲ್ಲಿ

ಇದು ಕಟ್ಟಿತ್ತು" ಎಂದು ಗಂಗಮ್ಮನ ವೇದನೆಯ ಮಾತುಗಳು.

"ಯಾಕಾಗಿ ಆಯಾಸ ತೆಗೆದು ಕೊಳ್ಳುತ್ತಿ ಹಾಗೆ ಮಾತಾಡಿ? ಸುಮ್ಮನೆ ಮಲಗಣ್ಣ" ರೇಣುಕ ಎದ್ದಿದ್ದ ಗುರುಮೂರ್ತಿಯನ್ನು ಹಿಡಿದು ಮಲಗಿಸಿದ. ಮಾಧವರಾಯ ಗುರುಮೂರ್ತಿಯನ್ನು ನೋಡಿಕೊಂಡು ಹೋಗಲು ಬಂದ. ಕೈಯಲ್ಲೆರಡು ಮೋಸಂಬಿ ಹಣ್ಣುಗಳಿದ್ದವು.

"ಹ್ಯಾಗಿದೆ ರೇಣುಕ, ಗುರುಮೂರ್ತಿಗೆ?"

"ನಿನ್ನೆಯಿಂದ ಸೀರಿಯಸ್, ಮಾಧು"

"ಹ್ಞು. ಚಂಪಕಧಾಮರು ಬಂದು ಔಷಧ ಕೊಟ್ಟಿದಾರೆ. ಇದು ರೋಗ ಅಲ್ಲವಂತೆ ಮಾಧು ಮಾಟಮಾಡಿಸಿದ್ದಾರಂತೆ ನಮ್ಮ ವೈರಿಗಳು." ಈ ಮಾತುಕೇಳಿ ಮಾಧು ಹೌಹಾರಿದ. ಅವನಿಗೆ ಮಾತನಾಡಲು ಸ್ವರವೇ ಬರಲಿಲ್ಲ. ಯಜ್ಞೋಪವೀತದಲ್ಲಿನ ಬೀಗದ ಕೈಯನ್ನು ಅಲ್ಲಾಡಿಸುತ್ತ "ಮಾ . ಟ " ಎಂದು ಸ್ವರತೆಗೆದ.

"ಹ್ಞಾ ಪ್ರಪಂಚ ಮಾಧು! ಹೇಗಿದೆ?" ಮಾಧು ಕಲ್ಲಿನಂತೆ ನಿಂತಿದ್ದ.

"ನಿಮ್ಮ ಬಸವರಾಜನಿಗೆ ಏನೋ ಹೊಟ್ಟೆನೋವೂಂತ ಕೇಳಿದ್ದೆ."

"ಅವನ ಸುದ್ದಿ ನಮಗ್ಯಾಕೆ ಮಾಧು. ಅವನ ಹೆಸರು ಎತ್ತಿದ ಕೂಡಲೆ ಹೊಟ್ಟೆ ಭಗಭಗ ಉರಿಯುತ್ತೆ"

"ನಿಮ್ತಂದೆ ಎಲ್ಲಿ?"

"ಚಾವಡಿಮೇಲೆ ಕುಳಿತಿಕೋ ಮಾಧು. ಯಾಕೆ ನಿಂತು ಮಾತನಾಡುತ್ತೀಯೆ? ಹಳ್ಳದಕೇರಿಯಲ್ಲಿ ನಣ್ಣದುರುಗಪ್ಪ ಅಂತ ಇದಾನೆ."

ಅವನು "ಮಾಟ—ತಂತ್ರದಲ್ಲಿ ಬುದ್ಧಿವಂತ."

"ಅವನ ಹತ್ತಿರ ಹೋದರೇ? ಅಗೋ! ಇಬ್ಬರೂ ಬಂದರು"

ನಣ್ಣದುರುಗಪ್ಪ ತನ್ನ ಸಲಕರಣೆಗಳೊಂದಿಗೆ ಬಂದ. ಅವನಿಗೆ ಯಾರು ಮಾಟಮಾಡಿಸಿದ್ದಾರೆಂಬುದು ಪೂರ್ಣ ಗೊತ್ತಿತ್ತು. ಅಲ್ಲದೆ ಭೂತಪ್ಪನ ಪಟ್ಟ ಶಿಷ್ಯ ಅವನು. ಅವನು ಮಾಡಿದ ಮಾಟವನ್ನು ಇಳಿಸಲಾರದ ಸ್ಥಾನದಲ್ಲಿದ್ದ. ಆದರೂ ತನ್ನ ಪ್ರಯತ್ನವನ್ನು ಮಾಡಿಯೇ ತೀರಬೇಕೆಂಬ ಉತ್ಕಟೇಚ್ಛೆ ಅವನಿಗೆ. ಒಳಕ್ಕೆ ಬಂದು ರೇಣುಕನ ದೇಹ ಪರೀಕ್ಷೆಮಾಡಿ,

"ವೈರಿಗಳು ಹೊಟ್ಟೆಯಲ್ಲೂ ಹಾಕಿದಾರೆ, ಮೇಲೂ ಮಾಟ ಮಾಡಿದಾರೆ" ಎಂದು ಅವನು ಅಭಿಪ್ರಾಯಪಟ್ಟ.

"ಅವರ ಮನೆ ಸುಟ್ಟೆತು. ಎಲ್ಲಾ ತೊಂದರೆಕೊಟ್ಟು, ಈಗಿದಕ್ಕೆ ನಿಂತುಕೊಂಡಿದಾರೆ" ಎಂದು ಗಂಗಮ್ಮ ರೋದಿಸುವುದಕ್ಕೆ ಹಚ್ಚಿದಳು.

"ನೀನು ಸ್ವಲ್ಪ ಸುಮ್ಮನಿದ್ದರೆ ಎಲ್ಲಾ ಸರಿಯಾಗುತ್ತೆ ಗಂಗಕ್ಕ. ಶಿವಣ್ಣಯ್ಯನೋರೆ ಸ್ವಲ್ಪ ಬಂದು ಕವಡೆ ಹಾಕಿ" ಎಂದ ಸಣ್ಣ ದುರುಗಪ್ಪ. ಒಂದು ಬಾರಿ ಶಿವಣ್ಣಯ್ಯ ಕವಡೆ ಹಾಕಿದರು.

"ಎಂಟು ಬಿತ್ತು. ಹೂ ಇನ್ನೆರಡು ಸಾರಿ ಹಾಕಿ"

"ಮೂರು! ಹೂ, ಇನ್ನೊಂದು ಬಾರಿ"

"ಏಳು. ಸರಿ ಬಿಡಿ. ಸ್ವಾಮಿ ಶಾಸ್ತ್ರಿಗಳೆ ಟೈಮ್?"

"ನಾಲ್ಕು ಹೊಡೆದು ಹತ್ತು ನಿಮಿಷಾಗಿದೆ," ಎಂದರು

ಸಣ್ಣದುರುಗಪ್ಪ ತನ್ನ ಮೋಡಿ ಪುಸ್ತಕಗಳನ್ನು ತಿರುವಿಹಾಕಿ ಬಾಯಿಂದ ಏನನ್ನೋ ಗುಣಿಸಿದ. ಒಮ್ಮೆ ನೆಲನೋಡಿದ, ಒಮ್ಮೆ ಜಂತೆಯ ಕಡೆ ನೋಡಿದ. ತದನಂತರ ಕಂಠ ಸರಿಯಾಗಿ ಮಾಡಿಕೊಂಡ. ಮನೆಯವರೆಲ್ಲರೂ ಏನು ಹೇಳುತ್ತಾರೋ ಎಂದು ಕಾಯುತ್ತ ಕುಳಿತಿದ್ದರು.

"ನೋಡಿ, ನಿಮಗೆ ಯಾರಾದರೂ ದಾಯಾದಿಗಳಿದ್ದಾರೆಯೊ?"

"ಇದ್ದಾರೆ" ಎಂದರು ಶಿವಣ್ಣಯ್ಯ.

"ಅವರ ವಿನಾ ಯಾರೂ ಇದನ್ನು ಮಾಡಿಲ್ಲ ಇದನ್ನು ಮಾತ್ರ ಎಲ್ಲಿ ನಿಂತುಕೊಂಡು ಕೈಯೆತ್ತಿ ಹೇಳೂಂದರೂ ಸಹ ಹೇಳ್ತೀನಿ."

"ಇರಬಹುದು. ನಿನಗೇನು ಹೊಟ್ಟೆಕಿಚ್ಚಿ? ಶಾಸ್ತ್ರ ನುಡಿದಂತೆ ನುಡಿಯುತ್ತೀಯಪ್ಪ" ಎಂದಳು ಗಂಗಮ್ಮ.

"ಹಾಗಲ್ಲ, ವೇಳೆ ತಪ್ಪಿದರೆ ನಮಗೆ ಬಡಿಗಲ್ಲು ಬರ್ತದೆ. ಈಗಿನ ವೇಳೆ ಪ್ರಕಾರ ನಿಮ್ಮ ದಾಯಾದಿಗಳೂಂತಲೇ ಬರ್ತದೆ. ಅದಕ್ಕೆ ಕೇಳಿದ್ದು,—ನಿಮ್ಮ ದಾಯಾದಿಗಳು ಯಾರಾದರೂ ಇದಾರೇನೂಂತ. ಯಾರಾದರೂ ಮಾಡಿಸಿರಲಿ. ನಾನು ಒಂದು ಬೇರು ಒಂದು ತಾಯಿತ ಕೊಡ್ತೇನೆ. ಕಟ್ಟಿಗೊಳ್ಳಲಿ, ಎಂಥ ಮಾಟಗಾರನ ತಂತ್ರ ಇದ್ದರೂ ಹುಚ್ಚಿದ್ದು ಓಡಿ ಹೋಗ್ತದೆ. ಈಗ ಅದಕ್ಕೆ ಐವತ್ತುಕಾಲು ರೂಪಾಯಿ ಕೊಡ್ರಿ. ಆಮೇಲೆ ಗುಣಾದಮೇಲೆ ಇದ್ದಿದ್ದೆ" ಎಂದು ಅವನು ಗುರು

ಮೂರ್ತಿಯನ್ನು ಎಬ್ಬಿಸಿ, ಅವನ ಹಣೆಗೆ ಕೊಂಚ ಕುಂಕುಮ ಹಚ್ಚಿ ಯಂತ್ರ ಕಟ್ಟಿದ. ಆಮೇಲೆ ಮನೆಯವರ ಮುಖ ನೋಡುತ್ತ "ನಾನು ಸಂಜೆಗೊಂದು ಬಾರಿ ಬರ್ತೇನೆ. ಪಾಡಾಗತ್ತೈತಿ. ಇದರ ವ್ಯಾಲೆ ದೇವಿ ಯತ್ನ" ಎಂದು ಹೊರಡಲನುವಾದ. ಮನೆಯಿಂದ ನಾಲ್ಕು ಹೆಜ್ಜೆ ಅವನೊಡನೆ ಹೋಗಿ ರೇಣುಕ ಹಿಂತಿರುಗಿ ಬಂದ.

ಶಿವಣ್ಣಯ್ಯ ಗಂಗಮ್ಮ ಯೋಚನೆಯಲ್ಲಿ ಮಗ್ನರಾಗಿದ್ದರು. ಸಣ್ಣದುರುಗಪ್ಪ ಮಾಡಿ ಹೋದದ್ದೆಲ್ಲ ಕನಸಿನಲ್ಲಿ ಮಾಡಿದಂತಾಗಿತ್ತು ಅವರಿಗೆ ಮಾತನಾಡಲು ಉಸಿರೇ ಇದ್ದಿಲ್ಲ. ದಾಯಾದಿಗಳೆಂಬುವರ ರಕ್ತದ ಕಣಕಣಗಳಲ್ಲಿ ಎಷ್ಟು ಪಾಷಾಣ ಮಿಶ್ರವಾಗಿದೆಯೆಂದು, ಅವರು ಲೆಕ್ಕಹಾಕುತ್ತಾ ಧ್ವಜಸ್ತಂಭದಂತೆ ಕುಳಿತಿದ್ದರು. ಪಕ್ಕದಲ್ಲಿ ಗುರು ಮೂರ್ತಿ ಕೂಗುತ್ತಿದ್ದ.

"ಹಾಯ್ ಉರಿ! .. ಉರಿ! ನನ್ನ ಯಾರೋ ಕರೆಯುತ್ತಾ ಇದಾರೆ. ಪಾಶಾ ಹಾಕ್ತಾ ಇದಾರೆ. ಯಮ ದೂರು! ಯಮ! ಅಯ್ಯೋ ನರಗ ಳನ್ನು ಕೊಂದಿಹಾಕಿ ಎಳೆಯುತ್ತಾರೆ," ಎಂದು ಪ್ರಲಾಪ ಮಾಡುತ್ತಿದ್ದ. ಈ ಪ್ರಲಾಪ ಕೇಳಿ 'ದೇವರೆ, ಕೃಪಮಾಡಿ ನನ್ನ ಮಗುವನ್ನು ಉಳಿಸು' ಎಂದು ಶಿವಣ್ಣಯ್ಯನವರ ಉಸಿರು ದೇವರಲ್ಲಿ ಪ್ರಾರ್ಥಿಸುತ್ತಿತ್ತು.

*   *   *   *

# ೨೩

ಬೇಸಿಗೆಯ ಉರಿಬಿಸಿಲು ಎಲ್ಲರನ್ನೂ ತಾಪಗೊಳಿಸುತ್ತಿತ್ತು. ಉರಿಯುವ ಜ್ವಾಲೆಯಲ್ಲಿ ಕಾಲಿಟ್ಟ ಹಾಗೆನ್ನಿಸುತ್ತಿತ್ತು. ಬೆಳಗಿನ ಹತ್ತು ಘಂಟೆಗೆ ಉರಿ ಬಿಸಿಲು ಪ್ರಾರಂಭವಾಗಿ ಸಾಯಂಕಾಲದ ನಾಲ್ಕು ಘಂಟೆಯವರೆಗೆ, ಎಲ್ಲರನ್ನೂ ತನ್ನ ಪ್ರಖರತೆಯಿಂದ ಬೇಯಿಸುತ್ತಿತ್ತು.

ಸುಮಾರು ಮಧ್ಯಾಹ್ನದ ಹನ್ನೆರಡು ಘಂಟೆಯಾಗಿರಬಹುದು. ರಸ್ತೆಯಲ್ಲಿ ಜಗಳ ಸಂಚಾರವೂ ಕಡಮೆಯಾಗಿತ್ತು ಆಗ ಡಾಕ್ಟರ್ ಚಂಪಕಧಾಮರು ವಿದ್ಯುಚ್ಛಕ್ತಿಯ ಬೀಸಣಿಕೆಯನ್ನು ಹಾಕಿಕೊಂಡು ರೋಗಿಯೊಬ್ಬನ ಕಾಪಿಲೆಯನ್ನು ಪರೀಕ್ಷೆ ಮಾಡುತ್ತಿದ್ದರು. ಆಗತಾನೆ ಅಮಲ್ದಾರ ಸಾಹೇಬರು ಮನೆಯವರೊಬ್ಬರು ಕುದುರೆ ಬಂಡಿಯಲ್ಲಿ ಬಂದು ಔಷಧ ತೆಗೆದುಕೊಂಡು ಹೋಗಿದ್ದರು. ಪುನಃ ಇನ್ನೊಂದು ಕುದುರೆಯ ಗಾಡಿ ಬಂದ ಸಪ್ಪಳ ಕೇಳಿಸಿತು. ಕೂಡಲೇ ಅವರು ಹೊರ ಬಾಗಿಲಿಗೆ ಬಂದರು. ಕುದುರೆಯ ಗಾಡಿಯಿಂದ ಒಬ್ಬ ದೃಢಕಾಯ ವ್ಯಕ್ತಿ ಇಳಿದು, "ನಮಸ್ಕಾರ, ಸಾರ್" ಎಂದು ಮೆಲುಧ್ವನಿಯಲ್ಲ ಹೇಳಿದ.

"ಓಹೋ ನಮಸ್ಕಾರ ಬಸವರಾಜ್. ಏಕೆ ಪ್ರೈಯಲ್ಲಿ ಚನ್ನಾಗಿಲ್ಲವೆ?"

"ಏಕೋ ಡಾಕ್ಟರ್! ತಡೆಯಲಸಾಧ್ಯವಾದ ಉರಿಯೊಂದು ನನ್ನ ದೇಹವನ್ನು ಸುಡುತ್ತಿದೆ, ಏನಾದರೂ ಮಾಡಿ ನಾಶಗೊಳಿಸಿ. ಇತ್ತ ಕಡೆ ನೋಡಿ ನನ್ನ ಈ ಹೊಟ್ಟೆಯ ಎರಡೂ ಭಾಗಗಳಲ್ಲಿ .."

"ಯಾಕಷ್ಟು ಅವಸರಪಡಿಸುತ್ತೀಯೇ ಬಸವರಾಜ್. ಕುಳಿತುಕೋಬಾರದೇ?" ಎಂದು ಅವನ ಉದರದ ಎಡ ಪಾರ್ಶ್ವವನ್ನು ಹಿಚುಕಿ,

"ಏ ಪ್ಯೂನ್! ಎರಡು ಫ್ರೂಟ್ ಕ್ರಷ್ ತಗೆದುಕೊಂಡು ಬಾ" ಎಂದು ಪುನಃ ಅವನ ಉದರದ ಬಲ ಪಾರ್ಶ್ವವನ್ನು ಹಿಚುಕಿದರು. ಅವರು ತುಂಬಾ ಚಕಿತರಾಗಿ ಬಿಟ್ಟಿದ್ದರು.

"ಏನಾಗಿದೆ? ಯಾವ ಕಡೆ ಉರಿಯುತ್ತದೆ? ಇದ್ದಕ್ಕಿದ್ದ ಹಾಗೆ ಬರಲಿಕ್ಕೆ ಕಾರಣ?" ಎಂದರು ಚಂಪಕಧಾಮರು ಆಶ್ಚರ್ಯವದನರಾಗಿ.

ಅವನು ಅಳುಮುಖ ಮಾಡಿಕೊಂಡು "ಏನೋ ತಿಳಿಯದು.... ತಿಳಿಯದು" ಎಂದ

"ಹೊಟ್ಟೆ ಮುರಿಯುತ್ತದೆಯೇನು?"

"ಸ್ವಲ್ಪ ಮುರಿತವೂ ಇದೆ" ಎನ್ನುತ್ತಿದ್ದಾಗ ಅವನು ಕುರ್ಚಿಯಿಂದ ಕುಸಿದು ಬಿದ್ದ. ಜವಾನನು ಎತ್ತಿ ಆರಾಮ ಕುರ್ಚಿಯಲ್ಲಿ ಕುಳ್ಳಿರಿಸಿದ ಅಷ್ಟು ಹೊತ್ತಿಗೆ ಫ್ರೂಟ್ ಕ್ರಷ್ ಬಂತು ಅದನ್ನು ತೆಗೆದುಕೊಳ್ಳಲು ಅವರು ಅವನಿಗೆ ಹೇಳಿದರು. ಅವನಿಗೆ ಈ ಯಾವ ತಂಪು ಪಾನೀಯ ಗಳೂ ಬೇಕಾಗಿರಲಿಲ್ಲ. ತೀರ ವಿಷಮವಾಗಿ ಪರಿಣಮಿಸಿ ಉಸಿರು ಕಟ್ಟಿ ಸುವಷ್ಟು ದಟ್ಟವಾಗಿ ಹರಡಿತ್ತು.

"ಇಲ್ಲ, ಚಂಪಕಧಾಮರೆ ಬಹಳ ಉರಿ! ನನಗೆ ಮೊದಲು ಔಷಧ ಕೊಡಿ. ಯಾಕೆ ಹೀಗಾಗಿವೆಯೆಂದು ನನಗೆ ತಿಳಿಯಲೊಲ್ಲದು. ಏನಾ ದರೂ ಮಾಡಿ ಈ ಉರಿತವನ್ನು ನಿಲ್ಲಿಸಿದರೆ, ನೀವು ಕೇಳಿದಷ್ಟು ದುಡ್ಡು ಕೊಡ್ತೇನೆ ಸುಡುವ ಬೆಂಕಿಯನ್ನು ಮುಟ್ಟಿದರೆ ಅದೆಷ್ಟು ಉರಿಯುತ್ತೊ, ಅದಕ್ಕೂ ಹೆಚ್ಚಾಗಿ ಉರಿಯುತ್ತೆ! ." ಎಂದು ಪುನಃ ಕೂಗಿದ. ಅವನ ಮನಸ್ಸು ಕುದಿಯುವ ನೀರಿನಂತೆ ತಳಮಳಿಸುತ್ತಿತ್ತು. ಬೆಟ್ಟದಂತಹ ಉರಿಗೆ ಆ ಫ್ರೂಟ್‌ಕ್ರಷ್‌ನ ಕುಡಿತ ಏನೂ ಪರಿಣಾಮ ಮಾಡಲಿಲ್ಲ. ಅವನ ಮನಸ್ಸು ಕುದಿಯುವ ನೀರಿನಂತೆ ತಳಮಳಿಸುತ್ತಿತ್ತು, ಆ ಉರಿಗೆ ಹುಚ್ಚನ ಹಾಗೆ ಕೂಗುತ್ತಾ ಅಲ್ಲಿಂದಿಲ್ಲಿಗೆ ಹಾರಾಡುತ್ತಿದ್ದ. ಪುನಃ ಡಾಕ್ಟರ್ ಸಿಗರೇಟು ಹಚ್ಚಿಕೊಂಡು ಕಣ್ಣುಗಳನ್ನು ಚಿಕ್ಕವನ್ನಾಗಿ ಮಾಡಿ, ಸಿಗರೇಟು ಹೊಗೆಯನ್ನು ಸುರಳಿ ಸುರಳಿಯಾಗಿ ಹೊರಕ್ಕೆ ಬಿಡುತ್ತಾ ಹೇಳಿದರು.

"ಕಾರಣವಿಲ್ಲದೆ ಇಂತಹ ಉರಿತ ಬರಲು ಕಾರಣವಿಲ್ಲ. ಅದೂ ಒಮ್ಮಿಂದೊಮ್ಮೆಲೇ ಏಳುವುದೆಂದರೆ.... ತುಂಬಾ ಆಶ್ಚರ್ಯ. .. ಆಶ್ಚರ್ಯ! ಉರಿತ ಪ್ರಾರಂಭವಾದ ಕೂಡಲೆ ಬೇಗ ಬಂದಿದ್ದರೆ...."

ಬಾಳಿನ ಚಕ್ರಕ್ಕೆ ಸಿಕ್ಕಿ ಬಸವಳಿದು, ಬೆಂದಾಗಿ ಆತ್ಮಸಂಘಾತ ಮಾಡಿಕೊಳ್ಳಲಿಚ್ಛಿಸುವ ನೊಂದಜೀವಿಯಂತೆ, ತನ್ನ ದೇಹದ ಕಡೆಗೆ ಮೇಜಿನ ಮೇಲಿದ್ದ ಚೂರಿಯೊಂದನ್ನು ತೋರಿಸುತ್ತಾ ಉಸುರಿದ: "ಡಾಕ್ಟರ್ ! ಇನ್ನು ತಡೆಯುವಂತಿಲ್ಲ. ಆಮೇಲೆ ಮಾತನಾಡುವಿರಂತೆ!

ಮೊದಲು ಚಿಕಿತ್ಸೆಮಾಡಿ. ಇಗೋ ನೋಡಿ! ನೀವು ಬೇಗ ಚಿಕಿತ್ಸೆ ಮಾಡದಿದ್ದರೆ, ನನ್ನ ಪ್ರಾಣವನ್ನು ಒತ್ತಾಯವಮಾಡಿ ಈ ದೇಹದಿಂದ.... ಅಯ್ಯೋ ...ಎಂತಹ ನೋವಿದು ! . .ಕೆಟ್ಟ ಉರಿತ !"

"ಪರಿಸ್ಥಿತಿ ಹಾಗಿದ್ದರೆ, ಈ ಪುಡಿಯನ್ನು ಎರಡು ತಂಬಿಗೆ ನೀರಿನಲ್ಲಿ ಸರಿಯಾಗಿ ಮಿಶ್ರಣವಮಾಡಿ ದೇಹದ ಎಲ್ಲಾ ಭಾಗಕ್ಕೂ ಸವರಿಕೊಂಡು ತಣ್ಣೀರಿನಲ್ಲಿ ಸ್ನಾನವಮಾಡು. ಖಂಡಿತವಾಗಿ ನಿವಾರಣೆಯಾಗುತ್ತೆ. ನಿನ್ನ ಜನ್ಮಾಂತ್ಯದವರೆವಿಗೂ ಉರಿ ಬರುವುದಿಲ್ಲ. ಸ್ನಾನವಾದನಂತರ ಇವೆರಡು ಗುಳಿಗೆಗಳನ್ನು ಬಿಸಿ ನೀರಿನಲ್ಲಿ ಕುಡಿ. ಹೋಗು, ಬೇಗ ಹೋಗು !"

"ಬಹಳ ನಮಸ್ಕಾರ ..ಅಹಹಹ....ತುಂಬಾ ನಮಸ್ಕಾರಗಳು. ಬೇಗ ಮನೆಗೆ ಹಿಂದಿರುಗಿ ಇದನ್ನು ತೆಗೆದುಕೊಳ್ಳುವೆ. ಇಲ್ಲದಿದ್ದರೆ ಸುಟ್ಟು ಬೂದಿಯಾಗಿ ಹೋದೇನು. ಅಹಹಹ....ಬಹಳ ನಮಸ್ಕಾರ ಗಳು. ನಮಸ್ಕಾರಾ, ನಾನಿನ್ನು ಬರುವೆ. 'ಬಿಲ್'ನ್ನು ಕಳಿಸಿ ಕೊಡು ತ್ತೇನೆ" ಎಂದು ಹಲ್ಲು ಕಿರಿದು ನಾಗಾಲೋಟದಲ್ಲಿ ಬಸವರಾಜ ಮನೆಗೆ ಹಿಂದಿರುಗಿದ. ಮನೆಯ ಹೊಸಲಲ್ಲಿ ಕಾಲಿಡುತ್ತಲೇ ಕೂಗಿದ. ಅವನ ಕೂಗು ಮನೆಯಲ್ಲೆಲ್ಲಾ ಪ್ರತಿಧ್ವನಿಸಿತು.

"ಎರಡು ತಂಬಿಗೆ ನೀರು ಒಂದು ಟಂಬ್ಲರ್ ತೆಗೆದುಕೊಂಡು ಬಾರೇ" ಹೆಂಡತಿ ಹಾಲಮ್ಮ ಗಾಬರಿಯಿಂದ ನೀರು ತಂದುಕೊಟ್ಟು

"ಡಾಕ್ಟರು ಔಷಧ ಕೊಟ್ಟರೆ?" ಎಂದಳು.

"ಹೂಂ, ಕೊಟ್ಟಿದಾರೆ. ನೀನೇನು ನನಗೆ ಕೇಳೋದು ಟಂಬ್ಲರಿಗೆ ನೀರು ಹಾಕು," ಎಂದು ಆಕೆ ತತ್ತರಗೊಳ್ಳುವಂತೆ ಗದರಿಸಿದ.

"ಯಾಕೆ ಕೇಳಬಾರದು? ನಿಮಗಿಂಥ ಉರಿ ಬಂದಿದ್ದರೂ ..."

ಎಂದು ಅವನನ್ನು ಆಕೆ ರೇಗಿಸಿದಳು. ಅವನ ಕೋಪ ಗಿರಿಯ ನೆತ್ತಿ ಯನ್ನು ಮುಟ್ಟಿ ಮುಗಿಲು ಚುಂಬಿಸಿತು. ಆಕೆಗೆ ಎರಡೇಟು ಬಿಗಿದು "ಏ! ಹೆಣ್ಣು ನಾಯಿ, ಹೇಳಿದಷ್ಟು ಕೆಲಸಮಾಡು...." ಎಂದ. ಹಾಲಮ್ಮ ನಿಗೆ ಇಂತಹ ಅನೇಕ ಏಟುಗಳಿಂದ ಅವಳ ಹೃದಯ ವಜ್ರಪಾತದ ಶಕ್ತಿ ಯನ್ನು ಕಂಡಿತ್ತು. ಒಳಿಕ ಅವನು ಶೀಘ್ರ ಆ ಪುಡಿಯನ್ನು ಹಚ್ಚಿಕೊಂಡು ತಣ್ಣೀರಿನಲ್ಲಿ ಸ್ನಾನಮಾಡಿದ. ಆ ಎರಡು ಗುಳಿಗೆಗಳನ್ನು ಬಿಸಿನೀರಿನಲ್ಲಿ ತೆಗೆದುಕೊಂಡ. ಆ ಉರಿತ ಸಂಪೂರ್ಣ ಕಡಿಮೆಯಾದ ಹಾಗಾಯಿತು.

ಬೆಂಕಿಯ ಮನೆಯಿಂದ ಅವನನ್ನು ಹೊರಗೆಳೆದ ಹಾಗೆನ್ನಿಸಿತು. ಜೀವ ಹೂವಿಗಿಂತ ಹಗುರವಾಯಿತು. "ಏ, ಹಾಲಿ'' ಎಂದ.

"ಏನು ಬೇಕಾಗಿತ್ತು. ಊಟಕ್ಕೆ ಹಾಕಲೇ ?" ಎಂದು ಗಂಡನ ಬಳಿಗೆ ಬಂದಳು,

"ಈಗ ಊಟಕ್ಕೆ ಬೇಡ. ಡಾಕ್ಟರರ ಆಸ್ಪತ್ರೆಗೆ ಹೋಗುವುದಕ್ಕಿಂತ ಮುಂಚೆ ಊಟಮಾಡಿದ್ದು ಹಾಗೆಯೇ ಇದೆ. ನನಗೆ ಕಡ್ಲಿಬೇಳೆ ನೆನೆಸಿ ಹಾಕಿದ ಉಪ್ಪಿಟ್ಟು ಮಾಡು." ಎಂದು ತನ್ನ ಹೆಂಡತಿಗೆ ಆಜ್ಞೆ ಮಾಡಿದ. ಬಳಿಕ ತನ್ನ ಆಳಿಯನನ್ನು ಕರೆದ. ಗುರುಲಿಂಗ ಹೊರಗೆ ಆಟ ವಾಡುತ್ತಿದ್ದ. ಆಟ ಅಲ್ಲಿಗೇ ಕೈಬಿಟ್ಟು, "ಏನು ಭಾವ ಕರೆದಿಯಾ" ಎಂತಲೇ ಓಡಿ ಬಂದ.

"ಆ ಶಶಿ ಮನೆಗೆ ಹೋಗಿ ಆಕಿನ್ನ ಕರೆದುಕೊಂಡು ಬರ್ತೀಯಾ? ಹೋಗು ಹಾಗಾದರೆ ಬೇಗ" ಎಂದ. ಹಾಲಮ್ಮ ಎದುರಿಗೇ ಇದ್ದಳು. ಈ ಮಾತು ಕೇಳಿ ಆಕೆಗೆ ಕಾದ ಕಬ್ಬಿಣವನ್ನು ಗಾಯದಮೇಲೆ ಬರೆ ಎಳೆದಂತಾಯಿತು.

"ಏನ್ರಿ, ಮನೆತನಸ್ಥರು ಮಾಡೋ ಕೆಲಸಾನೆ ಇದು!"

"ನಾನು ಗಂಡಸು. ಬೇಕಾದ್ದು ಮಾಡುತ್ತೇನೆ. ನನ್ನ ಕೇಳ್ತಾರ್‍ಯಾರು. ಕಾಫಿ ಕೊಟ್ಟು ಅವೊತ್ತಿನ ಹಾಗೆ ಅಟ್ಟ ಸೇರು" ಎಂದ ಬಿರುಸಾಗಿ. ಹೆಂಡತಿ ಉಪ್ಪಿಟ್ಟು–ಕಾಫಿ ತಂದುಕೊಟ್ಟಳು. ಗುರುಲಿಂಗ ಓಡಿಬಂದು, "ಈಗ ಬರುತ್ತಾಳಂತೆ .ಎಂದು ತೇಕುತ್ತ ಹೇಳಿದ.

"ಓs ..."

ಗುರುಲಿಂಗ ಕಾಫಿ ಕುಡಿದು, ಶಾಲೆಗೆ ಹೋಗಬೇಕಾಯಿತು. ಹಾಲಮ್ಮನೂ ಕಾಫಿ ಕುಡಿದು ಅಟ್ಟ ಸೇರಿದಳು. ಆ ವೇಳೆಗೆ ಬಸವ ರಾಜನ ಹೃದಯದ ರಾಣಿಯೂ ಬಂದಳು. ಬಸವರಾಜ ಅಂಗಿಯ ಕಾಲರ್ ಸರಿಮಾಡಿಕೊಳ್ಳುತ್ತಾ "ಬಾ ಶಶಿಪ್ರೇಮಾ, ನಿಮ್ಮನೆ ಕಡೆ ಬರುವುದಾಗಲಿಲ್ಲ." ಶಶಿಕಲೆ ಅವನ ಮಾತನ್ನು ಹಾರಿಸಲು "ಮೈಯಲ್ಲಿ ಚೆನ್ನಾಗಿಲ್ಲಾಂತ ಕೇಳಿದ್ದೆ" ಎಂದಳು.

"ಹೌದು ಪ್ರೇಮಾ, ಇವತ್ತು ಬೆಳಗಿನಿಂದ ನಮ್ ಆಗಿ ಬಿಟ್ಟಿರುವೆ"

"ಯಾಕೆಂತ ಅನ್ನಬೇಕು."

"ಯಾಕೋ ಒಂದು ವಿಧವಾದ ಉರಿ, ಮುರಿತ ಬಂದಿತ್ತು. ಟಾಂಗ ಮಾಡಿಸಿಕೊಂಡು ಚಂಪಕಧಾಮರ ಮನೆಗೆ ಹೋದೆ. ಅವರು ಔಷಧ ಕೊಟ್ಟರು. ಸ್ವಲ್ಪ ಉತ್ತಮ, ನೋಡು."

"ಈಗ ವಾಸಿತಾನೆ?"

"ಹೂ. ಶಶೀ ಭೂತಣ್ಣ ಹೊಳೆಯಲ್ಲಿ ಹೋದನಲ್ಲೇ! ಅಯ್ಯೋ.... ಅನ್ಯಾಯವೆ ..."

"ಅವರು ನನ್ನ ಕಂಡರೆ ಜೀವ ಬಿಡುತ್ತಿದ್ದರು ಕಣ್ರಿ. ಬಹಳ ಒಳ್ಳೆಯ ಮನುಷ್ಯ ಇದ್ದರು."

"ಹೌದು. ಅದೃಷ್ಟ ಸರಿಯಾಗಿದ್ದಿಲ್ಲಾಂತ ಕಾಣುತ್ತದೆ."

"ನಿಮ್ಮ ಉರಿಗೆ ಸರಿಯಾದ ಔಷಧ ತೆಗೆದುಕೊಳ್ಳಿ. ಅದೇನೆಂತ ನೋಡಿಸಿ ಗುಣ ಮಾಡಿಕೊಳ್ಳಿ. ಬಿಲ್ ಎಷ್ಟು ಕೊಟ್ಟರಿ ಬೆಳಗ್ಗೆ?"

"ಇನ್ನೂ ಕೊಟ್ಟಿಲ್ಲ. ಗುರುಲಿಂಗನ ಕೈಲಿ ಕಳಿಸಿ ಕೊಡಬೇಕು" ಎಂದು ಒಂದು ಚಣ ಹೊತ್ತು ಬಸವರಾಜ ಸುಮ್ಮನಿದ್ದು "ಶಶಿ, ನಿನ್ನ ನೋಡದೇ ಬಹಳ ದಿವಸವಾಗಿತ್ತು. ಬಾ ಹತ್ತಿರ ಕುಳಿತುಕೋ, ಬಾರೆ; ಹೊಸದಾಗಿ ಬಂದ ಹೆಂಡತಿ ಮಾಡಿದಹಾಗೆ ಯಾಕೆ ಮಾಡುತ್ತೀಯೆ?" ಎಂದ.

"ಹೋಗ್ರೀS ..." ಎಂದು ಮುದುರಿಕೊಂಡು ಕುಳಿತಳು ಶಶಿಕಲೆ.

"ಶಶೀ ಈಗೊಂದು ಕೆಲಸ ಆಗಿದೆ. ತಡೆ ಕಾಫಿಗೆ ಹೇಳಿ ಬರ್ತೇನೆ" ಎಂದು ಹೊರಕ್ಕೆ ಹೋಗಿ ಕಾಫಿ—ತಿಂಡಿಗೆ ಹೇಳಿ ಬಂದ.

"ಏನು ಕೆಲಸಾಗಿದೇಂದ್ರಿ?"

"ಯಾರೆದುರಿಗೂ ಹೇಳುವದಿಲ್ಲವೆಂದರೆ ಮಾತ್ರ ಹೇಳುವೆ. ಗುಟ್ಟಾದ ವಿಷಯ ಅದಕ್ಕೆ ಹೇಳೋದು."

"ಹೇಳಿ. ಮಂದಿಯೆದುರಿಗೆ ಹೇಳಿದಹಾಗೆ ಮಾಡುತ್ತೀರಲ್ಲ" ಎಂದು ಆಕೆ ತನ್ನ ತಲೆಯಲ್ಲಿನ ಮಲ್ಲಿಗೆ ಹೂವಿನ ದಂಡೆಯನ್ನು ಮುಟ್ಟಿ ಕೊಳ್ಳುತ್ತಾ ಹೇಳಿದಳು.

"ಶಶೀ, ನಿನ್ನ ಯಾವಾಗಲೂ ನೋಡುತ್ತ ಕುಳ್ಳಿರಬೇಕೆಂದೆನ್ನಿಸುತ್ತೆ."

"ಇದೇ ಏನು, ನಿಮ್ಮ ಗುಟ್ಟಾದ ಮಾತು. ನಾನು ನಿಮ್ಮನ್ನು

ಯಾವಾಗಲೂ ದೃಷ್ಟಿ ಬರುವಂತೆ ನೋಡುತ್ತ ಕುಳಿತುಕೊಳ್ಳಬೇಕೆಂದೆನ್ನಿಸುತ್ತದೆ" ಎಂದು ಆಕೆ ಮಾರುತ್ತರ ಕೊಟ್ಟಳು.

"ಹೋಗಲಿ ಆ ಮಾತು. ಒಂದು ಗುಟ್ಟಿನ ವಿಷಯವಿದೆ."

"ಏನು ಹೇಳ್ರಿ?" ಎಂದಳು ಕೊಂಚ ಏಗಿದ ಧ್ವನಿಯಲ್ಲಿ.

''ಏನೂ ಇಲ್ಲ, ಒಂದು ಕೆಲಸಾಗಿದೆ.''

''ಹೇಳ್ರಿ ಅಂದರೆ, ಯಾಕೆ ಹಿಂದು ಮುಂದೆ ನೋಡುವುದು''

''ನಾನು ಆದಿನ ನಿನ್ನ ಬಳಿಯಿಂದ ಕೂದಲು ಮತ್ತು ಉಗರು ಯಾಕೆ ತರಿಸಿದ್ದೆ ಎಂದು ಗೊತ್ತೆ?''

''ಹೂ. ಗುರುಮೂರ್ತಿಗೆ ಮಾಟ ಮಾಡಿಸುವುದಕ್ಕೆ.''

''ಯಾರು ಹೇಳಿದರು?''

''ನನ್ನ ಹತ್ತಿರ ಒಂದು ಕೆಲಸಕ್ಕೆ ಎಂತ ಭೂತಪ್ಪ ಬಂದಿದ್ದ. ಆಗ ಎಲ್ಲಾ ಹೇಳಿದ''

"ಅವನ್ನೆಲ್ಲಾ ತರಿಸಿ, ಮಾಟ ಮಾಡಲಿಕ್ಕೆ ನಾನು ಹೇಳಿದ್ದೆನಲ್ಲ."

"ಹೂ, ಹೌದು ಮಾಡಿಸಿದಿರಿ. ಗುರುಮೂರ್ತಿಗೂ ಈಗ ಜ್ವರ ಸುರುವಾಗಿದೆ."

"ಸುರುವಾಗಿದೆ, ಇರಲಿ. ಅವನ ಜತೆಗೆ ನನಗೂ ಕೂಡ ಈ ಉರಿ ಸುರುವಾಗಿದೆಯಲ್ಲ"

"ಅದಕ್ಕೂ ಇದಕ್ಕೂ ಏನು ಸಂಬಂಧ ಹೋಗರಿ."

"ಹಾಗಲ್ಲ ಸ್ವಲ್ಪ ಕೇಳಿ. ಅವೊತ್ತು ರಾತ್ರಿ ಅವನು ಗುರುಮೂರ್ತಿಗೆ ಮಾಟ ಮಾಡೋದಿನ ನಾನೂ ಹೋಗಿದ್ದೆ. ನನ್ನ ಕೈಯಿಂದಲೂ ಏನೇನೊ ಪೂಜೆ ಮಾಡಿಸಿದ. ಆ ಮೇಲೆ ತಾಯಿತ ಕೊಟ್ಟು, ಇದು ರಕ್ಷಾಯಂತ್ರ ಎಂತ ಹೆಸರು. ಇದನ್ನು ನಿನ್ನ ದೇಹದ ರಕ್ಷೆಗಾಗಿ ಕಟ್ಟಿಕೋಬೇಕು. ಇಲ್ಲದಿದ್ದರೆ ಮಾಡಿಸಿದ್ದು ನಮಗೇ ತಿರುಗಿ ಬಿಡುತ್ತೆ- ಎಂದು ಹೇಳಿ ನೆಲದಮೇಲೆ ವೀಳಿಯದೆಲೆಯಲ್ಲಿಟ್ಟ. ನಾನು ಅವಸರದ ಮನುಷ್ಯ, ಕೇಳಬೇಕೆ? ಆ ತಾಯಿತ ಅಲ್ಲೇ ಬಿಟ್ಟು ಬಂದೆ. ಅದರಿಂದಲೇ ನನಗೆ ಇಂತಾಗಿದೆ"

"ಇದ್ದರೂ ಇರಬಹುದು. 'ರಕ್ಷಾಯಂತ್ರ' ಅಂದರೆ ಅದು ನಮ್ಮನ್ನು ಕಾಪಾಡುತ್ತದೆ. ನೀವು ಯಾಕೆ ಬಿಟ್ಟು ಬಂದಿದ್ದೀರೀಂತ"

'ಈಗೇನು ಮಾಡಬೇಕೆ ಹಾಗಾದರೆ?"

"ಅದು ಡಾಕ್ಟರಿಂದ ಗುಣ ಆಗೋದಿಲ್ಲೇನು?"

"ಅದೆಂತು ಹೇಳಲಿ? ತತ್ಕಾಲಕ್ಕೆ ಗುಣ ಬಂದಿದೆ."

"ಈಗೊಂದು ಕೆಲಸಮಾಡಿರಿ"

"ಏನು ...ಏನು ಮಾಡಬೇಕು ?"

"ಇನ್ನೊಬ್ಬನು ಇದಾನೆ ಸಣ್ಣದುರುಗಪ್ಪ ಎಂತ. ಅವನ ಹತ್ತಿರ ಬೇಕಾದರೆ ಹೋಗುನ" ಎಂದು ಹೇಳಿ ಲೋಟದ ಕಡೆಗೆ ನೋಡುತ್ತ "ಮೊದಲು ಕಾಫಿ ಕುಡಿಯಿರಿ. ಸಣ್ಣದುರುಗಪ್ಪನಪ್ಪ ನಮಗೆ ಸಂಬಂಧಿಕ" ಎಂದಳು.

"ನಾನು ಅವನ ಹೆಸರು ಇದೇ ಮೊದಲು ಬಾರಿ ಕೇಳುತ್ತಿರುವುದು"

"ಹಳ್ಳದ ಕೇರೀ ಮೂಲಿಯೊಳಗೆ ಇದೆ ಅವರ ಮನೆ. ಅಂದರೆ ಅವನು ಇದೇ ಕಸಬಿನವನಲ್ಲ. ಅದಕ್ಕೆ ಪ್ರಚಾರ ಇಲ್ಲ, ಅಷ್ಟೆ."

"ಹೋಗೋಣೇನು ?"

"ನಡೆಯಿರಿ ಮತ್ತೆ" ಎಂದು ಎದ್ದಳು. ಇಬ್ಬರೂ ಸಣ್ಣದುರಗಪ್ಪನ ಮನೆಗೆ ಹೋದರು. ಅವನು ಯಂತ್ರ ಬರೆಯುತ್ತ ಕುಳಿತಿದ್ದ.

"ಬರ್ರಿ ಈಕಡೆ ಬರ್ರಿ" ಎಂದು ಅವನು ಚಾಪೆ ಬಿಚ್ಚಿ ಕೂಡಲು ಹೇಳಿದ.

"ನಿನ್ನ ಕಡೆಗೆ ಬಂದಿದ್ದೆವು ಸಣ್ಣದುರುಗಪ್ಪ" ಎಂದ ಬಸವರಾಜ.

"ನನ್ನ ಹತ್ತಿರ ! ಏನು ಕೆಲಸಿತ್ತು. ಕೈಲಾದರೆ ಮಾಡಿ ಕೊಡುವೆ ಹೇಳಿ"

"ಗುಟ್ಟಾದ ವಿಷಯ ದುರುಗಣ್ಣ" ಎಂದಳು ಶಶಿಕಲಾ.

"ನಮ್ಮ ಹತ್ತಿರ ಬರುವ ಗಿರಾಕಿಗಳೆಲ್ಲ ಗುಟ್ಟಿನವೆ. ಹೇಳಿ ಅದೇನು? ಇಲ್ಲಿ ಯಾರೂ ಇಲ್ಲ."

"ನಮ್ಮ ಕಕ್ಕನ ಮಗ ಗುರುಮೂರ್ತಿಯಂತ ಅದಾನೆ. ಅವನಿಗೆ ಭೂತಣ್ಣನಿಂದ ಮಾಟ ಮಾಡಿಸಿತ್ತು. ಅವನು ಮಾಟಮಾಡಿ ಕೊಡುವಾಗ ಒಂದು ರಕ್ಷಾಯಂತ್ರ ಅಂತ ಕೊಟ್ಟ. ಆದರೆ ಅದನ್ನು ಅಂದು ಅಲ್ಲೇ ಮರೆತು ಬಂದು ಬಿಟ್ಟೆ."

"ನಿನಗೇ ತಿರುಗಿತೇನದು!...."

"ಹೂನಪ್ಪ, ಏನು ಮಾಡಲಿ" ಎಂದ ಬಸವರಾಜ ದೈನ್ಯದ ಧ್ವನಿಯಲ್ಲಿ.

"ಭೂತಣ್ಣ ಸತ್ತನಲ್ಲ. ಅವನು ಯಾವ ಮಂತ್ರದಿಂದ ಮಾಡಿದಾನೋ ಏನೋ. ದೊಡ್ಡವರ ವಿಚಾರ ನಮಗೆ ಹೇಗೆ ಗೊತ್ತಾದೀತು."

"ನೀನು ಇಳಿಸುವುದಕ್ಕೆ ಬರಲ್ಲವೆ?" ಎಂದಳು ಶಶಿಕಲೆ.

"ಉಹೂ, ಬರುವುದಿಲ್ಲ. ನಾನು ಯಾರಿಗಾದರೂ ಮಾಡಬಲ್ಲನೇ ಹೊರತು, ಇಳಿಸಲಾರೆ."

"—ಹಾಗಾದರೆ ಹೇಗೆ ದುರುಗಣ್ಣ. ಈಗ ಹೇಗಾದರೂ ಮಾಡಿ ಮಾಡಲೇಬೇಕು"

"ನನ್ನ ಶಕ್ತಿಯಿದ್ದಷ್ಟು ಮಾಡಬಲ್ಲೆ. ಕೈಮೀರಿ ಮಾಡೆಂದರೆ ಏನುಮಾಡಲಿ? ನಿನ್ನ ಗ್ರಹಚಾರ ಕಾಡುತ್ತಿದೆ. ಭೂತಣ್ಣ ತೀರಿಹೋಗಬೇಕೇ!—"

"ಭೂತ್ತಣ್ಣನ ಹತ್ತಿರ ದುರಗಪ್ಪಣ್ಣ ಈ ಮಾಟ ತಂತ್ರ ಕಲಿತದ್ದು" ಎಂದಳು ಶಶಿಕಲೆ. ಸಣ್ಣದುರುಗಪ್ಪ ಸಸ್ಮಿತವದನದಿಂದ

"ಹೌದು; ಇಲ್ಲದಿದ್ದರೆ ಈ ವಿದ್ಯೆ ನನಗೆಲ್ಲಿ ಬಂದೀತು. ಅವನೇ ನನ್ನ ಗುರು. ಭೂತಣ್ಣನಂಗೆ ಸುತ್ತಮುತ್ತಲೂ ಯಾರೂ ಇದ್ದಿಲ್ಲ."

"ಮುಂದೂ ಹುಟ್ಟುತ್ತಾರೋ ಇಲ್ಲವೊ" ಬಸವರಾಜ ಹೇಳಿದ.

"ಹುಟ್ಟುವುದಿಲ್ಲ. ಅದನ್ನು ಅಭ್ಯಾಸಮಾಡಲು ಆ ಜೀವ ತುಂಬ ಕಷ್ಟಪಟ್ಟಿತ್ತು."

"ಈಗೇನೆಂದೆ, ದುರುಗಣ್ಣ?" ಎಂದಳು ಶಶಿಕಲೆ.

"ನೋಡೋಣ, ಆ ದೇವರ ಮೇಲೆ ಭಾರಹಾಕಿ ಒಂದು ಯಂತ್ರ ಬರೆದು ಕೊಡುತ್ತೇನೆ. ಗುಣವಾದರೂ ಆಗಬಹುದು" ಎಂದು ಹೇಳಿ ದುರುಗಣ್ಣ ಚೌಡಾಂಬೆಯ ಬಳಿ ಹೋಗಿ ಒಂದು ಯಂತ್ರ ಬರೆದು ತಂದ.

"ಎಷ್ಟು ಕೊಡಬೇಕು?" ಎಂದ ಬಸವರಾಜ.

"ಐದೂಕಾಲು ರೂಪಾಯಿ ಕೊಡಿ, ಸ್ವಾಮಿ."

ಬಸವರಾಜ ಜೇಬಿನಿಂದ ಐದು ರೂಪಾಯಿನ ನೋಟೊಂದನ್ನು ತೆಗೆದುಕೊಟ್ಟು "ಗುಣವಾಗಬಹುದೇ ಸಣ್ಣದುರುಗಪ್ಪ ?" ಎಂದ.

"ಏನೋ ಆ ಚೌಡಾಂಬೆ ಕಾಪಾಡುತ್ತಾಳೆ, ಹೆದರಬೇಡಿ. ದೇವರಿ

ದಾನೆ ಕಾಪಾಡುತಾನೆ. ಅಂದ ಹಾಗೆ ಗುರುಮೂರ್ತಿಗೆ ಹೇಗಿದೆ?"

ಬಸವರಾಜ ನಗುತ್ತಾ ಹೇಳಿದ: "ಹಹಹ....ಅವನು ತೀರಿಹೋದಂತೆಯೆ. ದಿನದಿನಕ್ಕೂ ತೆಳ್ಳಗೆ ಆಗ್ತಾ ಇದ್ದಾನೆ."

"ಕಡ್ಡಿ ಆದಂತಾಗಿದಾನೆ" ಎಂದಳು ಶಶಿಕಲೆ.

"ನೀನೊಂದು ಉತ್ತಮವಾಗಬೇಕು. ದೇವರು ಕಾಪಾಡುತ್ತಾನೆ. ಆ ತಾಯಿತವನ್ನು ಮನೆಗೆ ಹೋಗಿ ಪೂಜಿಸಿ ಕಟ್ಟಿಕೊ."

"ನಾವಿನ್ನು ಬರುತ್ತೇವೆ, ದುರುಗಪ್ಪಣ್ಣ" ಎಂದ ಬಸವರಾಜ.

"ಹೂ, ಅಷ್ಟು ಮಾಡಿರಿ. ಹೋಗುತ್ತೀರಾ ಇನ್ನು" ಎಂದು ಸಣ್ಣ ದುರುಗಪ್ಪ ಅವರನ್ನು ಬೀಳ್ಕೊಟ್ಟು, ಬಂದ. ಶಶಿಕಲೆ-ಬಸವರಾಜ ಮನೆಗೆ ಬರುವ ಹೊತ್ತಿಗೆ ಆರು ಗಂಟೆಯಾಗಿತ್ತು. ಹಾಲಮ್ಮ ಅಡುಗೆಮನೆಗೆ ಓಡಿಹೋದಳು. ಪುನಃ ಇಬ್ಬರೂ ಆಸನಾರೂಢರಾದರು. ಬಸವರಾಜ ಗುರುಲಿಂಗನನ್ನು ಕರೆದು, "ಡಾಕ್ಟರ ಚಂಪಕಧಾಮರ ಮನೆಗೆ ಹೋಗಿ ನಲವತ್ತು ರೂಪಾಯಿ ಕೊಟ್ಟು ನಮ್ಮ ಭಾವನಿಗೆ ವಾಸಿಯಾಗಿದೆಯೆಂತಲೂ, ನಾಳೆ ಬಂದು ಕಾಣುತ್ತಾನೆಂದೂ ಹೇಳಿ ಬಾ" ಎಂದ. ಗುರುಲಿಂಗ ಹೋದ.

"ನಮ್ಮಿಬ್ಬರಿಗೂ ಎರಡು ಕಪ್ಪು ಚಹ ಮಾಡೆ" ಎಂದ ಬಸವರಾಜ ಹಾಲಮ್ಮನಿಗೆ. ಗಂಡನ ಆಜ್ಞಾಪರಿಪಾಲನೆ ಮಾಡದಿದ್ದರೆ ಶಿಕ್ಷೆ ಖಂಡಿತ ಎಂಬುದು ಆಕೆಗೆ ಗೊತ್ತಿತ್ತು. ಮರುಮಾತಾಡದೆ ಹಾಲಮ್ಮ ಅವರಿಗೆ ಚಹಮಾಡಿ ತಂದಿಟ್ಟಳು. ಶಶಿಕಲೆ ಚಹ ಗುಟಕರಿಸಿ ನೋಡಿದಳು. ಪುಡಿ ಕಡಮೆಯಾಗಿತ್ತು. ಅದೂ ಬೆಲ್ಲದ ಚಹ! ತಲೆಕೊಡವಿ, "ಛೆ! ನನ್ನಿಂದ ಇಂತಹ ಚಹ ಕುಡಿಯೋದಾಗೋದಿಲ್ಲ" ಎಂದಳು.

"ಥೂತ್! ಈ ರೋಗಿ ಮುಂಡೇದಕ್ಕೆ ಒಂದು ಚಹ ಸರಿಯಾಗಿ ಮಾಡಬರುವುದಿಲ್ಲ" ಎಂದು ಬಸವರಾಜ ಮುಖ ಕಿವಿಚಿಕೊಂಡ.

"ಆಕೆಗೇಕೆ ಬೈಯುತ್ತೀರಿ. ಸುಮ್ಮನಿರಬಾರದೆ .."

"ಅಲ್ಲೆ! ಒಂದು ಚಹ ಮಾಡಲಿಕ್ಕೆ ಬರೋದಿಲ್ಲಾಂದರೆ ಏನು? ಹೋಗಲಿಬಿಡು ಹೊತ್ತಾಯಿತು. ನಾನು ಕ್ಲಬ್ಬಿಗೆ ಹೋಗಬೇಕು. ಆಗಾಗ ಬರುತ್ತಿರು. ಆದರೆ ಇದನ್ನು ಚಕ್ರಪಾಣಿಗೆ ತಿಳಿಸುವ ಗೊಡವೆಗೆ ಹೋಗದಿರು. ಎಲ್ಲಿಯಾದರೂ ಗುಟ್ಟು ರಟ್ಟಾದರೆ ತಲೆಗೆ ತಲೆ ಹೋಗುವ

ಮಾತು.''

"ಛೆ! ಎಂಥ ಮಾತು ಉಂಡ ಮನೆಗೆ ಜಂತಿ ಎಣಿಸೋದೆ. ನೀವು ನಿಮ್ಮ ಹೆಂಡತಿಯಂತೆ ನಡೆಸಿಕೊಂಡು ಬಂದಿರುವಿರಿ. ಸಾವತನಕ ಇದು ಸ್ಮರಣೆಯಲ್ಲಿರತಕ್ಕದ್ದು.''

''ನಿನ್ನನ್ನು ನಮ್ಮ ಹಾಲಿಗಿಂತ ಹೆಚ್ಚಿಗೆ ಪ್ರೇಮದಿಂದ ನೋಡಿ ಕೊಳ್ಳುತ್ತ ಇದ್ದೇನೆ'' ಎಂದ.

''ನಾನು ಹೋಗ್ತೇನೆ ಬಸವರಾಜ್. ಗುಡ್ ಈವಿನಿಂಗ್''

''ಗುಡ್ ಈವಿನಿಂಗ್. ಶಶೀ, ಇಲ್ಲಿ ನೋಡೆ ಹೊಟ್ಟೆಮುಟ್ಟಿ, ಏನೋ ವಿದ್ಯುಚ್ಛಕ್ತಿಯ ಹಾಗೆ ಹರಿಯುತ್ತಿದೆಯಲ್ಲ'' ಎಂದ. ಅವನ ಮುಖ ಕರಾಳವಾಗಿ ಪರಿಣಮಿಸಿತ್ತು.

"ಅದೇನು ಮಾಡುತ್ತೆ. ಮರೆಯುದ ಹಾಗೆ ಆ ತಾಯಿತ ಪೂಜೆ ಮಾಡಿ ಕಟ್ಟಿಕೊಳ್ಳಿ" ಎಂದು ತಿರುಗಿನೋಡದೆ ಹೊರಟುಹೋದಳು. ಬಸವರಾಜ ತನಗೆ ತಿಳಿಯದ ಆ ಉರಿಯ ಬಗ್ಗೆ ಯೋಚಿಸುತ್ತಾ ಕುಳಿತ. ಮತ್ತೆ ಉರಿತ ಏಳುವ ಸೂಚನೆ ತೋರುತ್ತಿತ್ತು. ದೇಹದ ಶಕ್ತಿಯೆಲ್ಲಾ ಪಾದರಸದೋಪಾದಿಯಲ್ಲಿ ಎಲ್ಲಿಗೋ ಹರಿದು ಹೋದಂತೆ ಭಾಸವಾಗಿತ್ತು. ಸಣ್ಣದುರುಗಪ್ಪ ಕೊಟ್ಟಿದ್ದ ಯಂತ್ರದ ನೆನವಾಗಿ ಅದನ್ನು ಪೂಜಿಸಿ ಉಡು ದಾರದಲ್ಲಿ ಕಟ್ಟಿಕೊಂಡ. ಅದರ ಪ್ರಭಾವ ಏನಾಗುತ್ತೋ ಎಂದು ನೋಡುತ್ತ ಕಾದು ಕುಳಿತ.

## ೨೪

ಚಂಪಕಧಾಮರು ತಮ್ಮ ಔಷಧಾಲಯದಲ್ಲಿ ಬಸವರಾಜನ ಕಾಣದ ಉರಿಯ ಬಗ್ಗೆ ಕುರಿತಾಗಿ ಯೋಚಿಸುದ್ದರು. ಅದೇ ತಾನೆ ಬಸವ ರಾಜನ ಅಳಿಯ ಗುರುಲಿಂಗ ಹಣಕೊಟ್ಟು ಹೋಗಿದ್ದ.

ಕೊಟ್ಟ ಔಷಧಿ ಕೆಲಸ ಮಾಡಿದೆ. ರೋಗ ನಿದಾನವು ತಿಳಿಯ ದಿದ್ದರೂ ಆ ಉರಿತಕ್ಕೆ ಬಲವಾದ ಔಷಧಿಯನ್ನು ಕೊಟ್ಟು ಕಳುಹಿಸಿದ್ದಾ ಯಿತು. ಒಂದು ಕ್ಷಣದಲ್ಲಿಯೇ ನಲವತ್ತು ರೂಪಾಯಿಗಳು! ಬಹಳ ಒಳ್ಳೆಯ ಮನುಷ್ಯ! ನನುಗುನ್ನಿ ಕಾಯಿಯೇನಾದರೂ ತಗುಲಿ ಆ ಕಡಿತ ಮತ್ತು ಆ ಉರಿತಕ್ಕೆ ಕಾರಣವಾಗಿರಲಿಕ್ಕಿಲ್ಲ ಎಂದು ಹುಸಿ ನಗುವೊಂದನು ನಕ್ಕರು. ಏನೇ ಆಗಿರಲಿ, ಔಷಧ ಪರಿಣಾಮ ಮಾಡಿತು. ನನ್ನನುಭವದಲ್ಲಿ ಇಂತಹ ರೋಗಿಯನ್ನು ಕಂಡಿರಲಿಲ್ಲ. ಇಂದು 'ಡೈರಿ' ಯಲ್ಲಿ ಈ ಘಟನೆಯನ್ನು ಸವಿಸ್ತಾರವಾಗಿ ಬರೆಯಬೇಕು. ಆ ಒಂದು ಉರಿತವನ್ನು ಗುಣಮುಖ ಮಾಡದೆ ಹೋಗಿದ್ದರೆ ಎಂತಹ ಅವಮಾನ ವಾಗುತ್ತಿತ್ತು. ದೇವರೇ ಆ ಔಷಧಿಯನ್ನು ಕೊಡಲು ಬುದ್ಧಿ ಕೊಟ್ಟಿರ ಬೇಕು. ದೇವರೇ ನಾನು ನಿನಗೆ ಚಿರ ಕೃತಜ್ಞ—ಎಂದು ಉದ್ಗಾರ ತೆಗೆಯುತ್ತಿದ್ದಾಗ, ಬಸವರಾಜ ಸೈಕಲ್ ಮೇಲಿನಿಂದ ಇಳಿದು, "ಡಾಕ್ಟರ್!....ಮತ್ತೆ ಅದೇ ಉರಿತ ಬಂದಿದೆ. ನೀವು ಆ ದಿನ ಕೊಟ್ಟಿದ್ದ ಪುಡಿಯನ್ನು ಕೊಡಿ. ಅದರಿಂದ ಗುಣವಾಗುತ್ತೆ. ಆ ದ ರೆ ಈ ಬಾರಿ ಬಾರಿ ಮನೆಗೆ ಹೋಗಿ ತೊಗೊಳ್ಳೋದಿಲ್ಲ. ಬಹಳ ಉರಿಯುತ್ತದೆ! ಇಲ್ಲೇ ತೊಗೊಳ್ತೇನೆ. ಈ ಉರಿತಕ್ಕೆ ಏನು ಮಾಡಲಿ!? ಹೊಟ್ಟೆಯ ಎಡಬಲ ಭಾಗಗಳಲ್ಲಿ ಕೆಂಡ ಬಿದ್ದಿರುವ ಹಾಗೆ ಕಾಣ್ತದೆ."

"ಮತ್ತೆಲ್ಲಿಯಾದರೂ ಉರಿ ಅಥವಾ ನೋವು ಕಂಡು ಬರು ತ್ತದೆಯೆ?"

"ಕಿಬ್ಬೆಗಳೂ ಕುತ್ತಿಗೆಯ ಎರಡು ಭಾಗಗಳಲ್ಲಿರುವ ಎಲುಬು ಗಳೂ ನೇದಲಿಕ್ಕೆ ಪ್ರಾರಂಭಿಸಿವೆ ಪರವಾಗಿಲ್ಲ. ಅದೇ ಪುಡಿಯನ್ನು ಇಲ್ಲಿಯೇ ಸವರಿಕೊಂಡು ಸ್ನಾನಮಾಡು, ತದನಂತರ ದೇಹ ಪರೀಕ್ಷೆ ಮಾಡುವೆ. ಗುಳಿಗೆಯನ್ನೂ ತೆಗೆದುಕೊ" ಎನ್ನುತ್ತಾ ಪುಡಿಯನ್ನು ಕೊಟ್ಟು

'ಟಿಂಬ್ಲರ್'ನ್ನು ತಂದು ಕೊಡಲಿಕ್ಕೆ ಜವಾನನಿಗೆ ಆಜ್ಞಾಪಿಸಿದರು.

ಬಸವರಾಜ ಅದನ್ನು ದೇಹಾದ್ಯಂತ ಹಚ್ಚಿಕೊಂಡು ತಣ್ಣೀರಿನಿಂದ ಸ್ನಾನಮಾಡಿದ. ಎಲ್ಲವೂ ಒಂದರೆಕ್ಷಣದಲ್ಲಿ ಮಾಯವಾಯಿತು. ಚಂಪಕ ಧಾಮರು ಕಾಫಿಗೆ ಹೇಳಿ ಅವನ ಮುಂದೆ ಕುಳಿತು ಹೀಗೆಂದರು :

"ನೀವು ಬಹಳ ಕೃಶರಾಗಿ ಹೋಗಿದ್ದೀರಿ!... ನಾನೂ ಕೈಲಾದ ಮಟ್ಟಿಗೆ ಚಿಕಿತ್ಸೆಮಾಡಿ ನೋಡುತ್ತೇನೆ. ಆದರೊಂದು ಮಾತು—ಗಾಬರಿ ಪಟ್ಟುಕೊಳ್ಳಬೇಡಿ ಗಾಬರಿ ಅನೇಕ ಸಮಯ ರೋಗವನ್ನು ದೀರ್ಘಕ್ಕೆ ಕೊಚ್ಚುತ್ತೆ ಎಂದರು. ಆ ಹೊತ್ತಿಗೆ ಸರಿಯಾಗಿ ಕಾಫಿ-ತಿಂಡಿ ಬಂತು. ತಿಂಡಿ ತಂದಿಟ್ಟು ಮಾಣಿ ಹೋದ. ತಿಂಡಿ ತಿಂದಾದಮೇಲೆ ಕಾಫಿ ಕುಡಿ ಯುತ್ತಾ "ನಾನೀಗ 'ಕ್ಷ' ಕಿರಣದ ಸಹಾಯದಿಂದ ನಿಮ್ಮ ದೇಹ ಪರೀ ಕ್ಷಿಸಿ ಉತ್ತರಿಸುವೆ. ನಿಮಗೆ ಒಣಕೆಮ್ಮೇನಾದರೂ ಉಂಟೆ?" ಎಂದರು.

"ಊಹೂ ಇಲ್ಲ ..ಹಾಗೇನೂ ಇಲ್ಲ. "ಕ್ಷ' ಕಿರಣ ಸಹಾಯದಿಂದ ಉತ್ತಮವಾಗಬಹುದೇನ್ರಿ ಡಾಕ್ಟರ್?" ಎಂದು ಕೊಂಚ ನಡುಗುವ ಧ್ವನಿಯಲ್ಲಿ ಬಸವರಾಜ ಕೇಳಿದ.

"ನುರಿತ ಡಾಕ್ಟರ್ ಇರುವಾಗ ನಿನಗೇತರ ಆಶ್ಚರ್ಯ?!" ಎಂಬು ದಾಗಿ ಕಣ್ಣರಳಿಸುತ್ತಾ, ಈ ಸ್ಥಾನದಲ್ಲಿಯೇ ಗುಣಮಾಡಬಿಡಬಹುದೆಂಬ ಹುಂಬನ್ನಿಟ್ಟುಕೊಂಡು ವೈದ್ಯರು ನುಡಿದರು.

'ಕ್ಷ' ಕಿರಣವನ್ನು ಪ್ರಯೋಗಮಾಡಿ ಪರೀಕ್ಷಿಸಿದ್ದಾಯಿತು. ಕ್ಷಯದ ಮೂಲ ಚಿಹ್ನೆಗಳೇನಾದರೂ ತೋರಬಹುದೆಂಬ ಶಂಕೆಯಿಂದ ಅವರು ಮುಂಜಾಗ್ರತೆ ವಹಿಸಿದ್ದರು ತಮ್ಮ ಮನೆಯವರಿಗೆ ಹೇಗೆ ಗುರುತರವಾಗಿ ಚಿಕಿತ್ಸೆಮಾಡುವರೂ ಹಾಗೇ ಅವನನ್ನೂ ಪರೀಕ್ಷಿಸಿದ್ದಾ ಯಿತು. ಆ ಪರೀಕ್ಷೆಯ ನಂತರ ಅವರು "ನೋಡಿ ಬಸವರಾಜ್! ರೋಗದ ಯಾವ ಚಿಹ್ನೆಯೂ ಇಲ್ಲ. ಇನ್ನೊಂದುಬಾರಿ ಇಂತಹ ಉಂತ ಬರುವುದಿಲ್ಲವೆಂದು ನಂಬುವೆ. ಹಸಿವೆ ಸರಿಯಾಗಿ ಆಗುತ್ತೆಯೆ?"

"ಹೂ ಹಸಿವೆ ಸರಿಯಾಗಿ ಆಗುತ್ತದೆ."

"ಇನ್ನೊಮ್ಮೆ ಬರುವುದಿಲ್ಲ. ನೀನಿನ್ನು ಹೋಗಬಹುದು. ಗಾಬರಿ ಪಟ್ಟುಕೊಳ್ಳಬೇಡ. ಆದರೂ ನನ್ನನುಭವದಲ್ಲಿ ಇದೊಂದು ಹೊಸ ತರ ಹೆಯ 'ಕೇಸ್'. ಈದಿನ ನಿನ್ನ ಸಲುವಾಗಿ ಕೆಲವು ಪುಸ್ತಕಗಳನ್ನು ನೋಡಿ

ತಿಳಿದುಕೊಳ್ಳುತ್ತೇನೆ. ಆದರಲ್ಲಿಯೇನಾದರೂ ಹೆಚ್ಚಿಗೆ ಹೇಳಿದ್ದರೆ ಇನ್ನೂ ಉತ್ತಮವೆ!"

"ನಮಸ್ಕಾರಾ ಡಾಕ್ಟರ್! ನಾನಿನ್ನು ಬರುತ್ತೇನೆ. ಈ ರೋಗವನ್ನು ನಿವಾರಣೆ ಮಾಡುವುದು ನಿಮ್ಮ ಕೈಯಲ್ಲಿದೆ" ಎಂದು ದೈನ್ಯಸ್ವರದಲ್ಲಿ ಹೇಳಿದ. ಆ ದೈನ್ಯದಲ್ಲಿ ಭಿಕ್ಷುಕನ ಯಾಚನೆಯಿತ್ತು. ದೀನದಲಿತರ ಅಂತರ್ವಾಣಿ ಸಮಾವೇಶಗೊಂಡಂತೆ ಭಾಸವಾಗುತ್ತಿತ್ತು.

ಆ ಬಳಿಕ ಬಸವರಾಜ ಮನೆಕಡೆ ದೀರ್ಘವಾದ ಯಾತನೆಯಿಂದ ಹೊರಟ. ಈಗ ಅವನಿಗೆ ಪ್ರಪಂಚವೇ ಶೂನ್ಯವಾಗಿತ್ತು. ಅರ್ಥವಿಲ್ಲದ ಬಾಳಾಗಿತ್ತು. ವಿಹ್ವಲನಾಗಿ ದಿಕ್ಕುಗೆಟ್ಟು ಹೊರಟಿದ್ದ. ಅವನಿಗೊಂದೂ ತೋಚದೆ ಕಿಂಕರ್ತವ್ಯವಿಮೂಢನಾಗಿದ್ದ. ಮನೆಯ ಜಾಡನ್ನು ಬಿಟ್ಟು ತನ್ನ ಇದಿಯಾದ ನಾಪ ಜೀವನವನ್ನು ನೆನೆಯುತ್ತಾ ಊರ ಮುಂದಿನ ಹಾಳುಬಾವಿಗೆ ಬಂದ. ಅದರಲ್ಲಿ ಇಣಿಕಿಹಾಕಿ ನೋಡಿದ. ಅದು ಅಷ್ಟೇನೂ ಆಳವಾಗಿರಲಿಲ್ಲ. ಅರ್ಧಘಂಟೆ ಚಿತ್ರದಂತೆ ಯೋಚಿಸುತ್ತಾ ನಿಂತಿದ್ದು, ಧೈರ್ಯದಿಂದ ನೀರಿನಲ್ಲಿಳಿದು ಮುಳುಗಿದ. ಆ ಕಾರ್ಗತ್ತಲು, ತತ್ತರಗುಟ್ಟುವ ನೀರವತೆ, ನಾನಾವಿಧ ಪಕ್ಷಿಗಳ ಕೂಗು ಇವನನ್ನು ಎಚ್ಚರಗೊಳಿಸಿದ್ದವು. ನೀರಿನಲ್ಲಿ ಅನತಿ ಸಮಯ ಹುಡುಕಾಡಿದ. ಒಂದು ಕೆಡುತ್ತಿರುವ ಎಳೆತೆಂಗಿನಕಾಯಿ ಸಿಕ್ಕಿತು. ಇದು ತಾನು ಈಹಿಂದೆ ಹಾಕಿದ ಕಾಯಿ ಹೌದೋ? ಅಲ್ಲವೋ? ಎಂದು ಆ ಕತ್ತಲಲ್ಲೇ ನೋಡಿ ಕೈಯಾಡಿ, ಕಳ್ಳನಂತೆ ಬಾವಿಯನ್ನು ಹತ್ತಿಬಂದ.

ಪುನಃ ಈಗ ಅವನು ದಿಕ್ಕುಗೆಟ್ಟ ಕುದುರೆಯಂತೆ ಹೊರಟ. ಮನಸ್ಸಿನಲ್ಲಿನ ನಾನಾವಿಧ ಯೋಚನೆಗಳು ಅವನ ಶರೀರಾದ್ಯಂತ ಹಿಂಡುತ್ತಿದ್ದವು. ಜೀವನದಲ್ಲಿ ಕರ್ತವ್ಯ ಪರಾಙ್ಮುಖನಾದೆನಲ್ಲ, ತಮಾವೃತ್ತನಾದೆನಲ್ಲ—ಎಂಬ ಅವನ ಕಣ್ಣು ತೇವವಾಯಿತು. ಯೋಚಿಸಿ ಯೋಚಿಸುತ್ತಿದ್ದ ಹಾಗೆಯೇ ಸ್ಮಶಾನ ಬಂದೇ ಬಿಟ್ಟಿತು. ಸೊಂಟದಲ್ಲಿದ್ದ ಬಾಕುವನ್ನು ತೆಗೆದು ಎರಡಡಿ ನೆಲ ಅಗಿದು ಗೆಬರಿದನು. ಆ ಮಾಟದ ಎಳೆ ತೆಂಗಿನ ಕಾಯಿಯನ್ನು ಹೂತು, ಕೈಕೊಡವಿ ತುಂಗಭದ್ರಾ ನದಿಯನ್ನು ನೋಡಿದ. ಬಿಳಿಯ ದೊಡ್ಡ ಬಟ್ಟೆಯನ್ನು ಹರಡಿರುವುದೋ ಎಂಬಂತೆ ನದಿ ಕಂಡಿತು. ಅಲ್ಲಲ್ಲಿ ನಕ್ಷತ್ರಗಳು ಕಾಣುತ್ತಿದ್ದವು. ಕೊಳ್ಳಿಯ

ದೆವ್ವಗಳ ಹಾಗೆ ನದಿಯ ಬಳಿ ಬೆಳಕು ಕಾಣಿಸುತ್ತಿತ್ತು. ನರಿಗಳು ಕೂಗುತ್ತಿದ್ದವು. ಇವನ ಜಂಘಾಬಲ ಉಡುಗಿದಂತಾಗಿ ಬೇಗ ಮನೆಗೆ ಹೆಜ್ಜೆ ಹಾಕಿದ. ಹೆಂಡತಿ ಗಂಡನ ಬರವನ್ನು ಕಾಯುತ್ತ ಕುಳಿತಿದ್ದಳು. ಬಸವರಾಜ ಒಳಕ್ಕೆ ಬಂದು ಹೆಂಡತಿಯನ್ನು ಜಡ ದೃಷ್ಟಿಯಲ್ಲಿ ನೋಡಿದ. ಅವಳು ಆಕಳಿಸುತ್ತಾ,

"ಎಲ್ಲಿಗೆ ಹೋಗಿದ್ದಿರಿ ಇಷ್ಟು ಹೊತ್ತು. ಮೈಯಲ್ಲಿ ಚೆನ್ನಾಗಿಲ್ಲವೆ?"

"ಅದೇ ಡಾಕ್ಟರ ಮನೆಗೆ ಹೋಗಿದ್ದೆ."

"ಔಷಧಿ ಕೊಟ್ಟರೆ?"

"ಹೂ, ಕೊಟ್ಟರು. ತತ್ಕಾಲೀನ ಗುಣವೀಯುವ ಔಷಧ ಹಾಲಿ. ಭೂತಣ್ಣ ಇದ್ದಿದ್ದರೆ ಚೆನ್ನಿರುತ್ತಿತ್ತು" ಎಂದು ಕೈಕಾಲು ತೊಳೆದು ಊಟಕ್ಕೆ ಕುಳಿತ. ಊಟ ಮಾಡಿ ಕೈ ತೊಳೆಯುತ್ತಿದ್ದ ಹಾಗೆಯೇ ಹೊಟ್ಟೆ ಸಣ್ಣಗಾಗಿ ಉರಿಯುವುದಕ್ಕೆ ಪ್ರಾರಂಭಿಸಿತು.

"ಅಯ್ಯೋ! ಮತ್ತೆ ಬಂತು. " ಎಂದ.

"ನಾನು ಅದನ್ನ ಹೊಡೆದೊಡೆದು ಸಾಕಾಯ್ತು. ಗುರುಲಿಂಗ ಆ ಕರಿಯ ಬೆಕ್ಕು ಸಾಕಿ...."

"ಧೂತ್! ನಿನ್ನ ಮುಖಕ್ಕೆ ಬೆಂಕಿ ಹಚ್ಚ. ಹೊಟ್ಟೆಯುರಿ ಬಂದಿದ್ದು''

''ಯಾಕಾಗಿ ಇದು ಗಂಟು ಬಿತ್ತೋ! ಬೇಗ ಹೋಗೀಂದ್ರೆ. ..''

ಬಸವರಾಜ ಒಂದು ಚೂರು ಅಡಿಕೆ ಹಾಕಿಕೊಂಡು ಮತ್ತೆ ಹೊರಟ. ಈ ಬಾರಿ ಬೇರೆಯವರ ಹತ್ತಿರ ಚಿಕಿತ್ಸೆ ಮಾಡಿಸಬೇಕೆಂದೆಣಿಸಿದ ಪರಂತು ಚಂಪಕಧಾಮರಂತಹ ನುರಿತ ಅನುಭವಿ ಡಾಕ್ಟರು ಆ ಜಿಲ್ಲೆಯಲ್ಲಿಯೇ ಇರಲಿಲ್ಲ. ಅವನು ಬರುತ್ತಲೆ ಅವನ ಮುಖದ ಮೇಲಿನ ಚೇಷ್ಟೆಗಳನ್ನು ನೋಡಿ, ''ಮತ್ತೆ ಬಂತೇ? ಆ ಸುಡುಗಾಡ ಉರಿತ!'' ಎಂದು ಅವರು ಬಹು ಗಾಬರಿಯಲ್ಲಿ ಹೇಳಿದರು. ಈ ಬಾರಿ ಬಂದವ್ದನ್ನು ನೋಡಿ ಅವರು ಬಹಳ ನೊಂದುಕೊಂಡುರಲ್ಲದೆ, ಅವರ ಅಂಗೈ ಮತ್ತು ದೇಹ ಬೆವರಿ ಹೋಯಿತು.

"ಕೂತುಕೋ ಬಸವರಾಜ್! ಅಂದಹಾಗೆ ಎಲ್ಲಾ ಪುಸ್ತಕಗಳನ್ನು ಸ್ಥೂಲವಾಗಿ ನೋಡಿದ್ದಾಯಿತು. ಇದಕ್ಕೆ ಎಲ್ಲಿಯೂ ಯಾವ ವಿವರ

ಣೆಯೂ ಸಿಕ್ಕಲಿಲ್ಲ" ಎಂದು ಟಂಬ್ಲರ್‌ನಲ್ಲಿ ಪುಡಿಯನ್ನು ಕದಡಿ ಕೊಟ್ಟರು.

"ಡಾಕ್ಟರ್, ಅದೂ ಒಂದೇ ದಿನ ಬಹಳ ಸಾರಿ ಈ ಸುಡುಗಾಡ ಉರಿತ ಕೆರಳೋದೆಂದರೇನು! ನನ್ನ ಜೀವ ತಿನ್ನಲಿಕ್ಕೆ ಬಂದಿದೆ ಅಂತಿರೋ ಏನಂತೀರಿ?"

ಈರೀತಿ ಹೇಳಿ ದೇಹದ ಪ್ರತಿಯೊಂದು ಅಂಗಾಂಗಗಳಿಗೂ ಪುಡಿ ಹಚ್ಚಿಕೊಂಡು ಅವನು ಸ್ನಾನಮಾಡಿದ. ಗುಳಿಗೆಗಳನ್ನೂ ನುಂಗಿದ. ಈ ಜಾರಿ ಉರಿ ಕಡಮೆಯಾಯಿತು. ಆದರೆ ನರಗಳ ನೇದುವಿಕೆ ಹಾಗೂ ಹೊಡೆತ ಹೋಗಲಿಲ್ಲ.

"ಸಾರ್, ನೀವು ಕೇಳಿದಷ್ಟು ಹಣ ಕೊಡುತ್ತೇನೆ. ದಯವಿಟ್ಟು ..."

"ಹಾಗಲ್ಲ ಬಸವರಾಜ್. ಅಷ್ಟು ದೈನ್ಯದಿಂದ ಕೇಳುವ ಪ್ರಮೇಯವೇ ಇಲ್ಲ. ರೋಗಗಳನ್ನು ನಿವಾರಣೆ ಮಾಡುವುದು ನನ್ನ ಆದ್ಯ ಕರ್ತವ್ಯ. ನನ್ನನ್ನು ನಂಬಿಕೊಂಡು ಬಂದವರಿಗೆ ದ್ರೋಹ ಬಗೆಯಲೆ?"

ತಾವು ಹೇಳುತ್ತಿರುವುದು ಸರಿ ಸ್ವಾಮಿ. ಆದರ ಈ ಕೆಟ್ಟ ಉರಿತ ಇದೆಂಥದು!

ಚಂಪಕಧಾಮರು ಆಳವಾಗಿ ಯೋಚಿಸಿ "ಸುಸೂತ್ರವಾಗಿ ಇದನ್ನು ಹೇಗೆ ಗುಣಪಡಿಸಬಹುದೆಂದು ಈಗೆರಡು ಘಂಟೆಗಳಿಂದ, ಒಂದೆರಡು ಪುಸ್ತಕಗಳನ್ನು ನೋಡಿ ಕಣ್ಣುರಿಯುತ್ತವೆ. ನಾನು ಹೇಳಿದ ಹಾಗೆ ಒಂದು ಮಾತನ್ನು ಪಾಲಿಸಬೇಕು" ಎಂದರು.

"ಏನದು ಡಾಕ್ಟರ್?"

"ಏನೂ ಇಲ್ಲ. ನೀನಿಂದು ಇಲ್ಲಿಯೇ ಮಲಗಿಕೊಳ್ಳಬೇಕು. ನಾನಷ್ಟೆ ಕೇಳುವುದು."

"ಮನೆಯೇನೂ ಮಹಾ ದೂರವಿಲ್ಲ. ಹೋಗುತ್ತೇನೆ. ಅಲ್ಲ ಡಾಕ್ಟರ್! ಈ ಸಾರಿ ಉರಿತವೇನೋ ಕಡಮೆಯಾಯಿತು. ಆದರೆ ಎಲಬುಗಳ ಹೊಡೆತ ಅದೇಕೆ ಹೋಗಲಿಲ್ಲ?"

"ನನಗೆ ಈ ವ್ಯಾಧಿಯ ಉಗಮ ತಿಳಿಯದಾಗಿದೆ. ನಿನ್ನ ನಾಡಿ ಪರೀಕ್ಷೆಯಿಂದ ಅಣುವಷ್ಟಾದರೂ ಪ್ರಯೋಜನವಾಗಲಿಲ್ಲ. ನನ್ನ ಕೈಲಾದ ಮಟ್ಟಿಗೆ ನಿವಾರಿಸಲು ಯತ್ನಿಸುವೆ."

ರಾತ್ರಿ ಹನ್ನೆರಡು ಘಂಟೆಯವರೆವಿಗೂ ಹರಟೆ ಹೊಡೆಯುತ್ತಾ ಇದ್ದು ಬಸವರಾಜ ಅಲ್ಲಿಯೇ ನಿದ್ದೆ ಹೋದ. ಆದರೆ ಚಂಪಕಧಾಮರಿಗೆ ನಿದ್ದೆಯೇ ಬರಲಿಲ್ಲ. ಆ ರೋಗದ ಮೂಲವೇನಿರಬಹುದೆಂಬ ಚಿಂತೆ ಕೊರೆಯುತ್ತಿತ್ತು. ಎದೆಯೂ 'ಡಬ್‌ಡಬ್' ಎಂದು ಹೊಡೆಯುತ್ತಿತ್ತು. ಇದೊಂದು ರೋಗವನ್ನು ನಿವಾರಣೆ ಮಾಡದಿದ್ದರೆ ಅಪಯಶಸ್ಸು ಬರುತ್ತಲ್ಲ–ಎಂದು ಅವರು ಯೋಚನೆ ಮಾಡಿದರು. ವಿದ್ಯುದ್ದೀಪ ಹಾಕಿಕೊಂಡು ಮತ್ತೆ ಹಲವು ಪುಸ್ತಕಗಳನ್ನು ನೋಡಿದರು. ಏನೂ ಉಪಯೋಗವಾಗಲಿಲ್ಲ. ತಿರುಗಿ ಅದೇ ಉರಿತ ಬಸವರಾಜನಿಗೆ ಕೆರಳಬಹುದೆಂದು ಕಾದು ಕುಳಿತುಕೊಂಡಿದ್ದರು. ಸ್ವಲ್ಪ ಹೊತ್ತಾದಮೇಲೆ ಹೊರಗೆ ಹೋಗಿ ಅವನ ಕಿಟಿಕಿಯ ಬಳಿ ನಿಂತು, ಅತ್ತಕಡೆ ತಮ್ಮ ಹರಿತ ದೃಷ್ಟಿಯನ್ನು ಹಾಯಿಸಿದರು. ಒಳಗಿನಿಂದ ಏನೋ ಸದ್ದು ಕೇಳಿಬರುತ್ತಿತ್ತು. ಮೆಲ್ಲಗೆ ಕದ ತೆಗೆದು ಅವನ ಹಾಸಿಗೆಯ ಬಳಿ ಚಿತ್ರದ ಗೊಂಬೆಯಂತೆ ನಿಂತು ಅವರು ಕೇಳಿದರು:

"ಅಯ್ಯೋ ಎಂಥ ಕೆಲಸವಾಯ್ತು! ನನಗೆ ..ನನ ಗೆ ಯಮನಿಂದ ....ಹೂ....ಯಮ ವಿಚಿತ್ರ ಹಿಂಸೆ ಕೊಡ್ತಾನೆ. ಕೈಯಲ್ಲಿ ಕಾದ ಗುಂಡುಗಳನ್ನು ಹಾಕ್ತಾನೆ!! ಕಾದೆಣ್ಣೆಯಲ್ಲಿ ಕರಿಯುತ್ತಾನೆ. ಹಾಗೆ ಮಾಡಬಾರದಾಗಿತ್ತು!....ಯಾರಿಗೂ ಹೀಗಾದಿರಲಿ. ಅವರಿಗೆ ಹಾಗೆ ಮಾಡಬಾರದಾಗಿತ್ತು!...." ಹೀಗೆ ಇನ್ನೂ ಏನೇನೊ ಕೂಗುತ್ತಿದ್ದ. ಅದನ್ನು ಕೇಳಿ ಬಹಳಮೂಡಿ ಮಾನಸಿಕ ಘಾತ ಆಗಿರಬಹುದು. ಯಾವುದನ್ನೋ ತುಂಬ ಹಚ್ಚಿಕೊಂಡು ಇವನು ಈ ಸ್ಥಿತಿಗೆ ಬಂದಿರಬಹುದು. ಆದರೂ ಈ ರೀತಿಯ ಉರಿತ ಬರಲಿಕ್ಕೆ ಕಾರಣವಿಲ್ಲ. 'ಮಾನಸಿಕರೋಗ ನಿನನಾಗಿದೆ. ನಾನು ಮಾನಸಿಕ ರೋಗದ ಚಿಕಿತ್ಸಕನಲ್ಲ; ರೋಗದ ಚಿಕಿತ್ಸಕ' ಎಂದು ಹೇಳಿ ಕಳುಹಿಸಬೇಕು ಎಂದು ಅವರು ನಿರ್ಧರಿಸಿದರು.

ಬೆಳಕು ಹರಿಯಿತು. ದಿನಕರನು ತನ್ನ ಕೆಲಸದ ಮೇಲೆ ಉಪಸ್ಥಿತನಾದ. ಬಸವರಾಜನೂ ಸಹ ಅಲ್ಲಿಯೇ ಮುಖ ತೊಳೆದುಕೊಂಡು ಕಾಫಿ ಕುಡಿಯಲು ಕುಳಿತ. ಡಾಕ್ಟರರು ಕಾಫಿ ಕುಡಿಯುತ್ತಾ ಹೇಳಿದರು.

"ಬಸವರಾಜ್, ಇದು ಮಾನಸಿಕ ರೋಗವೆಂದು ನನಗೆ ಕಂಡ ಬಂತು.

"ಓಹೊ! ಹೇಗೆ ಕಂಡುಹಿಡಿದಿರಿ—ನೀವು?"

"ಹೇಗೋ ಕಂಡುಹಿಡಿದೆ—ಯಾಕೆ ಹೇಳಿಬಿಡುತ್ತೇನೆ. ಅದನ್ನೇಕೆ ಮುಚ್ಚಿಕೊಳ್ಳಬೇಕು? ನೀನು ನಿನ್ನೆರಾತ್ರಿ ಕನವರಿಸಿದ ವಿಷಯದ ಮೇಲೆ ..."

"ನಾನೆಲ್ಲಿ ಕನವರಿಸಿದೆ ಡಾಕ್ಟ ...ರ....ರೆ?!"

"ಕನವರಿಸಿದವರಿಗೆ ಕನವರಿಸಿದ್ದು ಹೇಗೆ ಗೊತ್ತಾಗಬಲ್ಲುದು" ಎಂದು ತುಂಟ ನಗೆಯಿಂದ ಡಾಕ್ಟರರು ಹೇಳಿದರು. ಅಲ್ಲದೆ ಅವರು ಮುಂದುವರಿಯುತ್ತ "ನಾನು ಇಂತಹ ರೋಗಗಳನ್ನು ನಿವಾರಣೆಮಾಡಲು ಅನರ್ಹ. ಇದನ್ನು ನಾನು ಕಲಿತೂ ಇಲ್ಲ, ಅದರ ಗಂಧವೂ ನನಗೆ ತಿಳಿಯದು" ಎಂದು ವಿಸ್ಮಯದಿಂದ ಹೇಳಿದರು. ಆದರೂ ಅವರಿಗೆ ಮೊದಲಿನ ಮ್ಲಾನತೆ ಎಲ್ಲಿಗೋ ಹೊರಟು ಹೋಗಿತ್ತು. ಕಳಂಕರಹಿತ ಚಂದ್ರನಂತೆ ಅವರ ಮುಖವೀಗ ಹೊಳೆಯುತ್ತಿತ್ತು. ಕಾರಾಗೃಹದಿಂದ ಬಿಡಲ್ಪಟ್ಟ ಕೈದಿಯಂತೆ ಯಾವುದೋ ಅವ್ಯಕ್ತ ಹೊಣೆಯನ್ನು ಅವರು ಕೆಳಗಿಳಿಸಿದ್ದರು. ಇವರ ಈ ನಿರಾಶಾಜನಕ ಮಾತುಗಳಿಂದ ಬಸವರಾಜನ ಮುಖ ವಿವರ್ಣವಾಯಿತು. ತಲೆಯನ್ನು ಕೊಂಚ ಹೊತ್ತು ಬಗ್ಗಿಸಿಬಿಟ್ಟ. ಯಾವುದನ್ನು ಮಾತಾಡಿದರೆ ಕೆಟ್ಟದು, ಯಾವುದನ್ನು ಮಾತಾಡಿದರೆ ಒಳ್ಳೆಯದು—ಎಂದು ಸಹ ಅವನಿಗೆ ಗೊತ್ತಾಗಲಿಲ್ಲ.

"ಆಗಲಿ, ದೈವೇಚ್ಛೆಯಂತಾಗಲಿ. ಹೀಗೆ ದಿನಕ್ಕೆ ಎರಡು ಮೂರು ಬಾರಿ ಇಂತಹ ಉರಿ ಬಂದರೆ ಹೇಗೆ ಉಳಿಯಲಿ. ನಾವೊಂದು ಮಾಡಬೇಕೆಂದರೆ ಅದೊಂದು ಆಗುತ್ತದೆ. ವಿಧಿ ಎಲ್ಲಿ ಕೂತುಕೊಂಡು ಏನು ಅಣಕಿಸುತ್ತಿದೆಯೋ! ಆ ದೇವರೊಬ್ಬ ಬಲ್ಲ." ಎಂದು ಚಿಕ್ಕಧ್ವನಿಯಲ್ಲಿ ಹೇಳಿದ. ಅವನಿನ್ನು ಬದುಕಲಾರನೆಂದು ಅವನ ಧ್ವನಿ ನುಡಿಯುತ್ತಿತ್ತು. ಆಗ ಅವನ ಮುಖಗಳ ಮೇಲೆ ಆದ ವಿವರ್ಣ ಪರಿಣಾಮಗಳು ಸಾವಿಗೆ ಆಹ್ವಾನಿಸುತ್ತಿರುವ ದೂತರಂತೆ ವಿಭಾಸಿತವಾದವು.

"ಆಗಲಾಗಲಿ ಡಾಕ್ಟರ್. ಎದುರಿಸೋದು ಸಮುದ್ರದಂತೆ ಧೈರ್ಯವಾಗಿ." ಎಂದು ಮೊದಲಿನಂತೆ ಅವರಿಗೆ ವಂದನೆಗಳನ್ನು ಹೇಳದೆ, ಬಸವರಾಜ ಅಲ್ಲಿರದೆ ಹೊರಟು ಬಂದನು.

ಆ ದಿನ ಪ್ರಾತಃಕಾಲವೆಲ್ಲಾ ಅವನು ಜಡವಾಗಿದ್ದ. ಯಾರ

ಜೊತೆಗೂ ಹೆಚ್ಚಿಗೆ ಮಾತನಾಡುತ್ತಿದ್ದಿಲ್ಲ. ಒಂದು ವಿಧವಾದ ಬೇಗೆಯಿಂದ ಬೇಯುತ್ತಿದ್ದ. ಹಾಲಮ್ಮನನ್ನು ಆ ದಿನ ಎಂದೂ ಇಲ್ಲದ ಪ್ರೇಮದಿಂದ ಅನೇಕಬಾರಿ ಮಾತಾಡಿಸಿದ ಡಾಕ್ಟರ್ ಚಂಪಕಧಾಮರಿಗೊಂದು ಕಾಗದ ಬರೆದ

"ಶ್ರೀ ಚಂಪಕಧಾಮರಿಗೆ ಅನಂತಾನಂತ ನಮಸ್ಕಾರಗಳು. ತಾವು ಬೆಳಿಗ್ಗೆ ನಿರ್ಧರಿಸಿ ಹೇಳಿದ ಪ್ರಕಾರ ಮಾನಸಿಕ ರೋಗದ ಅಂಶದ ಜೊತೆಗೆ ಮಾಟ ತಂತ್ರದ ಹಾವಳಿಯಿಂದಾಗಿ ಈ ಪರಿಸ್ಥಿತಿ ನನಗೆ ಬಂದೊದಗಿತು. ಈ ದಿನದವರೆವಿಗೂ ಮತ್ತು ನೀವೇ ಸ್ವಂತ ಪರೀಕ್ಷಿಸಿದ ಮೇಲಾಗಲಿ ನಾನು ಹೇಳಲಿಲ್ಲ ಅದಕ್ಕೆ ಕ್ಷಮಿಸಿ

ನಾನು ನನ್ನ ಜೀವನದಲ್ಲಿ ಒಳ್ಳೆಯವನಾಗಲಿಲ್ಲ ದುರ್ಜನರು, ದುಸ್ಸಂಗ, ಇಸ್ಪೀಟು ಇವೇ ನನ್ನ ಜೀವದ ಗೆಳೆಯರು. ನನಗಿಂತಲೂ ನಮ್ಮ ಕಕ್ಕನ ಆಸ್ತಿ ಜಾಸ್ತಿ ಇದೆ. ನನಗಿಂತಲೂ ಅವರ ಮಕ್ಕಳು ಬುದ್ಧಿವಂತರು. ಅವರಿಗೆ ಆದಾಯವೂ ಹೆಚ್ಚು ಎಂಬ ಹೊಟ್ಟೆಕಿಚ್ಚು. ಅವರ ಮೇಲೆ ದ್ವೇಷವನ್ನು ಮಾಡಲು ಪ್ರೇರೇಪಿಸಿತು ಆ ದ್ವೇಷ ದೂರ ವಿದ್ದಾಗ ಉಂಟಾಗಿರಲಿಲ್ಲ ಹರಿಹರಕ್ಕೆ ಬರುವುದಕ್ಕಿಂತ ಮುಂಚೆ ನಾವು ಹಳ್ಳಿಯಲ್ಲಿದ್ದೆವು. ಆಗ ನಮ್ಮೆರಡು ಮನೆಗಳ ಒಡನಾಟ ಬಹಳ ಹತ್ತಿರ ವಿತ್ತು. ನಮ್ಮೂರು ವೀರಭದ್ರದೇವರ ತೇರಿಗೆ ತಪ್ಪದಂತೆ ಎಲ್ಲರನ್ನೂ ಕರದುಕೊಂಡು ಹೋಗುತ್ತಿದ್ದೆ. ಆದರೆ ನಾನು ಆಗ ಇಟ್ಟಿಗಿ, ಜಿನಸು ಗಳನ್ನು ದಾವಣಗೆರೆಗೆ ಬಾಡಿಗೆ ಹೊಡೆಯುತ್ತಿದೆ. ಅದರಲ್ಲಿ ಹೊಟ್ಟೆ ತುಂಬುತಿದ್ದಿಲ್ಲ. ಕಾರಣ ನಾವು ಹಳ್ಳಿಬಿಟ್ಟು ಪಟ್ಟಣಕ್ಕೆ ಸೇರಿದೆವು. ಮೊದ ಮೊದಲು ನಾನು ಅವರೊಡನೆ ಪ್ರೇಮದಿಂದಲೇ ಇದ್ದೆ. ಅನಂತರ ಅವರಿಂದ ದುಡ್ಡು ತೆಗೆದುಕೊಂಡು ಅವರಿಗೆ ಮೋಸಮಾಡಿದೆ. ಅವರು ರಕ್ತ ಬಸಿದು ದುಡಿದ ಹಣವನ್ನು ತಿಂದೆ. ಇಲ್ಲಿಂದ ಅವರಿಗೂ ನಮಗೂ ದ್ವೇಷದ ಬೀಜ ಬಿತ್ತು. ಈಗವರನ್ನು ಕಂಡರೆ ನನಗಾಗುತ್ತಿದ್ದಿಲ್ಲ. ಕಂಡರೆ ಕೆಂಡ ಬೀರುತ್ತಿದ್ದೆ.

ಈ ಮಧ್ಯೆ ಅವರ ಒಬ್ಬಳೇ ಮಗಳು ಮಾಲಿನಿಯ ಲಗ್ನವಾಯಿತು. ಲಗ್ನದ ದಿನದಿಂದ ಹಿಡಿದು ಮುಗಿಯುವವರೆವಿಗೆ ಎರಡೂ ಕಡೆಯವರಿಗೆ ಜಗಳಕಾಯಲು ಪ್ರೋತ್ಸಾಹಿಸಿದವನು ನಾನು. ಲಗ್ನವಾದ ನಂತರ

ಅವಸರವಸರವಾಗಿ ಪ್ರಸ್ತಮಾಡಿಕೊಳ್ಳಲು ಅವರಳಿಯ ಉಮಾಪತಿಗೆ ನಾನೇ ಹೇಳಿ ಪ್ರೇರೇಪಿಸಿದೆ.

ಕಡೆಗೆ "ನೀನು ಅವರ ಒಡನಾಟ ಬಿಟ್ಟುಬಿಡು. ಅವರು ನಿನಗೆ ಸರಿಯಾದ ಮುಯ್ಯಿ ವಗೈರೆ ಮಾಡಿಲ್ಲ" ಎಂದು ಅವನ ಕೋಪ ಕೆರಳಿಸಿ ಬಂಧುಗಳ ಒಡನಾಟ ತಪ್ಪಿಸಿದೆ. ಈಗ ಮಾಲಿನಿ ಅವರ ತೌರುಮನೆಗೆ ಬರುವಂತಿಲ್ಲ ಚೊಚ್ಚಲು ಬಸಿರಿನಲ್ಲೂ ಕೂಡ ತೌರುಮನೆ ಸೇರಲಿಲ್ಲ ಆ ತಂಗಿ. ಇವರು ಬುದ್ಧಿಹೇಳುವಂತಹ ಒಂದು ಕಾಗದವನ್ನು ಬರೆದಿದ್ದರು. ಅದಕ್ಕೆ ಅವನು ಮನಸ್ಸು ನೋಯಿಸುವ ಕಾಗದ ಬರೆದಿದ್ದಾನೆ.

ಗುರುಮೂರ್ತಿಗೆ ಮಾಟಮಾಡಿಸಬೇಕೆಂದು ಒಂದು ದಿನ ಯೋಚಿಸಿದೆ. ಅದಕ್ಕಾಗಿ ಸುಪ್ರಸಿದ್ಧ ಮಾಟಗಾರ ಭೂತಣ್ಣನ ಬಳಿ ಹೋಗಿ ಕಂಡೆ. ಆಗ ನನ್ನ ಪಾಲಿಗೆ ಪಾಪಪುಣ್ಯಗಳರಿವು ಹಾದಿ ಹಿಡಿದಿತ್ತು. ನೀತಿ ನನ್ನ ಪಾಲಿಗೆ ಅನೀತಿಯಾಗಿತ್ತು. ಯೋಚಿಸಿ ಕಾರ್ಯೋನ್ಮುಖನಾಗುವಷ್ಟು ಸಹನೆ ನನ್ನಲ್ಲಿರಲಿಲ್ಲ. ಒಬ್ಬ ಸೂಳೆಯಿಂದ ಗುರುಮೂರ್ತಿಯ ಕೂದಲು, ಉಗುರು ಮತ್ತು ಗರ್ಭಿಣಿಯ ಹಸ್ತವನ್ನು ಜೋಡಿಸಿ, ಅವನಿಗೆ ಮಾಟಮಾಡಲು ಹೇಳಿದೆ. ಭೂತಪ್ಪನು ಒಂದು ಮಾಟದ ತೆಂಗಿನಕಾಯಿಯೊಳಗೆ ಈ ಎಲ್ಲಾ ಸಾಮಾನುಗಳನ್ನೂ, ಮಾಟದ ಸಾಮಾನುಗಳನ್ನೂ ಹಾಕಿ ಅದನ್ನು ಹಾಳು ಬಾವಿಯಲ್ಲಿ ಹಾಕಲು ಹೇಳಿದ. ಮತ್ತು ನನ್ನ ರಕ್ಷಣೆಗಾಗಿ 'ರಕ್ಷಾಯಂತ್ರ'ವನ್ನು ಕೊಟ್ಟ. ಆದರೆ ಅವಸರದಲ್ಲಿ 'ರಕ್ಷಾಯಂತ್ರ'ವನ್ನು ಬಿಟ್ಟು ತೆಂಗಿನಕಾಯಿಯನ್ನು ಬಾವಿಯಲ್ಲಿ ಹಾಕಿದೆ. 'ರಕ್ಷಾಯಂತ್ರ' ಕಳೆದುಹೋಗಿದ್ದರಿಂದ ಅದು ನನಗೆ ತಿರುಗಿ ಈ ಉರಿತ ಬಂದಿದೆ. ಇದರಿಂದ ನಾನು ಉಳಿಯುವಂತಿಲ್ಲ. ಬೇರೆ ಮಾಟಗಾರರೂ ಸಹ ಇದನ್ನು ನಿವಾರಣೆ ಮಾಡಲು ಅಶಕ್ತರು.

ನಾನೀಗ ಸಾಯುತ್ತೇನೆಂದು ನನಗೆ ನಂಬಿಕೆಯಾಗಿದೆ. ಆದರೀಗ ಒಂದು ಕಾರ್ಯವನ್ನು ಅಗತ್ಯಮಾಡಿದೆ. ಆ ತೆಂಗಿನಕಾಯಿಯನ್ನು ತೆಗೆದು ಸ್ಮಶಾನದಲ್ಲಿ ಹೂತರೆ ಗುರುಮೂರ್ತಿ ಪುನಃ ಉಳಿಯುತ್ತಾನೆಂದು ಭೂತಪ್ಪ ಹೇಳಿದ್ದ. ಅದರಂತೆ ನಿನ್ನೆ ರಾತ್ರಿ ಅದನ್ನು ಮಾಡಿದೆ. ಆದರೆ ಭೂತಣ್ಣ ಕೊಟ್ಟಿದ್ದ ಯಂತ್ರವೊಂದಿದ್ದರೆ ನಾನೂ ಬದುಕುತ್ತಿದ್ದೆ.

ನನ್ನ ಹಣೆಯಬರಹದಲ್ಲಿ ಇಷ್ಟಿತ್ತೆಂದು ಕಾಣುತ್ತದೆ. ಪಾಪದ

ಗಂಟನ್ನು ಹೋಗುತ್ತಿರುವ ನನಗೆ ಆಶೀರ್ವದಿಸಿ. ಯಾಕೋ ಈಗಲೇ ಒಂದು ತರಹೆಯ ಸಂಕಟ ಪುನಃ ಎದ್ದಿದೆ. ಈ ಕಾಗದ ಮುಟ್ಟುವುದಕ್ಕಿಂತ ಮುಂಚೆಯೇ ನಾನು ಉಳಿಯುವೆನೋ ಇಲ್ಲವೋ ಹೇಳಲಾರೆ.

ಕಡೆಯದಾಗಿ ಒಂದು ಮಾತು ; ನಾನು ಬಂದಾಗಲೆಲ್ಲಾ ಮನೆಯವರಂತೆ ಉಪಚರಿಸಿ ಬಹಳ ಶ್ರಮ ತೆಗೆದುಕೊಂಡಿರಿ. ಅದಕ್ಕಾಗಿ ನನ್ನ ಪ್ರತಿ ನಮಸ್ಕಾರಗಳು.

ಇತಿ

—ಬಸವರಾಜ

ಅವನು ಕಾಗದ ಮುಗಿಸುವ ಹೊತ್ತಿಗೆ ಸರಿಯಾಗಿ ಶಶಿಕಲೆ ಬಂದಳು. "ಬಾ ಶಶಿಕಲೆ, ಮತ್ತೆ ಕೆಟ್ಟ ಉರಿ ಶುರುವಾಗಿದೆ. ಒಂದಿಷ್ಟು ತಡಿಯನ್ನಾದರೂ ಉರುಡಿಸು ನನಗೆ ಇಂಥ ಕಷ್ಟದ ಹೊತ್ತಿನಲ್ಲಿ, ಯಾರೂ ನೇರಲಿಲ್ಲ. ಬರಲಿಲ್ಲ"

"ನಿಮ್ಮಪ್ಪ ಬಂದರೆ?"

"ಇಲ್ಲ, ದುಗ್ಗತ್ತಿಗೆ ಹೋಗಿದಾನೆ. ಅವನಿಗೂ ಕಾಯಿಲೆಯಂತೆ. ನಾ ಸಾಯೋ ಹೊತ್ತಿನಲ್ಲಿ ಅವನಿಲ್ಲ ಅವನು ನಾಯೋ ಹೊತ್ತಿನಲ್ಲಿ ನಾನಿಲ್ಲ" ಎಂದು ಹಾಸಿಗೆಯ ಮೇಲೆ ಬಿದ್ದ. ಗುರುಲಿಂಗನನ್ನು ಕರೆದು ಆ ಕಾಗದ ಟಪಾಲಿಗೆ ಹಾಕಿ ಬರಲು ಹೇಳಿದ. ಗುರುಲಿಂಗನ ಕೈಯಿಂದ ಕಾಗದ ತೆಗೆದುಕೊಂಡು ಶಶಿಕಲೆ ವಿಳಾಸ ಓದಿದಳು. 'ಡಾಕ್ಟರ್ ಚಂಪಕ ಧಾಮ; ಮೇನ್‌ರೋಡ್, ಹರಿಹರ' ಎಂದು ಅದರ ಮೇಲೆ ಬರೆದಿತ್ತು. ಕಾಗದ ಕೊಡುತ್ತಾ ಆಕೆ ಹೇಳಿದಳು.

"ನಾನಿಷ್ಟು ಜನ ನೋಡದೆ. ನಿಮ್ಮಷ್ಟು ಪ್ರೇಮ ಮಾಡಿದವರು ಯಾರೂ ಇಲ್ಲ. ಲಗ್ನ ಆದವಳಿಗಿಂತ ಜಾಸ್ತಿ ನನ್ನ ನೋಡಿದಿರಿ" ಈ ಮಾತು ಹೇಳುತ್ತಾ ಆಕೆ ಕಣ್ಣೀರು ತಂದಳು.

"ಹಾಲೀ ಬಾರೇ, ಈಗಲಾದರೂ ಒಮ್ಮೆ ನನ್ನ ಪ್ರೇಮದಿಂದ ಮಾತಾಡಿಸು. ನಾನು ಯಾವಾಗಲೂ ನಿನ್ನನ್ನು ಕಂಡರೆ ಸಿಟ್ಟು ಮಾಡಿಕೊಳ್ಳುತ್ತಿದ್ದೆ. ಅಯ್ಯೋ ಉರಿ! ಉರಿ! ಒಂದಿಷ್ಟು ಮಜ್ಜಿಗೆ" ಎಂದು ಕೂಗಿದ. ಹಾಲಮ್ಮ ಮಜ್ಜಿಗೆ ತಂದುಕೊಂಟ್ಟಳು.

"ನಾನು ಸಾಯೋದಕ್ಕಿಂತ ಮುಂಚೆ ನಿನಗೆ ಏನು ಕೊಡಲಿ, ಶಶಿ?"

"ನನಗೆ ಏನೂ ಬೇಡ. ಮುಂದಿನ ಜನ್ಮದಲ್ಲಿ ನಿಮ್ಮ ಹೆಂಡತಿ ಆಗ ಕಂಡು ಹರಸಿ."

"ಅದು ಮುಂದಿನ ಜನ್ಮದ ಮಾತು ಶಶಿ. ದೇವರು ಮಾಡೋದು ಅಯ್ಯೋ! ನರಗಳಿಗೆ ಯಾರೋ ಬೆಂಕಿಯಿಂದ ಬರೆಯೆಳೆಯುತ್ತಿದ್ದಾರೆ."

"ತಲೆ ಒತ್ತಲೇನ್ರಿ?" ಎಂದು ತಲೆ ಒತ್ತುವುದಕ್ಕೆ ಹತ್ತಿದಳು ಹಾಲಮ್ಮ.

"ನನಗೆ ತಲೆ ನೋಯುತ್ತಿಲ್ಲ ಹಾಲ. ನರಗಳು...ಈ ಕುತ್ತಿಗೆ ಪಕ್ಕದಲ್ಲಿರುವ ನರಗಳು. ಗುರುಲಿಂಗೂ ಆ ಕಾಗದ ಹಾಕಿ ಬಾಪ್ಪ. ಶಶೀ ಈ ಉಂಗುರ ಹಿಡಿ. ನನ್ನ ಹೆಸರು ಇದರಲ್ಲಿ ಕೆತ್ತಿದೆ. ನೀನು ಸಾಯೊ ವರೆವಿಗೂ ಮಾರೋದಿಲ್ಲಾಂತ ಕೈಮೇಲೆ ಕೈಹಾಕು" ಎಂದು ಕೈಮೇಲೆ ಕೈ ಹಾಕಿಸಿಕೊಂಡು ಭರವಸೆ ತೆಗೆದುಕೊಂಡು, ಪುನಃ ಏದುತ್ತಾ ಹೇಳಿದ: "ಹಾಲಿ, ನಿನಗೆ ಐದೆಕರೆ ಭೂಮಿ ಇದೆ ನಾನು ಸರಿಯಾಗಿ ನಿನ್ನ ಜೊತೆಗೆ ನಡೆಯಲಿಲ್ಲ ಎಲ್ಲಿ ದೈವದಾಟ."

"ಕತ್ತಲಾಯ್ತು ಶಶಿ ದೀಪ ಹಚ್ಚು. ನನ್ನ ಹೆಸರು ಹೇಳಲು ಆ ಕೂಸು ಸಾಯ್ತು" ಶಶಿಕಲಾ ದೀಪ ಹಚ್ಚಿದಳು.

"ಯಾಕೋ ಉರಿ: ಕಣ್ಣು ಕುಕ್ಕುತ್ತಿದೆ. ದೀಪ ಆರಿಸು ಶಶಿ. ಉರಿ! ಉರಿ! ಯಮನ ಕಣ್ಣುಗಳಿಂದ ಉರಿ! ಕೋಣದ ಕಾಲಿನ ಹೊಡೆತ. ಅಬ್ಬಾ ನೀವು ನೇಶ. .." ಎಂದು ಮನೆ ಹಾರುವ ಹಾಗೆ ಅವನು ಕೂಗಿದ ಶಶಿಕಲಾ ದೀಪ ಆರಿಸಿ ಬಸವರಾಜನನ್ನು ಮಾತನಾಡಿಸಲು ಹೋದಾಗ. ಹಾಲಮ್ಮನ ಮಾಂಗಲ್ಯದ ಜ್ಯೋತಿಯೂ ನಂದಿ ಹೊಗೆಯೇಳುತ್ತಿತ್ತು!

## ೨೫

ಮಾಲಿನಿಯನ್ನು ಕರೆದುಕೊಂಡು ಹೋಗಲು ಬಿಳಿಸನೂರಿಗೆ ಉಮಾಪತಿ ಬಂದಿದ್ದ. ಶಿವಶಂಕರ ಪಾಟೀಲರಾಗಲಿ, ಶಿವಕುಮಾರ ರಾಗಲಿ ಆವನ ವಿಷಯದಲ್ಲಿ ಮೊದಲಿನ ಪ್ರೇಮವನ್ನು ತೋರಿಸಲಿಲ್ಲ. ಆವರೂ ಮಾಲಿನಿಯನ್ನು ಮನೆಯವರಂತೆ ಕರೆಸಿ ಉಪಚಾರ ಮಾಡಿ ಮಾಡಿದ್ದರು ಆದರೂ ಇನ್ನೊಮ್ಮೆ ಅವನಿಗೆ ಬುದ್ಧಿವಾದ ಹೇಳಬೇಕೆಂಬ ಆಸೆಯೂ ಅವರಲ್ಲಿ ಮನೆ ಮಾಡಿಕೊಂಡಿತ್ತು. ಈಗಲ್ಲ ನಾಳೆ, ನಾಳೆ ಯಲ್ಲ ನಾಡಿದ್ದಾದರೂ ಅವನು ಅರಿತುಕೊಂಡಾನೆಂಬ ಆಸೆಯನ್ನಿಟ್ಟು ಕೊಂಡಿದ್ದರು ಅವರು. ಉಮಾಪತಿ ಈಗ ಕರೆಯುವುದಕ್ಕೆ ಬಂದಾಗ ಆವರ ಕಿರಿಯ ಮಗ ಪುಟ್ಟಪ್ಪ ಪ್ರಸ್ತಾಪಮಾಡಿದ:

"ಉಮಾಪತಿ, ಒಂದು ವಿಷಯ ನಿನ್ನ ಹತ್ತಿರ ಹೇಳಲೆ?" ಎಂದ. ಬಿಳಿಸನೂರಿಗೆ ಬಂದಾಗಲೆಲ್ಲಾ ಪಾಟೀಲರ ಮನೆಯವರೆಲ್ಲರೂ ಬಹಳ ಮಾಡಿ ಮಾತಿಗೆ ಪೀಠಿಕೆಯನ್ನು ಹೀಗೆಯೇ ಹಾಕುತ್ತಿದ್ದರು. ಅದು ಉಮಾಪತಿಗೆ ಗೊತ್ತಾಗಿತ್ತು. ಅದಕ್ಕೆಂದೇ ಹೇಳಿದ

"ನಿಮ್ಮ ಒಂದು ವಿಷಯ ಎಲ್ಲಾ ಗೊತ್ತುಂಟು. ಆಕೆಯನ್ನು ಹರಿಹರಕ್ಕೆ ಕಳಿಸಿಕೊಡು ಎಂಬೋದನ್ನು ಬಿಟ್ಟು, ಬೇರೆ ಯಾವುದಾದರೂ ಇದ್ದರೆ ಹೇಳು. ಅದನ್ನು ಶಿರಸಾವಹಿಸಿ ಕೇಳುತ್ತೇನೆ."

"ಹಾಗೆಂದರೆ ನನ್ನ ಮಾತು ನಿಂತಿತು."

"ಉಹ್ಞು, ಆ ಮಾತೇ ಎತ್ತಬೇಡಿ"

"ಎತ್ತೋದಿಲ್ಲ ಪುಣ್ಯಾತ್ಮ. ಬೇಡಾಂದಮೇಲೆ ಬೇಡ. ನಿನ್ನ ಹತ್ತಿರ ಯಾರಾದರೂ ಎತ್ತೋದುಂಟೇ. ಛೆ! ಎಂಥ ಮಾತು. ಹರಿಹರ ಬ್ರಹ್ಮಾದಿಗಳಿಗೂ ನೀನು ಮಣಿಯೋನಲ್ಲ- ಒಳ್ಳೇ ಧೈರ್ಯಸ್ಥ."

"ತಿಮ್ಮಲಾಪುರದಲ್ಲಿ ನಾನು ಮೇಷ್ಟ್ರಾಗಿದ್ದೆ. ಆವಾಗ ಊರ ಅಭಿ ವೃದ್ಧಿಗೆ, ಏಳ್ಗೆಗೆ ಹೊಡೆದಾಡಿದವರು."

ಪುಟ್ಟಪ್ಪ ಮಂದನಗೆಯಿಂದ "ಜೀವದ ಹಂಗು ತೊರೆತು ನಡುಕಟ್ಟಿ ಹೊಡೆದಾಡಿದವರೇನೊ!" ಎಂದ.

"ಹೂ, ಇಲ್ಲದಿದ್ದರೆ "

"ಊರಿಗೆ ಕರೆದುಕೊಂಡು ಹೋಗ್ತೀಯಾ ತಾಯೀನ ?"

"ಊರಿಗೆ ಕರೆದುಕೊಂಡು ಹೋಗದೆ ಇನ್ನೆಲ್ಲಿಗೆ ಹೋಗಲಿ? ಆಕೆಗಾದರೂ ಯಾರಿದಾರೆ? ತಂದೆ ತಾಯಿ ಇದಾರೇನು ಪುಟ್ಟಪ್ಪ ?"

"ಏಹೇ ಎಲ್ಲಿದಾರ್ರಿ ? ಸಾಹುಕಾರರ ಕಣ್ಣಿಗೆ ಕಾಣಬೇಕೆ ಹೇಗೆ ?"

"ಏಹೆಹೆ, ಹಾಗೇನಿಲ್ಲ. ಮನಸ್ಸು ಜರಕೊಂಡು ಬಿಟ್ಟಿದೇನೆ ಪುಟ್ಟಪ್ಪ."

"ಪಾಪ! ಜರಕೊಂಡಿರಬಹುದು. ವಿಷಯೆರದಿದಾರೆ ಅಲ್ಲವೆ ?"

"ವಿಷಯೆರೆದಿದಾರೆಂತ ಬಾಯಿಬಿಟ್ಟು ಯಾರು ಹೇಳ್ತಾರೆ ಪುಟ್ಟಪ್ಪ" ಆ ವಿಷಯಕ್ಕೆ ಒಂದಿಷ್ಟು ಬೆಂಕಿ ಹಚ್ಚಿ ಬಿಟ್ಟುಬಿಡು. ಅದೇನೋ ಶಿವಕುಮಾರ ನಾಟಕ ಬರೆದಿದ್ದಾರೆಂತ ಕೇಳಿದ್ದೆ."

"ಏನೋ ಅವರವರ ತಲೆಯೊಳಗಿನ ಗುಂಗು. ಬರಿಯುತ್ತಿರುತ್ತಾರೆ."

"ಹಿಂದೆ ರೇಣುಕ ಒಂದು ಪದ್ಯ ಬರೆದಿದ್ದ. ಅದಕ್ಕೆ ಪ್ರತಿಯಾಗಿ ಕಾಗದ ಹೆಂಗೆ ಬರೆದೆ ಎಂತೀಯೆ. ಏ, ಅವನ ತಲೆಯೊಳಗಿರುವ ಗುಂಗು ನಿಚ್ಚಳಾಗಬೇಕಲ್ಲ ."

"ಹೋಗಲಿ ಬಿಡು ಉಮಾಪತಿ. ಒಬ್ಬರನ್ನು ಟೀಕಿಸಿ ಅವರು ಬರೆಯುತ್ತಿಲ್ಲ ಜನಜೀವನದ ಜೀವಾಳವನ್ನು ತಮ್ಮ ಆಳವಾದ ಕಣ್ಣುಗಳಿಂದ ನೋಡಿ ಬರೆಯುತ್ತಾರೆ ನಾನೂ ಅಂತಹ ವಿದ್ಯಾವಂತನಲ್ಲ. ಏನೋ ಎಲ್. ಎಸ್. ವರೆವಿಗೂ ಓದಿಬಿಟ್ಟೆ ಹಾಗೆಲ್ಲಾ ನೀನು ಹೇಳಬಾರದು "

"ಯಾರಿಗಾದರೂ ಬರೆಯಲಿ ನಡೆಯಪ್ಪ ಗಡಗಡ. ಬಿಸಿಲು ಹತ್ತೋದರವೊಳಗೆ ಊರು ಬಿಡಬೇಕು "

"ಏನು ನಡೆದು ಹೋಗುವುದಿದೆಯೋ. ಸವಾರಿ ಬಂಡಿ ಹೋಗುತ್ತಲ್ಲ."

"ಗರ್ಭಿಣಿ ಹೆಂಗಸು. ಆದಷ್ಟು ಬೇಗ ಊರು ಸೇರಿಕೊಂಡು ಬಿಡೋಣಾಂತ" ಎಂದು ಬಟ್ಟೆಗಳನ್ನು ತೆಗೆದು ಇಬ್ಬರೂ ನದಿಯಲ್ಲಿ ಸ್ನಾನ ಮಾಡಿದರು. ಆದಷ್ಟುಬೇಗ ಬಟ್ಟೆ ಸೆಳೆದು ಮನೆ ಸೇರಿದರು.

ಮಧ್ಯಾಹ್ನದ ಊಟವಾದ ನಂತರ ಗೌರಮ್ಮ ಒಂದೆರಡು ಮಾತು

ಪ್ರಾಸಂಗಿಕವಾಗಿ ಹೇಳಿದಳು:

"ನೀವೂ ನೀವೂ ಎಂದಿದ್ದರೂ ಬೀಗರೆ. ಒಂದಲ್ಲ ಒಂದು ದಿನ ಕೂಡುತ್ತೀರಿ ಯಜಮಾನರಿಗೆ ನೀನಂಥ ಮಾತುಗಳಾಡಬೇಡ. ನಿನಗೆ ಅವರು ತಂದೆ ಸಮಾನ, ಮುಂದೆ ಕರೆಯಲಿಕ್ಕೆ ಬಂದಾರು."

"ಅವರೇನು ಎಂದಿಗೂ ಬರೋದಿಲ್ಲ ಬಿಡಿರಿ",

"ಮನೆಯು ಬಳಿ ಸುಳಿದರೆ ಹೊಡೆಯುತ್ತೇನೆಂದರೆ ಯಾರು ಬರ್ತಾರೆ. ಅಂತೂ ನೀನು ಏನೇ ಅನ್ನು ಉಮಾಪತಿ, ಈ ರೀತಿ ಮಾತ್ರ ಉರಿಯು ಬೇಡ. ಇದರಿಂದ ದೇವರು ಒಳ್ಳೇದುಮಾಡೋದಿಲ್ಲ. ಹೀಗೆ ಉರಿದುರಿದು ಬಸವರಾಜ ಸತ್ತುಹೋದ"

"ಆ್ಞ! ಯಾವ ಬಸವರಾಜ?"

"ನಿಮ್ಮಳಿಯ ಚಂದ್ರಶೇಖರಯ್ಯನವರ ಮಗ ಬಸವರಾಜ."

"ಅಯ್ಯಯ್ಯೋ ಏನಾಗಿತ್ತಂತೆ" ಮತ್ತೆ ತಲೆಕೊಡವಿ "ಏನಾಗಿತ್ತಂತೆ ಹೇಳಿರಿ?" ಎಂದ

"ಏನೋ ಉರಿ ಉರಿ ಎಂತ ಮೊನ್ನೆ ರಾತ್ರಿ ಹೋದನಂತೆ"

"ನಾನು ಮೊನ್ನೆ ಅದೇ ಊರಿನಲ್ಲಿ ಹಾಸಿ ಬಂದೆ ಅವರ ಮನೆಗೆ ಒಂದಿಷ್ಟು ಹೋಗಲಿಲ್ಲ."

"ಮಾಲಕ್ಕ, ಎಲ್ಲಿಗೆ ಹೋಗಿದ್ದೆಮ್ಮ ಬಿಸಿಲಿನಲ್ಲಿ?"

"ಕಲ್ಲು ಹೊಲಕ್ಕೆ"

"ಅಯ್ಯೋ, ಬಿಸಿಲಿನಲ್ಲಿ ಯಾಕೆ ಹೋಗಿದ್ದೆವ್ವ, ನಮ್ಮ ಅತ್ತಿಗೆಗೆ ಹೇಳಲಿಕ್ಕೆ ಹೋಗಿದ್ದಳೇನೋ. ಆ ಮುದುಕಿಗೆ ಇನ್ನೊಂದು ದಿನ ಮನೆಯಲ್ಲಿರೂಂದರೆ ಇರಲಿಲ್ಲ, ಹೋಗಿಬಿಟ್ಟಳು. ಅವನು ಶಿವಕುಮಾರ ದಾವಣಗೆರೆಗೆ ಏನೋ ಅರ್ಜೆಂಟ್ ಕೆಲಸ ಇದೇಂತ ಹೋದ"

"ಅವರು ಬೇಕೆಂವೇ ಹೋಗಿದ್ದಾರು" ಎಂದ ಉಮಾಪತಿ

"ಎಂಥಮಾತು ಆಡುತ್ತೀ ಉಮಾಪತಿ? ನಿನಗೆಲ್ಲೋ ಹುಚ್ಚು ಹಿಡಿಯುತ್ತೆ ಬಿಡು. ಅವನ ನಾಟಕನೇನೋ ಜಯದೇವ ವಿದ್ಯಾರ್ಥಿ ನಿಲಯದವರು ಆಡುತ್ತಾರಂತೆ. ಅದಕ್ಕೆ ಇವನ ಅಪ್ಪಣೆ ತೆಗೆದುಕೊಂಡು ಕಲಿತಿದ್ದರು. ಇವನಿಗೂ ಬರಹೇಳಿದ್ದರಲ್ಲಿ ಆಶ್ಚರ್ಯ ಏನು? ಅದಕ್ಕೇ ಹೋದನಪ್ಪ" ಎಂದಳು. ಉಮಾಪತಿಗೆ ಚೇಳು ಕಡಿದಂತಾಯಿತು.

"ಇನ್ನು ನಾವು ಹೊರಡ್ತೇವೆ, ಗೌರಕ್ಕ" ಎಂದು ಹೊರಡಲನುವಾದ. ಮಾಲಿನಿ ಬಂಡಿ ಹತ್ತಿದಳು. ಊರಿನ ಹೆಣ್ಣುಮಕ್ಕಳೆಲ್ಲಾ ಮಾಲಿನಿಯನ್ನು ಕಳುಹಿಸಲು ಬಂದಿದ್ದರು ಎಲ್ಲರೂ ಏನನ್ನೋ ಪ್ರಾಸಂಗಿಕವಾಗಿ ಹೇಳಿದರು. ಎಲ್ಲರಿಗೂ ಅವಳ ಕಣ್ಣೀರಿನ ಧಾರೆಯಿಂದ ಒಂದೆರಡು ಮಾತುಗಳನ್ನು ಹೇಳುತ್ತಿದ್ದಳು.

ಹರಿಹರದ ಮಾರ್ಗವಾಗಿ ಬಂಡಿ ಹೊನಳ್ಳಿಗೆ ಹೊರಟಿತು. ತನ್ನ ಊರಿನಲ್ಲಿ ಬಂದರೂ ಆಕೆ ಮನೆಗೆ ಹೋಗುವಂತಿಲ್ಲ ಮನೆಯವರ ಸಂಗಡ ಒಂದೆರಡು ಸಿಹಿ ಮಾತುಗಳನ್ನಾಡುವಂತಿಲ್ಲ. ತನ್ನ ಹದಿನಾಲ್ಕು ವರ್ಷದ ಜೀವನವನ್ನು ಆ ಮನೆಯಲ್ಲಿ ಕಳೆದಿದ್ದಾಳೆ. ಆದರೇನು? ಈಗ ಆಕೆ ಮನೆಯವರ ಮುಖಾವಲೋಕನ ಮಾಡುವಂತಿಲ್ಲ. ತನಗೊಂದು ಮಂಗಲ ಮಾಂಗಲ್ಯ ಕಟ್ಟಿ ಎಲ್ಲಾ ಹಕ್ಕುಗಳನ್ನು ಪಕ್ಕದಲ್ಲಿ ಕುಳಿತಿರುವ ವ್ಯಕ್ತಿ ಕಸಿದುಕೊಂಡು ಬಿಟ್ಟಿದ್ದಾನೆ. ಏನು ವಿಚಿತ್ರ ಪ್ರಪಂಚ? ಎಂದು ಪಕ್ಕದಲ್ಲಿ ತೂಕಡಿಸುತ್ತ ಕುಳಿತಿದ್ದ ಗಂಡನನ್ನು ನೋಡಿ, "ಸರಿಯಾಗಿ ಮಲಗಿಕೊಳ್ಳಿರಿ. ದಡಕು ಬಹಳ ಇವೆ" ಎಂದು ಎಚ್ಚರಿಸಿದಳು.

"ಮಾಲನಿ, ನಿನ್ನ ತೊಡೆಯ ಮೇಲೆ ಮಲಗುವ ಹಾಗಾಗುತ್ತೆ"

"ಅಗತ್ಯ ಮಲಗಿರಿ ...ಬೇಡಾಂದೆನೆ" ಎಂದಕೂಡಲೆ ತೂಕಡಿಸುವವರಿಗೆ ಹಾಸಿಗೆ ಹಾಸಿಕೊಟ್ಟ ಹಾಗಾಯಿತು.

ಬಂಡಿ ಹರಿಹರ ಬಿಟ್ಟಿತ್ತು. ತಾನಿನ್ನು ತೌರುಮನೆಯನ್ನು ಕಾಣಲಾರನೇ ಎಂದು ಪ್ರಶ್ನಿಸಿತು ಒಂದು ಮನ

"ಇಲ್ಲ" ಎಂದಿತು ಇನ್ನೊಂದು ಮನ

"ಏಕೆ?"

"ನೀನು ಇನ್ನೊಬ್ಬರ ಅಡಿಯಾಳಲ್ಲವೆ?"

"ಹೌದು, ಆದರೆ ಹೆಂಡತಿಗೆ ಅರ್ಧಾಂಗಿ ಎನ್ನುತ್ತಾರಲ್ಲಾ"

"ಅದೂ ಹೌದು, ಅದು ಪುಸ್ತಕದ ಬದನೆಕಾಯಿ. ಹೆಂಗಸು ಲಗ್ನವಾದ ಕೂಡಲೆ ಪೂರ್ಣ ವ್ಯಕ್ತಿಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾಳೆ. ಗಂಡನ ಚರಣದಾಸಿ ಅವಳು."

"ನಾನು ಚರಣದಾಸಿ ಅಲ್ಲವೆಂದನೆ?"

"ಹಾಗಲ್ಲ ಅರ್ಥ. ಅವನ ಅಭೀಷ್ಟದಂತೆ ನಡೆಯಬೇಕು. ಅವನು

ನಿನ್ನ ಮೇಲೆ ಪೂರ್ಣ ಹಕ್ಕನ್ನು ಪಡೆದಿದಾನೆ. ನಿನ್ನನ್ನು ಬಿಟ್ಟು ಬೇರೆಯ ವರೊಡನೆ ಲಗ್ನವಾಗಬಹುದು. ತನಗೆ ಬೇಕಾದರೆ ವೇಶ್ಯೆಯರೊಡನೆ ಪ್ರಣಯಸಂಬಂಧವಿಡಬಹುದು ಅವನು ಅಸ್ವಾತಂತ್ರ್ಯ ಮನುಷ್ಯನಲ್ಲ."

"ನಿಜ. ಎಲ್ಲವೂ ನಿಜ ಆದರೆ ಹೆಂಗಸಿಗೆ ಪತಿವ್ರತಾ ಧರ್ಮ ವಿರುವಂತೆ ಅವನಿಗೂ ಒಂದು ಧರ್ಮವಿದೆ."

"ಯಾವ ಧರ್ಮ, ಏನು ಮಾತು?" ಎಂದು ಪ್ರಶ್ನಿಸಿತು ಇನ್ನೊಂದು ಆಂತರಿಕವಾಣಿ.

"ಏಕಪತ್ನೀವ್ರತ"

"ಇಲ್ಲ, ಈಗದು ನಶಿಸಿ ಹೋಗಿದೆ"

ಕವಿಶ್ರೇಷ್ಠ ಪರಮಪೂಜನೀಯ 'ವಾಗೀಶ'ರ ಉದ್ಬೋಧಕ ಭಾವ ಗೀತೆಯೊಂದು ನೆನಪಿಗೆ ಬಂದು ಮಾಲಿನಿ ಮೆಲು ಧ್ವನಿಯಲ್ಲಿ ಅದನ್ನು ಪಿಸುಗುಟ್ಟಿದಳು.

ಬೇಕಂತೆ ನಾರಿಯೊಳು ಏಕಪತಿ ಸೇವೆಯದು
ಏಕಪತ್ನೀ ವ್ರತವು ಪತಿಗಿಲ್ಲವೆ?
ಬೇಕು ಬೇಕಾದಂತೆ ಕೇಕೆ ಹೊಡೆದಾಡುತಿರೆ
ಕಾಕು ಮಾರ್ಗವು ತಾ ವಿವೇಕಿಯಹುದೇ?

ಉಮಾಪತಿಗೆ ಆ ದುಡುಕಿನಿಂದ ನಿದ್ದೆ ಹತ್ತಲಿಲ್ಲ. ಮಾಲಿನಿ ಏನನ್ನೋ ಹೇಳುತ್ತಿದ್ದಳು. "ಏನೇ ಅದು ಪತಿಗಿತಿ ಹಚ್ಚಿ ಬಿಟ್ಟಿದಿಯಲ್ಲೇ. ಓಹೋ, ದೊಡ್ಡಟ್ಟಿ ಬಂದೇ ಬಿಟ್ಟಿತು ಆಗಲೆ"

"ಹೂ ದೊಡ್ಡಟ್ಟಿ ಬಂತ್ಸಾಮಿ. ಚಾ ವಾ ಕುಡ್ಕೊಂಡು ಬರಾನಾ?" ಎಂದು ಬಂಡಿ ಹೊಡೆಯುತ್ತಿದ್ದ ಬೀರಪ್ಪ ಹೇಳಿದ.

"ನಿಲ್ಲೇ, ಚಹ ಕುಡ್ಕೊಂಡು ಬರ್ತೆವೆ" ಎಂದು ಇಬ್ಬರೂ ಹೊರಟು ಹೋದರು. ಮಾಲಿನಿಯ ಮನಸ್ಸೆಲ್ಲಾ ಊರಕಡೆ ಹರಿಯುತ್ತಿತ್ತು. ತಾನು ಇನ್ನೊಂದು ಬಾರಿಯಾದರೂ ತೌರು ಮುಖ ನೋಡಲಾರೆನೆಂದು ಮನಸ್ಸು ಮಾರ್ದನಿಗೊಡುತ್ತಿತ್ತು. ಪುನಃ ಇಬ್ಬರೂ ಬಂದರು. ಉಮಾಪತಿಯ ಕೈಯಲ್ಲಿ ಖಾರದ ಪೊಟ್ಟಣವಿತ್ತು. ಇನ್ನೊಂದು ಕೈಯಲ್ಲಿ ನೀರಿನ ತಂಬಿಗೆ

"ಮಾಲಿನಿ, ಖಾರ ಕೊಳ್ಳೆ. ಹೊಟ್ಟೆ ಹಸಿದಿದೆಯಾ?"

"ಉಹೂ, ಹೋಳಗಿ ಸೀಕರಣೆ ಉಂಡು ಹೇಗೆ ಹಸಿಯುತ್ತೆ ಇಷ್ಟು ಬೇಗ?"

"ಇರಲಿ ತಿನ್ನು"

"ಉಹೂ, ಊರಿನಲ್ಲಿ ತಿನ್ನೋಣ ಬಿಡಿ. ಯಾಕೆಂದರೆ ಹಸಿವಿಲ್ಲ"

"ಇವನ್ನು ನೀ ತಿನ್ನು. ಇನ್ನೊಂದಿಷ್ಟು ಕಟ್ಟಿಸಿಕೊಂಡು ಬರುವೆ. ಹೋದಕೂಡಲೆ ಚಹ ಮಾಡಿ ಎಲ್ಲರೂ ತಿನ್ನೋಣಂತೆ" ಎಂದು ಇನ್ನೂ ಹೆಚ್ಚಾಗಿ ಖಾರ ಕಟ್ಟಿಸಿಕೊಂಡು ಬಂದ. ಪಾಲನಿ ಒಂದೆರಡು ಕಾಳು ಬಾಯಲ್ಲಿ ಹಾಕಿಕೊಂಡು, ಕೈತೊಳೆದು ನೀರು ಕುಡಿದಳು.

"ಏನು ನಿಮ್ಮಂಪ ಮನೆ ನೆನಪು ಬಂತೇ?"

"ತೌರುಮನೆಯ ನೆನಪು ನೀವಿರಬೇಕಾದರೆ ಯಾಕೆ ಬರುತ್ತೆ?" ಎಂದು ಔಪಚಾರಿಕನಾಗಿ ನುಡಿದಳು.

"ಅದು ಎಲ್ಲ ಹೆಣ್ಣುಮಕ್ಕಳಿಗೆ ಬರೋದು ಸಹಜ ಸ್ವಾಮಿ" ಎಂದ ಬೀರಪ್ಪ.

"ಅದನ್ನು ತಡಯುವುದು, ಅದೂ ಗಂಡನ ಆಜ್ಞಾ ಪ್ರಕಾರ ತಡೆಗಟ್ಟುವುದು ಹೆಣ್ಣಿನ ಆದ್ಯಕರ್ತವ್ಯ" ಎಂದು ಉಮಾಪತಿಯು ಸವಾಲು.

"ದೇವ್ರು ಹೇಳಿದ ಮಾತು ಸ್ವಾಮಿ ನಿಮ್ಮದು" ಎಂದು ಬೀರಪ್ಪನ ಪುಷ್ಟಿ ಕೊಡುವ ಮಾತು.

"ಜಾತ್ರೆ ಇವೊತ್ತಿಗೆ ಬಹಳ ಕೂಡಿರಬೇಕು."

"ಏನು ಎಷ್ಟು ಕೂಡಿದರೂ ಹಳ್ಳೀ ಜಾತ್ರಿ ಸಣ್ಣದೇ, ಸ್ವಾಮಿ."

"ನಾಟಕ ಬಂದಿರಬೇಕು, ಹೌದೇ ?"

"ಹೂ, ಅದೆಂಥಾದೊ ಬಂದೈತಿ. ಚಲೋ ಆದ್ತಾರೆ."

"ಆ ಇವೊ, ಕಲಾ ಪ್ರಕಾಶ ಸಂಗೀತ ನಾಟಕ ಮಂಡಳಿ "

"ಯಾವುದಾದರೂ ನೋಡಿದಿಯೊ ಏನಿಲ್ಲವೊ ?"

"ಒಂದೇ ನೋಡಿರೋದು. ಹೇಮರೆಡ್ಡಿ ಮಲ್ಲಮ್ಮಂದು. ಅವರ ಮನಿಹಾಳಾಗ ಎಷ್ಟು ಉರಿನ್ತಾರೆ ದೇವ್ರು. ಹೆಣ್ಣಾಗಿ ಹುಟ್ಟುಬಾರ್ದು ದೇವ್ರು"

"ಎಲ್ಲರಿಗೂ ಎಲ್ಲಾ ಅತ್ತೆಂದಿರು ತೊಂದರೆ ಕೊಡೋದಿಲ್ಲ ಬೀರಪ್ಪ. ಸುಶೀಲರಾದ ಅತ್ತೆಂದಿರು ಇರೋದಿಲ್ಲವೆ ? ಛೆ ? ಎಂಥಮಾತು ನಿನ್ನದು"

ಎಂದಳು ಮಾಲಿನಿ.

"ಹಂಗೂ ಇರ್ತಾರೆ. ಹಿಂಗೂ ಇರ್ತಾರೆ. ಐದೂ ಬಟ್ಟು ಸಮನಾಗಿ ರ್ತಾವೇನ್ರಿ, ಮಾಲಕ್ಕಾರೆ,"

"ಐದೂ ಬಟ್ಟು ಸಮನಾಗಿದ್ದರೆ ಈ ಪ್ರಪಂಚ ಹೀಗೇಕೆ ಇರ್ತಿತ್ತು" ಎಂದ ಉಮಾಪತಿ.

ಬಂಡಿ ನಿಧಾನವಾಗಿ ಊರು ಸೇರಿತು. ಬಂಡಿಯ ಸಪ್ಪಳ ಕೇಳಿದ ನಾದಿನಿ ನಾಗಮ್ಮ ಸಿದ್ದಮ್ಮನಿಗೆ ಹೇಳಿದಳು, "ಬಂಡಿ ಬಂತೂಂತ ಕಾಣ್ತದೆ,"

"ಹೌದು ನಮ್ಮೆತ್ತಿನ ಸಪ್ಪಳ, ತೌರುಮನೆಯಿಂದ ಬಂದಳು. ಹಹಹ....ಈಗ ನಮ್ಮೆತ್ತಿನ ಸಪ್ಪಳ. ತೌರುಮನೆಯಿಂದ ಬಂದಳು."

ನಾಗಮ್ಮ ನಕ್ಕು ನುಡಿದಳು, "ನಾವು ಬಿಳಿಸನೂರಿನಿಂದ ಹೆಣ್ಣು ತಂದಿರೋದು" ಎಂದು ಅಣ್ಣ ಮತ್ತು ಅತ್ತಿಗೆಗೆ ನೀರುಕೊಟ್ಟಳು.

"ಎಷ್ಟು ದಿವಸ ಹೋಗೋದು ಮಾಲವ್ವ?" ಎಂದು ಅತ್ತೆಯ ಪ್ರಶ್ನೆ.

"ಅವರು ಕರೆಯಲಿಕ್ಕೆ ಬರ್ತಾರೇಂತ ಸುಮ್ಮನಿದ್ದೆ. ಅತ್ತೆ"

"ಅವಂಡೇನು ಹೋದೀತು? ನನ್ನ ಜೀವ ಎಷ್ಟು ದಿನ ದೋಕ ಬೇಕು?"

"ತೌರುಮನೆಗೆ ಹೋಗಿಹ್ವಳು ಬಿಡವ್ವ. ಪಾಪ ಬೇಗ ಬಿಡಬೇಕಲ್ಲ" ಎಂದು ನಾಗಮ್ಮ ಕೊಂಕು ನುಡಿದಳು, ಇನ್ನೂ ಮನೆಯಲ್ಲಿ ಕಾಲಿಡು ತ್ತಿದ್ದಂತೆಯೇ ಟೀಕೆಗಳ ಸುರಿಮಳೆ! ಅದೇನು ಪ್ರಮಾದಮಾಡಿ ಹುಟ್ಟಿ ದೆನೋ ಈ ಹಾಳು ಭೂಮಿಯಲ್ಲಿ ಎಂದೆನ್ನಿಸಿತು ಮಾಲಿನಿಗೆ. ಮಾಲಿನಿ ಈ ಎಲ್ಲ ಯೋಚನೆಯ ಸುಳಿವಿಗೆ ಸಿಕ್ಕಿ ಕ್ಷಣ ಹೊತ್ತು ರಾಹು ಬಡಿದವ ರಂತೆ ಕುಳಿತಿದ್ದಳು.

"ಏನು ಕೂತುಕೊಳ್ಳೋದೆ ಬಂದೀಯೇನು. ಮುಸುರೆ ತಿಕ್ಕೋಳು" ಎಂದು ಅತ್ತೆ ಗರ್ಜಿಸಿದಳು.

"ಬಂಡಿಯಲ್ಲಿ ಬಂದು ಮೈನೋವಾಗಿದೆಯೇನೋ. ಪಾಪ, ಕುಳಿತಿ ದಾಳೆ" ನಾಗಮ್ಮ ಟೀಕಾಸೂಯೆಯ ಹುಂದನಗೆ ಬೀರುತ್ತಾ ಹೇಳಿದಳು. ಅತೆ ನಾದಿನಿ ಮುಸು ಮುಸು ನಗುತ್ತ ಒಳಕ್ಕೆ ಹೋದರು. ಮಾಲಿನಿ

ಮುಸುರಿ ತಿಕ್ಕಿ ನೀರಿಗೆ ಹೋದಳು. ಸೊಂಟದ ಮೇಲಿನ ಕೊಡವನ್ನು ನೋಡಿದ ಸಿದ್ದಮ್ಮ "ಬಾವಿ ನೀರು ಬೇಡ. ಹಳ್ಳದ ನೀರು ತೊಗೊಂಡು ಬಾ. ಹೇಮಗಿರಿ ಬಾವಿ ನೀರು ತಂದಾನೆ" ಎಂದಳು. ಎಲ್ಲಿಂದಲೋ ನೀರನ್ನಂತೂ ತರಬೇಕಾಗಿತ್ತು. ಬಾವಿಯ ಬದಲು ಹಳ್ಳಕ್ಕೆ ಹೋದರಾಯಿತೆಂದು ಮಾಲಿನಿ ಹಳ್ಳದ ದಾರಿ ಹಿಡಿದಳು. ಸಾಲು ಸಾಲಾಗಿ ಹೆಣ್ಣುಮಕ್ಕಳು ನೀರು ಹೊತ್ತುಕೊಂಡು ಬರುತ್ತಿದ್ದರು. ಎದುರಿಗೆ ಮಹಾದೇವಮ್ಮ ಬಂದಳು.

"ಯಾವಾಗ ಬಂದೆ ಮಾಲ ?"

"ಇನ್ನೂ ಈಗ ಒಂದು ಘಂಟೆಯಾಯ್ತು."

"ನೀನು?"

"ನಾನು ಹಬ್ಬಕ್ಕೆ ಬಂದೀನಿ. ಈಗೆಲ್ಲ ಹದಿನೈದು ದಿವಸಾತು."

"ನಾನೂ ಬಂದೆ ತಡೆ. ನೀರು ತುಂಬಿಕೊಂಡು" ಎಂದು ಮೂವತ್ತು ಹೆಜ್ಜೆ ದೂರದಲ್ಲಿದ್ದ ಹಳ್ಳಕ್ಕೆ ಹೋಗಿ ನೀರು ತುಂಬಿಕೊಂಡು" ಬಂದು "ನಡೆಯಕ್ಕ, ಹೋಗೋಣ" ಎಂದಳು.

ಈಗ ಮೂರು ವರ್ಷಗಳಲ್ಲಿ ಹೊಸಳ್ಳಿಯಲ್ಲಿದ್ದ ಹೆಣ್ಣುಮಕ್ಕಳೆಲ್ಲಾ ಮಾಲಿನಿಗೆ ಪರಿಚಿತರಾಗಿದ್ದಾರೆ. ಪಂಚಮಿಯ ಹಬ್ಬ, ಊರಿನ ಊರ ದೇವತೆಯ ಹಬ್ಬಕ್ಕೆ ಮನೆಯ ಹೆಣ್ಣು ಮಕ್ಕಳೆಲ್ಲಾ ತೌರುಸೇರಿ ಮನೆ ಬೆಳಗಿಸುತ್ತಾರೆ. ಅವರು ಗಂಡನ ಮನೆಗೆ ಬರುವ ಹೊತ್ತಿಗೆ, ಹೊಸಳ್ಳಿಯ ವನಿತೆಯರೆಲ್ಲಾ ಉಡಿ ತುಂಬಿಸಿಕೊಂಡು ತಮ್ಮ ಗಂಡನ ಮನೆ ಸೇರುತ್ತಾರೆ. ಒಟ್ಟಿನಲ್ಲಿ ಗಂಡನ ಮನೆಗೆ ಹೋಗುವವರೂ ತೌರುಮನೆಗೆ ಹೋಗುವವರೂ ಚಿರಪರಿಚಿತರಾಗಿದ್ದಾರೆ ಮಾಲಿನಿಗೆ. ಈಗ ಮಹಾದೇವಮ್ಮ ಊರ ದೇವತೆಯ ಹಬ್ಬಕ್ಕೆಂದು ಹೊಸಳ್ಳಿಗೆ ಬಂದಿದ್ದಾಳೆ. ಗಂಡನ ಮನೆಗೆ ಹೋಗಿ ಸರಿಯಾಗಿ ಎರಡು ತಿಂಗಳು ತುಂಬಿಲ್ಲ, ಆಗಲೆ, ತೌರುಮನೆಗೆ ಬಂದಿದ್ದಾಳೆ.—ತಾನು ಮಾತ್ರ ಯಾರು ಬಂದರೇನು ಬಿಟ್ಟರೇನು ಹೀಗೆಯೇ ಇರಬೇಕು! ಮಹಾದೇವಮ್ಮ ಮಾತು ತೆಗೆದಳು:

"ನೀನು ತೌರು ಮನೆಗೆ ಹೋಗಿದ್ದಿಲ್ಲಂತೆ."

"ಇಲ್ಲ. ಬಿಳಿಸನೂರಿಗೆ ಹೋಗಿದ್ದೆ. ಬಿಳಿಸನೂರಿನಲ್ಲಿ ನಮ್ಮ ತಂದೆಯ ಗೊತ್ತಿನವರು ತುಂಬ ಜನ."

"ಯಾಕಾಗಿ ನಿನ್ನನ್ನು ತೌರುಮನೆಗೆ ಕಳಿಸಲೊಲ್ಲರೂಂತ."

"ನಮ್ಮ ದೊಡ್ಡಪ್ಪನ ಮಗ ಇದಾನೆ ಬಸವರಾಜ ಎಂತ. ಮುಂಜಿಯೇ ಸರಿಯಾದ ಮುಯ್ಯಿ ಕೊಡಲಿಲ್ಲ ಎಂತ ಮನಸ್ಸು ಕೆಟ್ಟಿತ್ತು. ಅದಕ್ಕೆ ಪುಟಕೊಟ್ಟ ಮಹರಾಯ ಬಸವರಾಜ. ಹೀಗೆ ಉರಿದುರಿದು ಮೊನ್ನೆ ಸತ್ತನಂತೆ."

"ಹಂಗೆ ಉರಿಯೋರು ಬಹಳ ದಿನ ಇರೋದಿಲ್ಲ ಮಾಲ"

"ಮಹಾದೇವಿ, ನೀವು ಪುಣ್ಯವಂತರು ನೋಡೆ".

"ಯಾಕೆ?"

"ಸುಸೂತ್ರವಾಗಿ ತೌರುಮನೆಗೆ ಬರುತ್ತೀರಿ."

"ಅದೊಂದನ್ನು ದೇವರು ಮಾಡಿಕೊಟ್ಟಾನೆ. ನಿನ್ನ ನೋಡಿದರೆ ಅಳು ಬರುತ್ತದೆ"

"ಕೊಡಪಾನ ಕಾಯುತ್ತಾ ಇದೆ. ಜೊತೆಗೆ ಮರಳು ನುಡುತ್ತಾ ಇದೆ."

"ನಾನು ಹೋಗ್ತೀನೆ, ಮಾಲಿನಿದೇವಿಯವರೆ. ಆಮೇಲೆ ಕಾಣ್ತೀಯಲ್ಲ" ಎಂದು ಮುಗುಳ್ನಕ್ಕು ಮಹಾದೇವಿ ಹೊರಟುಹೋದಳು.

"ಇಬ್ಬದ್ದಿ. ಸಾಕಾಗುವವರೆವಿಗೆ ಮಾತಾಡೋದು" ಎಂದು ಒಳಕ್ಕೆ ಮಾಲಿನಿ ಕಾಲಿಡುತ್ತಿದ್ದಂತೆ, "ಎಷ್ಟು ಹೊತ್ತೇ ಹೋಗೋದು ನೀರಿಗೆ. ಆ ಸುಟ್ಟ ಮಾದೇವಿ ಬಂದಿದ್ದಳೇ ತೊನ್ನುಬಡಕಿ. ಆಕೆ ಹತ್ತಿರ ಮುಟ್ಟಿಸಿಕೊಂಡು ಹಗರಣ ಮಾಡ್ತಾ ಒಂದು ಕೊಡ ನೀರು ಇಷ್ಟುಹೊತ್ತಿಗೆ ತಂದರೆ, ನೀನು ಬಾಳು ಹೇಗೆ ಮಾಡಿಕೊಂಡು ಹೋಗುತ್ತೀಯಾಂತ. ಆ ತೊನ್ನುಬಡಕಿ ಮುಟ್ಟಿದ ನೀರು ಬೇಡ" ಎಂದು ಮಾಲಿನಿಯ ತಲೆಯ ಮೇಲಿದ್ದ ಕೊಡ ಸೆಳೆದು ಬಾಗಿಲಿನಲ್ಲಿ ಸುರುವಿದಳು ಸಿದ್ದಮ್ಮ.

"ಇಲ್ಲ ಅತ್ತೆ. ನಾನೊಬ್ಬಳೆ ಹೊತ್ತುಕೊಂಡು ಬಂದೆ."

"ನೀನೊಬ್ಬಳೆ ಹೆಂಗೆ ಇಂಥ ದೊಡ್ಡ ಕೊಡವಾನ ಎತ್ತಿಟ್ಟುಕೊಂಡೆ. ಅದೂ ತಲೆಯಮೇಲೆ" ಎಂದು ಉಮಾಪತಿ ನಗುತ್ತಾ ಹೇಳಿದ. ಮಾಲಿನಿ ಮಾತಾಡಲಿಲ್ಲ. ಕಣ್ಣೀರು ಸುರಿಸುತ್ತಾ ಅಡಿಗೆ ಮನೆಗೆ ಹೋದಳು. ಮುಖ ಬಾಡಿದ ಹೂವಿನಂತಾಗಿತ್ತು. ಬಾಗಿಲಿನಲ್ಲಿ ಹರಿದುಹೋದ ನೀರನ್ನು ನಾಯಿಯೊಂದು ನೆಕ್ಕುತ್ತಿತ್ತು.

"ಊಟಕ್ಕೆ ಹಾಕ್ರಿ ಮಾಲಿನಿ ದಣಿದಿದಾಳೆ" ನಾಗವ್ವ ಎಂದಳು.

"ಮನೆಗೆ ನಾಯಿ ಬಂದ ಹಾಗೆ ಬಂದು ಗಂಟು ಬಿದ್ದಾಳೆ, ಒಂದು ತುತ್ತು ಹಾಕದಿದ್ದರೆ...."

ಊಟ ಮಾಡುತ್ತಿದ್ದ ಹೇಮಗಿರಿ ನೀರು ಕುಡಿದು ಹೇಳಿದ.

"ಅವರಣ್ಣ ಪದ್ಯ ಬರೀತಾನೆ—ಕವಿ" ಇಷ್ಟರಲ್ಲೇ ಕವನ ಸಂಗ್ರಹದ ಪುಸ್ತಕ ಬರುತ್ತದೆ. ಅಂತಹವರ ತಂಗಿ ನಾಯಿ ಹೇಗಾದಾಳು. ಮನೆಗೆ ಬಂದ ಭಾಗ್ಯದ ಲಕ್ಷ್ಮಿ....ಹ ಹ ಹ!"

"ಹೌದೌದು, ನಾಯಿಯ ಹೆಸರು ಲಕ್ಷ್ಮಿ" ಎಂದು ಅವಳತ್ತೆ ತನ್ನ ಮೂವತ್ತೆರಡು ಹಲ್ಲುಗಳನ್ನು ಕಿರಿದು ಹೇಳಿದಳು. ಹೊರಗೆ ಹೋಗಿದ್ದ ಉಮಾಪತಿ ಅವಸರದಲ್ಲಿ ಒಳಕ್ಕೆ ಬಂದು "ಅವ್ವಾ ಅವ್ವಾ" ಎಂದ.

"ಏನೋ ಉಮಾಪತಿ, ಎಲ್ಲಿಗೆ ಹೋಗಿದ್ದೆ. ಹೊತ್ತಾಯ್ತು, ಉಣ್ಣಬಾರದೆ?" ಎಂದಳು.

"ಅವ್ವಾ ಇವೊತ್ತು ನಾಟಕಕ್ಕೆ ಹೋಗೋಣ "

"ಇವೊತ್ತು ಯಾವುದಿದೆಯಣ್ಣ. ನಾನಂತೂ ನೋಡಲೇಬೇಕು" ಎಂದಳು ನಾಗಮ್ಮ.

"ವನಿತಾಜ್ವಾಲೆ ಎಂತ"

"ಹಾಗಾದರೆ ಹೋಗೋಣಂತಣ್ಣ"

"ಹೂ ಹೂ, ಈಗಲೇ ಹೋಗಿರೆ, ನಾಗು. ರಾತ್ರಿಯಾದ್ರೂ ಆಗ ಬೇಡ್ವೆ?" ಎಂದಳು ಸಿದ್ದಮ್ಮ. ನಾಗಮ್ಮ ತೆಪ್ಪಗಾಗಬೇಕಾಯಿತು.

ರಾತ್ರಿ ಉಮಾಪತಿ ಮನೆಯವರೆಲ್ಲರನ್ನೂ ಕರೆದುಕೊಂಡು ನಾಟಕಕ್ಕೆ ಹೋದ. ನುರಿತ ರಂಗನಟರಿಂದ ಅದು ಅಭ್ಯಾಸ ಮಾಡಲ್ಪಟ್ಟಿತ್ತು. ನಾಟಕ ಪ್ರಾರಂಭವಾಯಿತು.

ರೂಪಕ ವಾಸ್ತವಿಕವಾಗಿ ಜ್ವಾಲೆಯಾಗಿಯೇ ಪರಿಣಮಿಸಿತು, ನಾಟಕದ ನಾಯಕಿ ಮೃಣಾಲಿನಿ ದುರಂತ ಜೀವಿ. ಅವಳ ಉಸಿರು, ನೋವು ಜ್ವಾಲಾಮುಖಿಯಂತೆ ಹೊರಡುತ್ತಿತ್ತು. ಅವಳ ನೋವು ಎಲ್ಲರಿಗೂ ಅನುಕಂಪ ಹುಟ್ಟಿಸುತ್ತಿತ್ತು. ಆಕೆಯ ಹುಚ್ಚನ್ನು ನೋಡಿದ ಅತ್ತೆ ಮಾವಂದಿರು ಬಾವಿಯಲ್ಲಿ ಹಿಡಿದು ನೂಕಿದಾಗ ಮಾಲಿನಿಯ ಕಣ್ಣೀರು ಬುಗ್ಗೆಯಾಗಿ ಬಂದಿತು. ಬಿಕ್ಕಿ ಬಿಕ್ಕಿ ಅಳಹತ್ತಿದಳು. ಸಿದ್ದಮ್ಮ

ಏರಿದ ಧ್ವನಿಯಲ್ಲಿ ಬೆದರಿಸಿದಳು :

"ಏನಾಗೈತೇ ನಿನಗೆ ಹೊತ್ಕೊಂಡು ಹೊಗೋ ಬೇನೆ. ಬಾಳಾ ಗಯ್ಯಾಳಿ ಹೆಂಗಸರು ಈಗಿನವರು." ಮಾಲಿನಿಗೆ ಉದ್ರೇಕ ಹುಟ್ಟಿತು. ಆದರೂ ಅದನ್ನು ಪತ್ತಿಕ್ಕಿಕೊಂಡು ಆಕೆ ಕುಳಿತಳು. ನಾಟಕದ ಐದನೇ ದೃಶ್ಯ ಅಂತ್ಯವಾಗುವುದಕ್ಕಿಂತ ಪ್ರಥಮ, ನಾಟಕದ ಒಡೆಯರು ರಂಗ ಮಂಟಪದಲ್ಲಿ ಬಂದು ನಿಂತುಕೊಂಡು ಹೇಳಿದರು: "ಕಲಾಪ್ರಕಾಶ ನಾಟಕ ಮಂಡಳಿಯ ಆಶ್ರಯದಲ್ಲಿ ಸುಪ್ರಸಿದ್ಧ ನಾಟಕಕಾರ ಶ್ರೀ ಶಿವಕುಮಾರರಿಂದ 'ವನಿತಾ ಜ್ವಾಲೆ'ಯನ್ನು ನಮ್ಮ ನಾಟಕದ ಮೊದಲ ಪ್ರಯೋಗವಾಗಿ ಅಭಿನಯಿಸಿದೆವು. ಒಂದು ಹೆಣ್ಣಿನ ಮೇಲೆ ನಡೆದ ಪಾತಕದ ಮನೋ ಪ್ರವೃತ್ತಿಯನ್ನು ಅವರ ಬಗೆಗಿದ ಪ್ರೆ ರಚಿಸಿ ಕನ್ನಡ ನಾಟಕ ಪ್ರಪಂಚದಲ್ಲಿ ಹೊಸ ಹಾದಿ ತುಳಿದಿದ್ದಾರೆ. ಅವರಿಗೆ ನಾವೂ ಕನ್ನಡಾಭಿಮಾನಿಗಳೂ ಅನಂತಾನಂತ ಧನ್ಯವಾದಗಳನ್ನರ್ಪಿಸಿ, ಈ ಹೂಮಾಲೆಗಳನ್ನು ಅರ್ಪಿಸುತ್ತೇವೆ. ಅಲ್ಲದೆ ತಮ್ಮ ಅಸ್ತ್ಯಪ್ತಿಯನ್ನು ಕೃಪೆಮಾಡಿ ಒಪ್ಪಿದ್ದಕ್ಕಾಗಿ ನಮ್ಮ ನಾಟಕದ ನಟಿಯರೂ ಅವರ ಪರವಾಗಿ ಇನ್ನೊಂದು ಮಾಲೆಯನ್ನು ಅರ್ಪಿಸುತ್ತಾರೆ."

ಶಿವಕುಮಾರ ಬಂದು ನಾಟಕದ ಒಡೆಯರಿಂದ ಮಾಲೆಯನ್ನು ಹಾಕಿಸಿಕೊಂಡರು. ಇನ್ನೊಂದು ಮಾಲೆಯನ್ನು ಇನ್ನೊಬ್ಬರು ಹಾಕಿದರು. ನಾಟಕದ ಮಂದಿಯಲ್ಲಾ ಕರತಾಡನದ ಶಬ್ದ ಮೊಳಗಿತು. ಶಿವಕುಮಾರ ಸಮಾರೋಪ ಭಾಷಣ ಮಾಡಿದರು.

'ವನಿತಾಜ್ವಾಲೆ'ಯನ್ನು ಬರೆದವನು ಶಿವಕುಮಾರ ಎಂದಿಷ್ಟು ಮಾತ್ರ ಉಮಾಪತಿಗೆ ಗೊತ್ತಿತ್ತು. ಆದರೆ ಸ್ವಯಂ ಅವನೇ ಬಂದಿರುವನೆಂದು ಅವನಿಗೆ ಗೊತ್ತಿರಲಿಲ್ಲ. ಅದು ತಿಳಿದೊಡನೆಯೇ ಅವನು ಕಾಲಿಗೆ ಬುದ್ಧಿ ಹೇಳಿದ.

ಶಿವಕುಮಾರರು ಸಮಾರೋಪ ಭಾಷಣ ಮಾಡುತ್ತಲೇ ಚಪ್ಪಾಳೆಗಳ ಸುರಿಮಳೆ ಬಿದ್ದವು. ಕಾಲು ಘಂಟೆಯಲ್ಲಿ ನಾಟಕ ಪೂರ್ಣಗೊಂಡು ಬಿಟ್ಟಿತು. ಎಲ್ಲರೂ ಹೊರಟರು.

# ೨೬

ಡಾಕ್ಟರ್ ಚಂಪಕಭಾನುರು ಬಸವರಾಜನನ್ನು ಹೊತ್ತುಹಾಕಿದರೇನೋ ನಿಜ. ಆದರೆ ಆ ಉರಿತದ ಕಾರಣವನ್ನು ಅವರು ಹೇಳಲಿಲ್ಲ. ಈ ರೀತಿ ಸುಲಭವಾಗಿ ಕಂಡು ಹಿಡಿಯಬಹುದೆಂದು ಅವರೆಂದೂ ಎಣಿಸಿರಲಿಲ್ಲ. ಆ ದಿನ ಅಲ್ಲಿಯೇ ಮಲಗಲು ಹೇಳಿದ್ದು ಬಹಳ ಅನುಕೂಲವಾಯಿತೆಂದು ಡಾಕ್ಟರರು ಸಂತೋಷಪಟ್ಟುಕೊಂಡರು. ಆದಷ್ಟುಮಟ್ಟಿಗೆ ಸರಿಯಾದ ಮಾನಸಿಕರೋಗ ಚಿಕಿತ್ಸಕರ ಬಳಿ ಕಳುಹಿಸಬೇಕೆಂದೂ ಅವರು ನಿರ್ಧರಿಸಿದ್ದರು.

ಆ ಘಟನೆ ನಡೆದ ಮಾರನೆಯ ದಿನ ಅವನಾಗಲಿ ಅವನ ಕಡೆಯವರಾಗಲೀ ಇವರ ಬಳಿ ಸುಳಿಯಲಿಲ್ಲ. ಅವರ ಬದಲು ಕಾಗದ ಒಂದು ಬಂದು ನಕಲವೂ ವೈದ್ಯರಿಗೆ ಅಭಿಪ್ರಾಯವಾಯಿತು. ಇದರಿಂದ ಗುರುಮೂರ್ತಿಯ ಕಾಯಿಲೆಗೆ ಉಗಮಸ್ಥಾನವಾದ ಕಾರಣವೂ ಗೊತ್ತಾಯಿತು. ಕಾಗದ ಮುಟ್ಟಿದ ಕೂಡಲೇ ಡಾಕ್ಟರರು ಶಿವಣ್ಣಯ್ಯನವರ ಮನೆಗೆ ಹೋದರು. ಮನೆಯಲ್ಲಿ ಎಲ್ಲರೂ ಇದ್ದರು.

"ಬನ್ನಿ ಡಾಕ್ಟರ್! ನನಗೆ ಆ ಉರಿಯೂ ಕೂಡ ಕಡಮೆಯಾಯ್ತು. ತಲೆಯ ಮೇಲೆ ಕಲ್ಲುಗಳನ್ನು ಯಾರೋ ತೆಗೆದು ಬೀಸಿ ಹಾಕಿದ ಹಾಗಾಯ್ತು."

"ಒಳ್ಳೆಯದು ಗುರುಮೂರ್ತಿ, ಕೆಲವು ವಸ್ತುಗಳನ್ನು ಬಿಟ್ಟು ಸುಮಾರಾಗಿ ಎಲ್ಲಾ ಪದಾರ್ಥಗಳನ್ನೂ ತೆಗೆದುಕೊ. ಗುಣವಾಗುತ್ತೆ, ಹೆದರಬೇಡಿ. ನಾನು ನಿಮಗೆ ಒಂದು ವಿಚಾರವನ್ನು ತಿಳಿಸಲಿಕ್ಕೆಂದು ಬಂದೆ."

"ಎಂತಹ ಗುಟ್ಟಿನದಾಗಿದ್ದರೂ ತಿಳಿಸಿ, ಅದಕ್ಕೇನು" ಎಂದರು ಶಿವಣ್ಣಯ್ಯ.

"ವಿಷಯ ಗುಟ್ಟಿನದೇನೋ ನಿಜ. ಆದರೆ ಇಂತಹ ಗುಟ್ಟುಗಳನ್ನು ಕೆಚ್ಚೆದೆಯಿಂದ ಹೇಳಿ ಪ್ರಕಾಶಪಡಿಸುವುದರಲ್ಲಿ ಅರ್ಥವಿದೆ."

"ಹೇಳಿ ಸಾರ್, ಅದಕ್ಕೇನು?" ರೇಣುಕಪ್ರಸಾದ ನಡುವೆ ಬಾಯಿ ಹಾಕಿದ.

"ಪೋಸ್ಟ್‌ಮಾಡಿದ ಕಾಗದ ಒಂದು ನನಗೆ ಬಂತು. ಅದು ಈ ಹಿಂದೆ ತೀರಿಹೋದ ಬಸವರಾಜನು ಬರೆದದ್ದು. ಅವನು ಅದಕ್ಕಿಂತ ಮುಂಚೆ ತನ್ನ ರೋಗದ ಚಿಕಿತ್ಸೆಗಾಗಿ ಬರುತ್ತಿದ್ದ. ಮೂರು ನಾಲ್ಕು ಸಾರಿ ಚಿಕಿತ್ಸೆಮಾಡಿ ನೋಡಿದೆ. ಆದರೂ ಆ ಘೋರವಾದ ಉರಿ ಶಮನ ವಾಗಲಿಲ್ಲ "

"ಹೂಂ, ಹೇಳಿ ಹೇಳಿ" ತಲೆಯಲ್ಲಾಡಿಸಿದರು ಶಿವಣ್ಣಯ್ಯ.

"ನಾನು ಅನೇಕ ಪುಸ್ತಕಗಳನ್ನು ತಿರುವಿಹಾಕಿದೆ. ಆದರೆ ಏನೊಂದೂ ಗೊತ್ತಾಗಲಿಲ್ಲ ಒಂದು ಪುಡಿಯನ್ನು, ಗುಳಿಗೆಯನ್ನೂ ಕೊಟ್ಟಕೂಡಲೆ ಅದು ಕಮ್ಮಿಯಾಗುತ್ತಿತ್ತು. ಆದರೆ ಮತ್ತೆ ಬರೋದು ಬಿಡುತ್ತಿದ್ದಲ್ಲ ಒಂದು ದಿನ ರಾತ್ರಿ ಪುನಃ ಉರಿತ ಬಂದಿದೆ ಎಂತ ಬಂದ. ನಾನು ಅದೇ ಪುಡಿಕೊಟ್ಟೆ. ಸ್ವಲ್ಪ ಹೊತ್ತಾದನಂತರ ಕಮ್ಮಿ ಯಾಯಿತು. ಅವತ್ತು ಅವನಿಗೆ ಅಲ್ಲೇ ಮಲಗಲು ಹೇಳಿದೆ. ರಾತ್ರಿ ನಾನು ಹೊರಗೆ ಬಂದಾಗ ಅವನು ಮಲಗಿಕೊಂಡಿದ್ದ. ಹಾಸುಗೆಯ ಹತ್ತಿರ ಹೋದೆ. ಏನೇನೊ ಕನವರಿಸುತ್ತಿದ್ದ. ಕೇಳಿ ನನಗೆ ಹೀಗೆನ್ನಿ ಸಿತು· ಇವನು ಯಾವುದೋ ವಿಷಯ ಮನಸ್ಸಿಗೆ ಹಚ್ಚಿಕೊಂಡು ಆ ರೀತಿ ಆಗಿರಬಹುದೂಂತ. ನನ್ನ ಕೈಯಿಂದ ಇಂಥ ಮಾನಸಿಕ ರೋಗದವ ರನ್ನು ಗುಣ ಮಾಡಲಿಕ್ಕೆ ಅಶಕ್ಯ ಎಂದು ಹೇಳಿ ಕಳುಹಿಸಿಬಿಟ್ಟೆ. ಅವನು ಹೋದ ಮಾರನೆಯ ದಿನ ಒಂದು ಕಾಗದ ಬಂತು. ಅದರಲ್ಲಿ ನಿಮಗೆ ಮಾಡಿದ ದುಷ್ಕೃತ್ಯಗಳನ್ನೂ ತಾನೂ ಅದಕ್ಕಾಗಿ ಪಶ್ಚಾತ್ತಾಪಪಟ್ಟುಕೊಂಡಿ ರುವದನ್ನೂ ವಿಶದವಾಗಿ ಬರೆದಿದಾನೆ" ಎಂದು ಅವರ ಮುಖಕ್ಕೆ ಪತ್ರ ಹಿಡಿದರು. ಶಿವಣ್ಣಯ್ಯ ಗಟ್ಟಿಯಾಗಿ ಪತ್ರ ಓದಿದರು. ರೇಣುಕಪ್ರಸಾದ, ಗುರುಮೂರ್ತಿ—ಎಲ್ಲರೂ ಆ ಪತ್ರವನ್ನು ಮೌನದಿಂದ ಕೇಳಿದರು. ಶಿವ ಣ್ಣಯ್ಯ ಪತ್ರ ಓದಿ ಮುಗಿಸಿದ ಮೇಲೆ ವ್ಯಸನದಿಂದ ನುಡಿದರು: "ಮಾಟ ಮಾಡಿಸಿದ್ದಾನೆಂದು ಸಣ್ಣದುರುಗಪ್ಪನೂ ಹೇಳಿದ್ದ. ಅಲ್ಲದೆ, ನೀವೂ ಇದು ಮಾಟದಿಂದ ಹೀಗಾಗಿದೆ ಎಂದು ಬಿಟ್ಟು ಔಷಧ ಕೊಟ್ಟೆರಲ್ಲ."

"ಬಸವರಾಜ ಸತ್ತಿದ್ದಕ್ಕೆ ದುಃಖವಿಲ್ಲ. ಆದರೆ ಅವನ ಹೆಂಡತಿ ಹಾಲಮ್ಮ ಬಹಳ ಒಳ್ಳೆಯವಳು. ಆಕೆಯನ್ನು ನೆನೆಸಿಕೊಂಡರೆ ಬಹಳ ದುಃಖವಾಗುತ್ತದೆ" ಎಂದ ರೇಣುಕ.

"ಇರೋತನಕ ಹಾಲವ್ವ ಒಂದು ದಿನವಾದರೂ ಬಟ್ಟೆಬೇಕು, ಒಡವೆ ಬೇಕು, ಇಂಥ ಊಟಬೇಕು ಎಂದು ಬೇಡಿ ತೆಗೆದುಕೊಳ್ಳಲಿಲ್ಲ" ಎಂದ ಗುರುಮೂರ್ತಿ.

"ಬಹಳ ದುಷ್ಟ ಇದ್ದ, ಡಾಕ್ಟರ್! ಅಂಥವರು ಭೂಮಿಮೇಲೆ ಹುಟ್ಟಬಾರದು" ಎಂದ ರೇಣುಕ.

"ನೋಡಿ ಶಿವಣ್ಣಯ್ಯ, ಆ ಭೂತಪ್ಪ ಏನಾದರೂ ಇದ್ದಿದ್ದರೆ ನಿಮ್ಮ ಗುರುಮೂರ್ತಿ ಉಳಿಯುತ್ತಿದ್ದಿಲ್ಲ"

"ನೀನು ಹೇಳೋದು ನಿಜ ಭೂತಪ್ಪ ಏನಾದರೂ ಮಾಡಿ ಜೀವ ಉಳಿಸುತ್ತಿದ್ದ. ಆದರೆ ಗುರುಮೂರ್ತಿ ಹಣೆಯಬರಹ ಗಟ್ಟಿಯಿರುವಾಗ ಯಾರೇನು ಮಾಡಿದರೂ ಹೇಗೆ ನಡೆಯಬೇಕು" ಗಂಗವ್ವ ನುಡಿದಳು.

"ಪಾಪಿ ಸೂ-ಮಗ ಸತ್ತಿದ್ದೇ ಉತ್ತಮವಾಯಿತು. ಇರುವವರೆವಿಗೆ ನಮಗೆಷ್ಟು ತೊಂದರೆ ಕೊಟ್ಟ. ಇನ್ನೂ ನಮ್ಮ ತಂಗಿ ಮನೆ ನೇರುವಂತಿಲ್ಲ" ಎಂದು ಹಲ್ಲುಗಳನ್ನು ಕಚ್ಚಿ ಮುನಿಸಿನಿಂದ ನುಡಿದ ರೇಣುಕ.

"ಏನೋ ಆಗಿಹೋಯಿತು ಡಾಕ್ಟರ್! ಸುಮ್ಮನೆ ನೆನೆಸಿಕೊಂಡರೆ ಏನು ಪ್ರಯೋಜನ? ಎಲ್ಲಾ ದೇವರಾಟ ಅನ್ನಬೇಕು" ಎಂದ ಗುರುಮೂರ್ತಿ ಎಲ್ಲವೂ ಒಳ್ಳೆಯದಕ್ಕೆಂದು ಹೇಳಿ ವೈದ್ಯರು ಮನೆಗೆ ಹೋದರು.

ಬಸವರಾಜ ಮಾಟದ ತೆಂಗಿನ ಕಾಯಿಯನ್ನು ಹೊರಗೆ ತೆಗೆದು ಹೂಳಿದಂದಿನಿಂದ ಅವನ ತಲೆಯಮೇಲಿನ ಕಲ್ಲು ಉರುಡಿ ಬಿದ್ದಂತಾಯಿತು ಪ್ರತಿಯೊಂದು ರೋಮಗಳನ್ನು ಹಿಡಿದೆಳೆಯುವ ಕಾಣದ ಶಕ್ತಿ ಮಾಯವಾಯಿತು. ನರಗಳನ್ನೂ ಕೊಂಡಿಯಂತೆ ಹಿಡಿದೆಳೆಯುವ ಆಸುರೀಶಕ್ತಿಯೂ ಕೂಡ ಹುದುಗಿತು. ಇಡಿಯ ದಿವಸವೆಲ್ಲಾ "ಹ್ವಾ .ಭೂತಣ್ಣ ಬಸವರಾಜನ ಮಾತು ಕಟ್ಟಿಕೊಂಡು ಮಾಟ ಮಾಡಿಸಿದನೆ? ನಮ್ಮನೆಯ ಗೃಹಕೃತ್ಯದ ಸುಖ ಸಂತೋಷಗಳು ತಮ್ಮನೆಯವೆಂದು ಆಗಾಗ ಹೇಳುತ್ತಿದ್ದ ಭೂತಣ್ಣ, ನನಗೆ ಮಾಟ ಮಾಡಿಸಿದನೆ? ಛೆ! ಪ್ರಪಂಚ. ನೀನು ಉರಿದುಬೀಳು" ಎಂದು ಏನೇನೊ ಅಂದುಕೊಳ್ಳುತ್ತಿದ್ದ.

—ಆದರೆ ಮಧ್ಯರಾತ್ರಿಯ ಹೊತ್ತಿಗೆ ಗುರುಮೂರ್ತಿ "ಭೂತಣ್ಣ

ಭೂತಣ್ಣ! ಹಹ ..ಭೂತಣ್ಣ.... ನನಗೆ ಲಿಂಗಕೊಟ್ಟು ಉಳಿಸಿದ ಭೂತಣ್ಣ! ನನಗೆ ಮಾಟ ಮಾಡಿಸಿವ ಭೂತಣ್ಣ ಹಹಹ...." ಎಂದು ಎದ್ದು ಎದ್ದು ನಿಂತುಕೊಂಡು ಎಚ್ಚರವಿಲ್ಲದೆ ಬಡ ಬಡಿಸಿದ. ಮನೆಯುವರೆಲ್ಲರೂ ಇವನ ಕೂಗಿಗೆ ಎಚ್ಚರವಾದರು. "ಮಲಗಿಕೊ ಗುರುಮೂರ್ತಿ, ಯಾಕೆ ಯಾರು ಬಂದಿದ್ದರು? ಯಾರು ಬಂದಿದ್ದರು? ಯಾಕಾಗಿ ಕನವರಿಸುತ್ತಿದಾನೆ?" ಎನ್ನುತ್ತಾ ಮಲಗಿಸಲು ಹೋದರು ಆದರೆ ಅವನು ಶಿವಣ್ಣಯ್ಯನವರ ಬಾಹು ಬಂಧನವನ್ನು ಬಿಡಿಸಿಕೊಂಡು ಬಾಗಿಲು ತೆಗೆದು ಹೊರಬಿದ್ದ. ಆಗ ಗುರುಮೂರ್ತಿಗೆ ಎಲ್ಲಿತ್ತೊ ಶಕ್ತಿ ಶಿವಣ್ಣಯ್ಯನವರನ್ನು ದಬ್ಬಿ ಹೊಳೆಯತ್ತ ಓಡುತ್ತ ಹೊರಟ ರೇಣುಕ ಪ್ರಸಾದನಿಗೆ ಇದು ಯಾವ ವಿಚಾರವೂ ಗೊತ್ತಿರಲಿಲ್ಲ. ಗುರುಮೂರ್ತಿ ಕನವರಿಸುತ್ತಿದ್ದಾನೆಂದು ಗೊತ್ತಿತ್ತು.

"ಬಾರೋ ರೇಣುಕಾ.." ಎಂಬ ಶಿವಣ್ಣಯ್ಯನವರ ಆರ್ತ ಧ್ವನಿ ಕೇಳಿದ ಕೂಡಲೆ ಅವನು ಅಟ್ಟದಿಂದಿಳಿದು ಅವರ ಬೆಂಗಡೆ ಹೊರಟ. ಮನೆಯಲ್ಲಿ ಹೆಣ್ಣುಮಕ್ಕಳು, ಹೆಂಗಸರು ಕಿರಿಚಿಕೊಳ್ಳುತ್ತಿದ್ದರು. ರೇಣುಕ ಪ್ರಸಾದನ ಮುಂದುಗಡೆ ಶಿವಣ್ಣಯ್ಯ, ಶಿವಣ್ಣಯ್ಯನವರ ಮುಂದೆ ಗುರುಮೂರ್ತಿ -- ಹೀಗೆ ಮೂವರೂ ಹೊಳೆಯತ್ತ ಓಡುತ್ತಿದ್ದರು ಗುರು ಮೂರ್ತಿಗೆ ಎಚ್ಚರವಿರಲಿಲ್ಲ ಇಬ್ಬರೂ ಬೆನ್ನಟ್ಟಿದ್ದರು. ನಡುರಾತ್ರಿಯ ತಂಗಾಳಿ ಸುಯ್ ಎಂದು ಬೀಸುತ್ತಿತ್ತು. ಗುರುಮೂರ್ತಿ ಘಟ್ಟಕ್ಕೆ ಬಂದಿದ್ದ. ಸತತ ಕಾಯಿಲೆಯಿಂದ ನರಳಿದ್ದ ಅವನಿಗೆ, ಇಲ್ಲಿಯವರೆಗೂ ಓಡಿ ಬರುವ ಚೈತನ್ಯ ಹೇಗೆ ಬಂದಿತ್ತೊ!

"ಗುರುಮೂರ್ತಿ! ಗುರು ಬಾರಪ್ಪ, ಇಲ್ಲಿ ನಿಂತಿಕೊ. ಎಲ್ಲಿಗೆ ಹೋಗುತ್ತೀ" ಎಂದು ಕೂಗುತ್ತಿದ್ದಾಗಲೇ ಗುರುಮೂರ್ತಿ ನಡುಮಟ್ಟದ ನೀರಿಗಿಳಿದಿದ್ದ. ಆಗವನಿಗೆ ತಿಳಿವು ಬರ ಹತ್ತಿತು

"ಅಪ್ಪಾ! ಎಲ್ಲಿಗೆ ಬಂದೆನಲ್ಲ! ನೀರು! ಅಯ್ಯೋ ತಣ್ಣಗೆ!"

"ಹಾಗೇಕೆ ಮಾಡುತ್ತೀ ಬಾರಣ್ಣ" ಎಂದು ಮೃದುವಾಗಿ ಕೈ ಹಿಡಿದುಕೊಂಡು ರೇಣುಕಪ್ರಸಾದ ಅಣ್ಣನನ್ನು ಮೇಲಕ್ಕೆ ಕರೆತಂದ. ಗುರು ಮೂರ್ತಿ ಮೆಟ್ಟಲುಗಳ ಮೇಲೆ ಕುಳಿತುಕೊಂಡ ಚಳಿಗೆ ಹಲ್ಲು ಗಿಟಗರಿದಿದ್ದವು. ಶಿವಣ್ಣಯ್ಯ ಮಗನನ್ನು ಎಬ್ಬಿಸುತ್ತ "ಏಳು ಗುರು, ಮರಿ ಎದ್ದೇ

ಳಪ್ಪ" ಎಂದು ಕರೆದುಕೊಂಡು ಹೊರಟರು. ಬಲಗೈಯನ್ನು ಶಿವಣ್ಣಯ್ಯನವರೂ ಎಡಗೈಯನ್ನು ರೇಣುಕಪ್ರಸಾದನೂ ಹಿಡಿದುಕೊಂಡಿದ್ದರು. ಘಟ್ಟದ ಹತ್ತಿರದಲ್ಲಿನ ಕಟ್ಟೆನ ದಿಣ್ಣೆಯನ್ನು ಹತ್ತಿದ ಮೇಲೆ ವಿದ್ಯುದ್ದೀಪದ ಬೆಳಕಿನಲ್ಲಿ ರೇಣುಕಪ್ರಸಾದ ಕೇಳಿದ

"ಎಚ್ಚರವಿದೆಯೋ ಗುರು?"

"ಈಗಿದೆ ರೇಣುಕ. ಚೆಟ್ಟಿಚಳಿ ನಾನು ಯಾಕೆ ಇಲ್ಲಿ ಬಂದೆನಪ್ಪಾ?"

"ಏನೇನೋ ಕನವರಿಸುತ್ತ ಹೇಳದೆ ಕೇಳದೆ ಓಡಿ ಬಂದು ಬಿಟ್ಟೆ. ಅಗೊ! ಗಂಗಕ್ಕನೂ ಬಂದಳು"

"ನೀನ್ಯಾಕೆ ಬಂದೆ ಗಂಗವ್ವ" ಶಿವಣ್ಣಯ್ಯ ಪ್ರಶ್ನಿಸಿದರು.

"ಮತ್ತೇನು ಗ್ರಹಚಾರ ಇದು! ಯಾಕೋ ಬರಲೇ ಇಲ್ಲಾಂತ ಬಂದೆ. ಎಲ್ಲಿಗೆ ಹೋಗಿದ್ದೆ?"

"ಅಕ್ಕಾ, ಹೊಳೆಯಲ್ಲಿ ಇಳಿದು ಬಿಟ್ಟಿದ್ದ. ಏನು ಹೇಳ್ತೀಯೆ. ಇಳಿದಮೇಲೆ ಎಚ್ಚರಾತಂತೆ."

"ಮನೆಯೊಳಗೆ ಎಲ್ಲರೂ ಚೀರಾಟ ಕೂಗಾಟ ಮಾಡ್ತಾ ಇದಾರೆ."

"ತುಂಬಿದ ಮನೆಬಿಟ್ಟು ನೀನ್ಯಾಕೆ ಬಂದೆ? ಅವರಿಗೆ ಸಮಾಧಾನ ಮಾಡುತ್ತಾ ಅಲ್ಲೇ ಇರಬಾರದಾಗಿತ್ತೇ?" ಎಂದರು ಶಿವಣ್ಣಯ್ಯ.

"ನನಗ್ಯಾಕೋ ತುಂಬಾ ಹೆದರಿಕೆ ಆಯ್ತು. ಇದೇನು ಶನಿಕಾಟ ... ಣ್ಣ ."

ಎಲ್ಲರೂ ಮನೆಗೆ ಬಂದರು. ಆ ವೇಳೆಗೆ ಮನೆಯಲ್ಲಿ ಹೆಣ್ಣು ಮಕ್ಕಳಾದಿಯಾಗಿ ಎಲ್ಲರೂ ಅಳುತ್ತಿದ್ದರು.

"ನೀನು ಅಳಬೇಡ ಬಿಡೆ. ನನಗೆ ಎಚ್ಚರ ಇದೆ" ಎಂದು ಹೇಳಿದ ಗುರುಮೂರ್ತಿ ಒದ್ದೆ ಬಟ್ಟೆಗಳನ್ನು ತೆಗೆಯುತ್ತ ಹೆಂಡತಿಗೆ. ಒಣಗಿದ ಬಟ್ಟೆಗಳನ್ನು ಗಂಗಮ್ಮ ಹಾಕಿ ಮೆಲ್ಲಗೆ ಅವನನ್ನು ಮಲಗಿಸಿದಳು. ಶಿವಣ್ಣಯ್ಯನವರಿಗೆ ನಿದ್ದೆ ಬರಲಿಲ್ಲ. ಹಾಸಿಗೆಯ ಮೇಲೆ ದೆವ್ವ ಬಡಿದವರಂತೆ ಕುಳಿತಿದ್ದರು. ಅವರಿಗೊಂದು ಯೋಚನೆ ಹೊಳೆಯಿತು.

"ಗಂಗವ್ವ, ಇದು ಗ್ರಹಗಳ ಚೇಷ್ಟೆಯೇನಾದರೂ ಇರಬಹುದೆ?"

"ಹಾಗೆ ಇರಬಹುದೆಂತ ಹೇಳಲಿಕ್ಕೆ ಬರೋದಿಲ್ಲ."

"ಯಾಕೆ ನಾಳೆ ದಿವಸ ಸಣ್ಣದುರುಗಪ್ಪನನ್ನು ಕರೆದುಕೊಂಡು ಬಂದು ತೋರಿಸು. ಅವನೇನಾದರೂ ಹೇಳಿದರೆ....ನವಗ್ರಹ ಶಾಂತಿ ಮಾಡಿಸೋಣಂತೆ."

"ಅಂತೂ ಭೂತಪ್ಪ ಸತ್ತಿದ್ದೂ ಒಳ್ಳೆಯದೇ ಆಯ್ತು" ಎಂದಳು ಗಂಗವ್ವ.

"ಅಪ್ಪಾ?" ಎಂದ ರೇಣುಕ. ಅವರು ಮೌನವಾಗಿಯೇ ಇದ್ದರು.

"ಭೂತಪ್ಪ ಕನಸಿನಲ್ಲಿ ಬಂದು ಲಿಂಗ ಹುಡುಕಿ ಕೊಟ್ಟಿದ್ದರಲ್ಲಿ ಒಂದರ್ಥವಿದೆ."

"ಹೌದು; ಅವನಿಗೆ ಕನಸಿನಲ್ಲಿ ಲಿಂಗಸಿಕ್ಕದೇ ಇದ್ದಿದ್ದರೆ, ಜೀವ ಉಳಿಯುತ್ತಿದ್ದಿಲ್ಲ. ನಿನ್ನ ಆತ್ಮಲಿಂಗ ಹೋಗೋದು ಒಂದೆ. ನಿನ್ನ ಜೀವ ಹೋಗೋದು ಒಂದೆ ಎಂತ ಭೂತಪ್ಪ ಹಿಂತಿರುಗಿ ಕೊಟ್ಟ ಹಾಗಾಯಿತು, ಅಲ್ಲವೆ ಗಂಗವ್ವ?"

"ಏನೋ, ನನಗಷ್ಟು ತಿಳಿಯದು."

"ಏನೋ ದೈವ ಇಟ್ಟಿದ್ದಾಗಲಿ. ಬಸವರಾಜ ಕಾಯಿಯನ್ನು ಬಾವಿಯಿಂದ ತೆಗೆದು ಹೂತಿದ್ದಾನೇಂತಿಯಾ?"

"ಕಾಗದದೊಳಗೇನೊ ಹಾಗೆ ಬರೆದಿದಾನೆ. ಅಂದಮೇಲೆ ಹೂತಿರಲೇಬೇಕು."

"ಗುರುಮೂರ್ತಿ! ಗುರುಮೂರ್ತಿ ಮಲಗಿದಾಂತ ಕಾಣುತ್ತೆ" ಎಂದು ಶಿವಣ್ಣಯ್ಯ ಅವನಿಗೆ ಶಾಲನ್ನು ಹೊದಿಸಿ ಮಲಗಿಕೊಂಡರು. ಗಂಗಮ್ಮನೂ ಅಡಿಗೆ ಮನೆಗೆ ಹೋಗಿ ಮಲಗಿಕೊಂಡಳು.

ಮಾರನೆಯ ದಿನ ಸಣ್ಣದುರುಗಪ್ಪ ಬಂದ. ಗುರುಮೂರ್ತಿಯ ನಾಡಿ ಪರೀಕ್ಷೆಯಾದನಂತರ "ಇದು ಗ್ರಹದ ಚೇಷ್ಟೆಯೇನೂ ಅಲ್ಲ. ರೋಗವೂ ಇಲ್ಲ. ಏನೋ ನಿನ್ನೆ ಎಲ್ಲಾ ಮಾಟದ ಸುದ್ದಿ ಮಾತಾಡಿದ್ದೀರಿ ಅಂತ ಕಾಣುತ್ತೆ. ಅದಕ್ಕೆ ಕನವರಿಸುತ್ತಾ ಓಡಿ ಹೋಗಿದ್ದಾನೆ; ಅಷ್ಟೇ" ಎಂದು ಸಮಾಧಾನ ಮಾಡಿ ಹೊರಟು ಹೋದ.

ಅದೇ ದಿನ ಮಧ್ಯಾಹ್ನಕ್ಕೆ ಶಾಸ್ತ್ರಿಗಳೂ ಬಂದರು.

"ಶಾಸ್ತ್ರಿಗಳಿಗೆ ನೀರು ಕೊಡು, ಸರಳ" ಎಂದರು ಶಿವಣ್ಣಯ್ಯ.

ಶಾಸ್ತ್ರಿಗಳು ಕೈಕಾಲು ತೊಳೆದುಕೊಂಡು ಬಟ್ಟೆಯಿಂದ ಒರೆಸಿಕೊಳ್ಳು

ಹೇಳಿದರು "ಮನಸ್ಸಿಗೆ ಸಮಾಧಾನವೇ ಆಗಲಿಲ್ಲ. ಜೀವ ಯಾಕಾಗಿಯೋ ಎಳೆಯುತ್ತಿತ್ತು. ಬಂದೆ ನೋಡಿ. ಗುರುಗೆ ಹ್ಯಾಗೆ ಈಗ?"

ಶಿವಣ್ಣಯ್ಯ ಮುನ್ನಾದಿನ ನಡೆದ ಘಟನೆಯನ್ನು ಶಾಸ್ತ್ರಿಗಳಿಗೆ ವಿಶದ ವಾಗಿ ಹೇಳಿ, ಸಣ್ಣದುರುಗಪ್ಪ ನೋಡಿಕೊಂಡು ಅದೇ ತಾನೆ ಹೋದುದನ್ನು ಹೇಳಿದರು.

"ಬಸವರಾಜ ಮಾಟ ಮಾಡಿಸಿದ್ದು ಎಲ್ಲಾ ತಿಳಿದುಬಂತು. ಅದೇ ಕಳಕಳಿಯಲ್ಲಿದ್ದನೇನೊ. ಹಾಗೆ ನಿನ್ನೆ ರಾತ್ರಿ ಆಗಿದೆ."

"ಗುರುಮೂರ್ತಿಗೆ ಮಾಟ ಮಾಡಿಸಿದ್ದಕ್ಕೆ ಅವನಿಗೆ ಹೀಗಾಯ್ತಂತೆ" ಎಂದು ಅಡುಗೆ ಮನೆಯಿಂದ ಗಂಗಮ್ಮ ಬಂದು ಹೇಳಿದಳು.

"ಅವನು ಸಾಯುವುದಕ್ಕಿಂತ ಮುಂಚೆ ಡಾಕ್ಟರಿಗೊಂದು ಕಾಗದ ಬರೆದಿಟ್ಟು ಸತ್ತಿದಾನೆ ನೋಡಿ ಅವನ ಕಾಗದ" ಎಂದು ಅವನ ಕಾಗದ ವನ್ನು ಕೊಟ್ಟರು. ಗುರುಶಾಂತ ಶಾಸ್ತ್ರಿಗಳು ಮೊದಲಿನಿಂದ ಓದಿ ತುಂಬಿದ ಧ್ವನಿಯಲ್ಲಿ ಹೇಳಿದರು :

"ಪಾಪಿ ಸೂ—ಮಗ ಕೊನೆಗಾದರೂ ಪಶ್ಚಾತ್ತಾಪ ಪಟ್ಟುಕೊಂಡಿ ದಾನೆ. ಸದ್ಗತಿಗೆ ಹೋಗಬಹುದು."

"ಭೂತಪ್ಪ ಸತ್ತದ್ದರಿಂದ ಪಶ್ಚಾತ್ತಾಪ ಪಟ್ಟುಕೊಂಡಿದಾನೆ. ಅಯ್ಯೋ ...ಇಲ್ಲದಿದ್ದರೆ ಒಪ್ಪಿಕೊಳ್ಳುವ ಜೀವವೆ ಅದು!" ರೇಣುಕಪ್ರಸಾದ ಹೇಳಿದ.

"ಪಾಪ! ಹಾಲಪ್ಪನಿಗೆ ಇದೊಂದು ದೊಡ್ಡ ಕುತ್ತು. ಇದನ್ನು ಚಂಪಕಧಾಮರು ಕೊಟ್ಟರ?"

"ಹ್ಞೂ, ಅವರೇ ನಿನ್ನೆ ಬೆಳಿಗ್ಗೆ ಗುರುಮೂರ್ತಿ ದೇಹ ನೋಡಿ ಕೊಟ್ಟರು. ಬಹಳ ಒಳ್ಳೆಯ ಮನುಷ್ಯ."

"ದೇವರಂಥ ಮನುಷ್ಯ. ತಂಪು ಹೊತ್ತಿನಲ್ಲಿ ನೆನೆಸಬೇಕು ಅವ ರನ್ನ" ಎಂದಳು ಗಂಗಮ್ಮ.

"ಇವೊತ್ತು ಚೆನ್ನಾಗಿದೆಯೆ? ಹ್ಯಾಗಿದೆ ಗುರುಮೂರ್ತಿ" ಎಂದರು ಶಾಸ್ತ್ರಿಗಳು.

"ಚೆನ್ನಾಗಿದೆ ಅಜ್ಜಯ್ಯ. ರಾತ್ರಿ ಮಾತ್ರ ಹೊಳೆಗೆ ಓಡಿ ಹೋಗಿದ್ದೆ. ನನ್ನ ಗ್ರಹಚಾರ. ಮನುಷ್ಯನಾಗಿ ಹುಟ್ಟಿದಮೇಲೆ

ಏನೇನು ಅನುಭವಿಸಬೇಕೊ ಎಂತೋ."

"ಸರ್ಸ್ವಿ ಸರಳ, ಶಾಸ್ತ್ರಿಗಳಿಗೆ ಸ್ನಾನಕ್ಕೆ ಸಜ್ಜು ಮಾಡು. ಅವರು ರೈಲು ಗಾಡಿಯಲ್ಲಿ ಬಂದಿದ್ದಾರೆ" ಶಿವಣ್ಣಯ್ಯ ಎಂದರು.

ಗುರುಮೂರ್ತಿ ಎಂದಿಗಿಂತಲೂ ಅಂದು ಪರಿಪೂರ್ಣ ತಿಳಿವಿನಿಂದ ಮಾತನಾಡುತ್ತಿದ್ದ. ಶಿವಣ್ಣಯ್ಯನವರ ಮನಸ್ಸು ಪ್ರಫುಲ್ಲಿತವಾಗಿತ್ತು. ರೇಣುಕಪ್ರಸಾದನೂ ಅವರ ಜೊತೆಗೆ ಕುಳಿತಿದ್ದ.

"ರೇಣುಕಪ್ರಸಾದ .ರೇಣುಕಪ್ರಸಾದ್"

"ರೇಣುಕ, ಯಾರೋ ಕರೆಯುತ್ತಾರೆ ನೋಡು ವಿಶ್ವನಾಥನ ಧ್ವನಿ ಇದ್ದ ಹಾಗಿದೆ" ಎಂದರು ಶಿವಣ್ಣಯ್ಯ. ರೇಣುಕ ಪ್ರಸಾದ ಹೊರಗೆ ಬಂದ. ತನ್ನ ಮಿತ್ರ ಮಂಡಳಿಯೇ ಬಂದಿತ್ತು.

"ಬನ್ನಿಸಾರ್. ಒಳಕ್ಕೆ ಬನ್ನಿ" ಎಂದು ಪ್ರೇಮಚಂದ್ರರನ್ನೂ ಮಾಧವರಾಯರನ್ನೂ ಒಳಕ್ಕ ಕರೆದುಕೊಂಡ ಬಂದ ಶಿವಣ್ಣಯ್ಯನವರೂ ಅವರನ್ನು ಆದರದಿಂದ ಬರಮಾಡಿಕೊಂಡರು. ಎಲ್ಲರೂ ಕುಳಿತುಕೊಂಡರು.

"ಬಹಳ ದಿವಸದಿಂದ ರೇಣುಕನ ಭೆಟ್ಟಿ ಇರಲಿಲ್ಲ. ಮನೆಯಲ್ಲಿ ಗುರುಮೂರ್ತಿಗೆ ಕಾಯಿಲೆಯಂತೆ ಕೇಳಿದ್ದೆ !

"ಹೌದು. ಗುರುಮೂರ್ತಿ ಸತ್ತುಳಿದ ಪ್ರೇಮಚಂದ್ರರೆ, ಏನು ವಿಕಾರಗತಿಗೆ ಇಳಿದಿದ್ದ ಅನ್ನುತ್ತೀರಿ. ಮಾಟಮಾಡಿಸಿದ್ದರು ಆಗದವರು. .." ಅವರ ಮಾತು ಮುಗಿಯುವುದಕ್ಕಿಂತ ಮುಂಚೆ "ಕೇಳಿದೆ— ಕೇಳಿದೆ ಆ ಮಾಟ ಮಾಡಿಸಿದ ವ್ಯಕ್ತಿ ಚಂಪಕಧಾಮರಿಗೆ ಕಾಗದ ಬರೆದಿರುವ ಅಂಶವೂ ತಿಳಿದು ಬಂತು" ಎಂದರು.

"ಛೆ! ಆ ಸಚ್ಚಿದಾನಂದ ಸ್ವರೂಪನ ಕಣ್ಣು ಕುರುಡೆ?" ಎಂದು ಪ್ರಾಸಂಗಿಕವಾಗಿ ಶಾಸ್ತ್ರಿಗಳು ನುಡಿದರು.

"ಮತ್ತೇನು ವಿಶೇಷ ರೇಣುಕ. ಹೊರಡೋಣವೆ ಹೊರಗೆ."

"ಹೂ, ಆಗಲೆ ಐದೂವರೆಯಾಯಿತು. ವಾಕಿಂಗ್ ಹೊರಡೋಣ" ಎಂದು ವಾಯಿಚಾಮ ಧರಿಸಿಕೊಂಡ ಗಂಗಮ್ಮ ವಿಶ್ವನಾಥನೊಡನೆ ಕೇಳಿದಳು! "ಪ್ರೇಮಳಿಗೆ ಮೂರು ತಿಂಗಳಂತೆ ಹೌದೆ, ವಿಶ್ವನಾಥ?"

"ಹೂನ್ರಿ. ಮೂರುತಿಂಗಳ ಬಸುರಿ. ಬಹಳ ಕೆಲಸ ಮಾಡುತ್ತಾಳೆ ಬೇಡಾಂದರೂ...."

"ಸಂತೋಷ ಮಹರಾಯ. ಬಸಮ್ಮ ನೊಮ್ಮೊಕ್ಕಳನ್ನು ಕಾಣಲು ಬಹಳ ಹಾತೊರೆಯುತ್ತಿದ್ದಳು. ಒಬ್ಬ ಮಗ. ಇನ್ನೇನು ಆ. ಈಗ ವಿಶ್ವನಾಥ ಸ್ವಲ್ಪ ಸದೃಢನಾದನಲ್ಲವೆ ಗಂಗಮ್ಮ?' ಎಂದರು ಶಿವಣ್ಣಯ್ಯ.

"ಮೊದಲಿಗಿಂತಲೂ ಎಷ್ಟೋ ವಾಸಿ ಉತ್ತಮ. ಬಣ್ಣ ಬಂತು" ಎಂದಳು ಗಂಗಮ್ಮ.

"ಹ್ಞಾ, ಹೋಗೋಣವೆ?"ಎಂದ ರೇಣುಕಪ್ರಸಾದ ಪ್ರೇಮಚಂದ್ರರ ಮುಖ ನೋಡಿ. ಎಲ್ಲರೂ ವಿಹಾರಾರ್ಥವಾಗಿ ಹೊರಹೊರಟರು. ಮಿತ್ರಮಂಡಳಿ ಬಹಳ ದಿನಗಳಿಂದ ಕೂಡಿರಲಿಲ್ಲ. ಪ್ರೇಮಚಂದ್ರರು ದಾರಿಯಲ್ಲಿ ನಕ್ಕು ನುಡಿದರು "ವಿಶ್ವನಾಥ ಹೆಂಡತಿಯನ್ನು ಕೆಲಸ ಮಾಡಿಸಲಾರ. ಅಂತೂ ನಮ್ಮ ವಿಶ್ವನಾಥ ಮೂರ್ತಿಮಂತ ಮಾನವ ನಾದ."

"ಹಾಗಲ್ಲ. ಕೆಲಸ ಮಾಡಿಸಬಾರದೆಂತಲ್ಲ"

"ಗೊತ್ತಾಯ್ತು ಗೊತ್ತಾಯ್ತು, ಗರ್ಭಿಣಿ ಎಂತ"

"ವಿಶ್ವನಾಥನ ಜೀವನ ದುರಂತ ಜೀವನ. ಅವನು ಗಾಣಕ್ಕೆ ಕೊಟ್ಟ ಕಬ್ಬಿನಂತಾಗಿದ್ದ. ಅವನ ಜೀವನ ಅತ್ತದರಿ, ಇತ್ತಪುಲಿ ಎಂಬು ವಂತಾಗಿತ್ತು" ಎಂದ ಮಾಧವರಾವ್. ವಿಶ್ವನಾಥರಾವ್ ಮಾಧವರಾ ಯನ ಮಾತನ್ನು ಕೇಳಿ ಹೇಳಿದ: "ನಾನು ಪ್ರಾಣಹತ್ಯೆ ಮಾಡಿಕೊಳ್ಳು ವಂತಹ ನಿರ್ಧಾರಕ್ಕೆ ಬಂದಿದ್ದೆ. ದೇವರು ಉಳಿಸಿದ."

"ಯಾವ ಕಡೆಗೆ ಹೋಗೋಣ. ನದಿಯಾಚೆಗೆ ಹೋಗೋಣವೆ? ಅಥವಾ ಜಾತ್ರೆಯ ಕಡೆಗೊ?" ಪ್ರೇಮಚಂದ್ರರು ಪ್ರಶ್ನಿಸಿದರು.

"ನಿತ್ಯ ನದಿಯಾಚೆಗೆ ಹೋಗುವುದಿದ್ದೇ ಇದೆ ಇವೊತ್ತು ಜಾತ್ರೆ ಕಡೆಗೆ ಹೋಗೋಣ" ಎಂದ ರೇಣುಕಪ್ರಸಾದ. ನಾಲ್ವರೂ ಸಂಗಮೇ ಶ್ವರಸ್ವಾಮಿಯ ಎತ್ತಿನ ಜಾತ್ರೆಯ ಕಡೆಗೆ ಹೆಜ್ಜೆಕಿತ್ತರು.

"ಅಂತೂ ಬಸವರಾಜ ಮಾಟಮಾಡಿಸಿ ಅವರಲ್ಲೇ ಹೋದ. ಇತ್ತೀಚಿಗಂತೂ ಅವನು ತುಂಬಾ ವ್ಯಭಿಚಾರಿಯಾಗಿದ್ದ ಏನೇ ಆಗಲಿ ನಿಮಗೆ ನನ್ನ ಅಭಿಪ್ರಾಯ ಒಂದೆ. ಎಂತಹ ಕಷ್ಟಗಳೇ ಬರಲಿ, ದೇವ ರಲ್ಲಿನ ಭಕ್ತಿಯನ್ನು ಮಾತ್ರ ಬಿಡಬಾರದು"

"ನೀವು ಹೇಳುವುದು ನಿಜ. ಭಕ್ತಿಯಿಂದಲೇ ಮುಕ್ತಿ" ಎಂದ

ರೇಣುಕ.

"ಭಕ್ತಿ ದೇಹದಮೇಲೂ ಪರಿಣಾಮ ಮಾಡುತ್ತದೆ ರೇಣುಕ. ಭಕ್ತಿಯಿಂದಲೇ ನಿರ್ಮಲ ಮನದ ದೇಹದ ಬೆಳವಣಿಗೆ" ಎಂದರು ಪ್ರೇಮಚಂದ್ರ.

"ನಾವು ಬಾಳನ್ನು ಪ್ರಚಂಡ ಆಶಾವಾದಿಗಳಾಗಿ ಎದುರಿಸಬೇಕಲ್ಲವೆ? ನಮ್ಮ ಗುರಣ್ಣನಿಗೆ ಎಂಥ ಸಂದರ್ಭ ಬಂದಿತ್ತು ನೋಡಿ ಸಾರ್" ಮಾಧು ಹೇಳಿದ.

"ಬರುತ್ತವೆ,ಮಾಧು.ನನ್ನ ಜೀವನವನ್ನೇ ತೆಗೆದುಕೊಂಡರೆ ಹುರುಡಿಲ್ಲ. ಆದರೆ ದೇವರ ದಯೆಯಿಂದ ಉತ್ತಮ. ಬಾಲ್ಯದಲ್ಲಿ ನನ್ನ ವಿದ್ಯಾಭ್ಯಾಸಕ್ಕಾಗಿ ಆರ್ಥಿಕ ತೊಂದರೆ ಬಹಳಿತ್ತು. ಸ್ಟೇಷನ್ನಲ್ಲಿನ ಕೂಲಿಯಿಂದ ಹಿಡಿದು ಮಾಧ್ಯಮಿಕಶಾಲೆಯ ಉಪಾಧ್ಯಾಯ ವೃತ್ತಿಯವರೆವಿಗೂ ಕೆಲಸ ಮಾಡಿದೇನೆ. ನಾನೊಬ್ಬ ನಿಮ್ಮ ಹಾಗೆ ಕಷ್ಟಜೀವಿ."

"ನೀವೊಬ್ಬರೆ ಏಕೆ? ನಾವು ನಾಲ್ಕು ಜನಗಳೂ ಕಷ್ಟಜೀವಿಗಳು. ಹಿಂದಿನ ಜನ್ಮದಲ್ಲಿ ಯಾರ ಮನಸ್ಸನ್ನು ನೋಯಿಸಿದ್ದೆವೊ" ಎಂದ ರೇಣುಕ.

"ರೇಣುಕ, ನಾವೇ ಏಕೆ, ನಿಮ್ಮ ತಂಗಿ ಕಷ್ಟಜೀವಿ ಅಲ್ಲವೆ?" ಎಂದ ಮಾಧು.

"ಅವಳೊಬ್ಬಳೇ ಏಕೆ ? ಈ ದಿನ 'ವನಿತಾಜ್ವಾಲೆ'ಯನ್ನು ಓದಿದೆ. ಅದರಲ್ಲಿ ಬರುವ ಮೃಣಾಲಿನಿಯೂ ಕೂಡ ದುರ್ದೈವಿ. ಸಕಲ ಸಂಪತ್ತನ್ನೂ ಹೊಂದಿ ಅಂಧಕಾರದಲ್ಲಿ ತೊಳಲುದ್ದಿದ್ದ ವಿಶ್ವನಾಥನೂ ನಿರ್ಭಾಗ್ಯಜೀವಿ" ಎಂದು ರೇಣುಕ ಹೇಳಿದ.

"ದಿಟ ರೇಣುಕ. ನಾನೂ ಆ 'ಜ್ವಾಲೆ'ಯನ್ನು ಓದಿದೆ. ಅದು ಜ್ವಾಲಾಮುಖಿಯೇ ಸರಿ. ಮೂರು ವರ್ಷಗಳಾಯಿತು ಆ ನಿಮ್ಮ ತಂಗಿಯನ್ನು ಕಳುಹಿಸಿಲ್ಲವಲ್ಲ. ಅವಳೆಂತಹ ನಿರ್ಭಾಗ್ಯ ಪುತ್ರಿಯಿರಬಹುದು. ಮಾಟ ಮಾಡಿಸಲು ಹೋಗಿ ಬಸವರಾಜ ತಾನೆ ತುತ್ತಾದನಲ್ಲ! ಅದಕ್ಕೆ ಇವೆಲ್ಲಾ ತುಂಬಾ ಆಶ್ಚರ್ಯ!" ಎಂದರು ಪ್ರೇಮಚಂದ್ರರು. ಗೆಳೆಯರು ಸಂಗಮೇಶ್ವರ ದೇವರಿಗೆ ಕೈಮುಗಿದು ತೀರ್ಥ ತೆಗೆದುಕೊಂಡು ಹೊರಟರು.

ದಾರಿಯಲ್ಲಿ ರೇಣುಕ ಹೇಳಿದ . "ಅನೇಕರು ಬಾಳೊಂದು ಆಟದ

ವೈದಾನ. ಇಲ್ಲಿರುವವರೆಲ್ಲಾ ಆಟಗಾರರು ಎಂದು ಹೇಳುತ್ತಾರೆ. ಅದು ಶುದ್ಧ ತಪ್ಪು. ಬಾಳೊಂದುಆಟವಲ್ಲ. ಆಟದಷ್ಟು ಸುಲಭವಾಗಿದ್ದರೆ ನೀವಾಗಲಿ ನಾನಾಗಲಿ ಇಷ್ಟು ಕಷ್ಟ ಪಡಬೇಕಾಗಿರಲಿಲ್ಲ. ನಿಜ. ಬಾಳು ಹೂವಿನ ಹಾಸಿಗೆಯಲ್ಲ, ಮುಳ್ಳಿನ ಹಾಸಿಗೆ."

ಮಾಧವರಾಯ ಮುಗುಳ್ನಗುತ್ತಾ ನುಡಿದ. "ಎಷ್ಟೇ ಆಗಲಿ ಕವಿ ಸಹಜ ಹೃದಯ ರೇಣುಕನದು ಜೀವನದಗೋಳು ಬಾಳನ್ನು ಒಂದೇ ಮಾತಿನಲ್ಲಿ ಹೇಳಿದ. ಹೌದು; ಬಾಳು ಮುಳ್ಳಿನ ಹಾಸಿಗೆ."

"ಸಾರ್, ನಾನಾವ ಕವಿ. ಕವಿಗಳ ಪಾದಧೂಳೂ ಆಗಲಾರೆ. ಜೈಲಿನಲ್ಲಿದ್ದಾಗ 'ಹೆಣ್ಣಿನ ಬಾಳು ಕಣ್ಣೀರು' ಎಂಬ ಭಾವಗೀತೆಯನ್ನು ಹೊಂಬೆಳಕಿ'ನಲ್ಲಿ ಬರೆದೆ ಅದು ಉಮಾಪತಿಯ ಕಣ್ಣಿಗೆ ಬಿದ್ದು, ತನ್ನ ಕುರಿತಾಗಿ ಬರೆದಿದೆಯೆಂದು ತಿಳಿದು, ಮನಸ್ಸಿಗೆ ನೋವಾಗುವ ಮಾತುಗಳನ್ನೊಳಗೊಂಡು ಕಾಗದ ಬರೆಯಬೇಕೆ !"

"ಅನ್ನುವವರು ಅನ್ನಲಿ ರೇಣುಕ. ದುಷ್ಟರೂ ಇರುತ್ತಾರೆ, ಕೆಟ್ಟವರೂ ಇರುತ್ತಾರೆ ಈ ಪ್ರಪಂಚದಲ್ಲಿ. ನಿಮ್ಮ ಉಮಾಪತಿ ಮನುಷ್ಯಾಕೃತಿಯ ಪಶು, ನನಗೆ ಗೊತ್ತಿಲ್ಲವೆ. ಸರಿಯಾದವರಿಗೆ ಸರಿಯಾದ ನೆಂಟರು ಸಿಕ್ಕುವುದಿಲ್ಲ. ಕಲ್ಲಿಗೆ ಬುದ್ಧಿ ಹೇಳಿದರೆ ಅದು ಕೇಳಬಲ್ಲುದೆ?" ಎಂದರು. ಜಾತ್ರೆಯಿಂದ ದೇವಸ್ಥಾನದ ಬಳಿ ಎಲ್ಲರೂ ಬಂದರು.

"ನಾವಿನ್ನು ಹೊರಡುತ್ತೇವೆ, ರೇಣುಕ. ನಿನಗೆ ಮನೆ ಸಮೀಪ ಇಲ್ಲಿಂದ" ಎಂದರು ಪ್ರೇಮಚಂದ್ರರು. ರೇಣುಕ ಮನೆಯ ಕಡೆ ಹೊರಟ. ಅಂತರ್ವಾಣಿ ನುಡಿಯುತ್ತಿತ್ತು : ಬಾಳು ಹೂವಿನ ಹಾಸಿಗೆ ಯಲ್ಲ ; ಮುಳ್ಳಿನ ಹಾಸಿಗೆ.

೨೭

"ಯಾಕೆ ಹೀಗೆ ಕೂತ್ಕೊಂಡಿರ್ತೀಯೆ ಮಾಲಿನಿ ? ನೀನು ಕೆಲಸ ಮಾಡದಿದ್ದರಷ್ಟೆ. ಊಟಮಾಡಿ ಕುಳಿತುಕೊ. ಎಂಟು ತಿಂಗಳ ಬಸಿರಿ, ಹೀಗೇಕೆ ಹೊಟ್ಟೆ ಕಟ್ತೀಯೆ?" ಎಂದು ಪಡಸಾಲೆಗೂ ಅಡಿಗೆಯ ಮನೆ ಬಾಗಿಲಿಗೂ ಮಧ್ಯೆ ಇರುವ ಬಾಗಿಲ ಬಳಿ ಕುಳಿತುಕೊಂಡು ನೆಲ ಕೆರೆಯುತ್ತಿರುವ ಮಾಲಿನಿಗೆ ಸಿದ್ದಮ್ಮ ಹೇಳಿದಳು.

"ಹೂ, ಹೊಟ್ಟೆ ಹಸಿವಾಗಿದ್ದಿಲ್ಲ ಅತ್ತೆ. ಕುಳಿತುಕೊಂಡಿದ್ದೆ."

"ಹೋದಷ್ಟು ಬಂದಷ್ಟು ಒಂದು ತುತ್ತು ತಿಂದು ಕುಳಿತಿಕೊ. ನಾನು ಕಾಕುಳ್ಳಿಗೆ ಹೋಗಿ ಬರ್ತೀನಿ. ಹೀಗೆ ಕುಳಿತುಕೊಂಡರೆ ಕೆಲಸ ಹೇಗೆ ನಡೆಯಬೇಕು?" ಎಂದು ಅತ್ತೆ ಹೊರಟಳು. ಮಾಲಿನಿ ಏಳ ಲಾರದೆ ಎದ್ದು ಒಂದು ತುತ್ತು ಅನ್ನ ತಿಂದಳು. ಮಹಾದೇವಮ್ಮ ಬಂದಳು.

"ಬಾ ಮಾದೇವಿ."

"ನಿಮ್ಮತ್ತೆ ಎಲ ಹೊಲಕ್ಕೆ ಹೋದಳಲ್ಲ."

"ಹೂ. ಈಗ ಕಾಕುಳ್ಳಿಗೆ ಹೋದಳಲ್ಲ."

"ಯಾಕೋ ಮಾಲಿನಿ ನಾನು ಬಹಳ ದಿವಸಗಳಿಂದ ನೋಡು ತ್ತಿದ್ದೇನೆ. ನೀನು ಯಾರಜೊತೆಗೂ ಸರಿಯಾಗಿ ಮಾತನಾಡುತ್ತಿಲ್ಲ."

"ನಾನು ಇರೋದೆ ಹೀಗೆ. ಮನಸ್ಸಿಗೆ ತುಂಬಾ ಬೇಜಾರ. 'ವನಿತಾ ಜ್ವಾಲ್'ಗೆ ಬಂದಿದ್ದೆಯಾ?"

"ಹೌದು, ಬಂದಿದ್ದೆನಲ್ಲ. ನಿನ್ನ ಕುಂಟೆಜೇಷ್ಟೆ ಬಿಡು. ನಿನ್ನ ಒತ್ತಾಯ ದಿಂದ ಅಲ್ಲಿ ಅಪ್ರೂತ್ತ ಬಂದಿದ್ದು" ಎಂದು ಮೃದುವಾದ ಏಟುಕೊಟ್ಟು ಮಹಾದೇವಮ್ಮ ಹೇಳಿದಳು.

"ಉಮಾಪತಿಯಣ್ಣ ಎಲ್ಲಿಗೆ ಹೋಗಿದಾನೆ?"

"ನಾನು ಏನು ಹೇಳಲಿ ಮಾದೇವಿ. ಎಲ್ಲಿಗೆ ಎಂದು ಕೇಳಿದರೆ ಅಪಶಕುನವಂತೆ. ಮೈ ನೋವು ಮಾಡಿಕೊಳ್ಳುವ ಹಾಗಿದ್ದರೆ ಕೇಳ ಬೇಕು."

"ನೀನು ನೆಲ ಕೆರೆಯುತ್ತಾ ಹೀಗೆ ದರಿದ್ರಳಾಗಿ ಕೂತ್ಕೋಬೇಡ.

ಸ್ವಲ್ಪ ಸರಿಯಾಗಿ ಮಾತಾಡು."

"ನನಗೆ ನಾಕಾಗಿದೆ ಮಾದೇವಿ. ನಾಟಕದಲ್ಲಿನ ಮೃಣಾಲಿನಿಯ ಹಾಗೆ ನನ್ನನ್ನೂ ಯಾಕೆ ಬಾವಿಯಲ್ಲಿ ನೂಕಬಾರದೋ"

"ಹಾಗೆ ಯೋಚನೆ ಹಚ್ಚಿಕೊಳ್ಳಬೇಡ ಮಾಲಕ್ಷ್ಮ. ಯೋಚನೆಗೆ ಮದ್ದಿಲ್ಲ ನೋಡು"

"ಮದ್ದಿಲ್ಲದ ರೋಗ ನನಗೆ ಬೇಕು. ನಾನು ಹದಿನೇಳು ವರ್ಷದ ಮುದುಕಿ ಮಾದೇವಿ. ಅತ್ತೆ ಐವತ್ತು ವರ್ಷದಲ್ಲಿ ಏನೆಲ್ಲ ಅನುಭವಿಸಿದ್ದಾಳೊ, ಅದನ್ನ ನಾನು ಈಗಾಗಲೇ ಅನುಭವಿಸಿದ್ದೇನೆ. ನಾನು ಯೋಚನೆಯ ಭಾರದಿಂದ ಬೆನ್ನು ಬಗ್ಗಿಸಿ ಹಾಗೆ ನಡೆಯುತ್ತೇನೆ."

"[illegible] ಬಿಡ" ಮಹಾದೇವಿ ಸಾಂತ್ವನದ ಧ್ವನಿಯಲ್ಲಿ ಹೇಳಿದಳು. ಅಷ್ಟರಲ್ಲಿಯೇ, "ತಾಯಿ, ನೀರು ಕೊಂಡು ಬಾರೆ" ಎಂದು [illegible] ಕರೆದ. ಮಾಲಿನಿ ನೀರು ತಂದು ಕೊಟ್ಟಳು. ಮಹಾದೇವಿ ಸೆರಗು ಹೊದ್ದುಕೊಂಡು ಹೋದಳು

"ಯಾವಾಗ ಬಂದಿದ್ದೆಯಣ್ಣಾ?"

"[illegible] [illegible]ಲಿಕ್ಕೆ ಹೋಗಿದ್ದಾಳೆ, ಕಾಕುಳ್ಳಿಯಿಂದ"

"[illegible] ಬರದಾಗ ಕುಂತಿದ್ದೆ [illegible], ಬರ್ತ್ತಾರೀಗ" ಎಂದ ಶಿವಮೂರ್ತಿ. ಮಾಲಿನಿ ಚಹ [illegible]. ಅತ್ತೆ ಸಿದ್ದಮ್ಮ ಕಾಲುಗಳನ್ನ ಇಳಿಸಿ ನೀರು ತರಲು ಹೇಳಿದರು. ಕೈಕೊಡವಿಕೊಂಡು ಒಳಕ್ಕೆ ಬರುತ್ತಿದ್ದಾಗಲೆ, "ಮಾಲಿನಿ, ನಿಮ್ಮಣ್ಣ ಕಲ್ಯಾಣಕ್ಕೆ ಬಂದಾನೆ. ನಿನ್ನ ತಾಯಿಯ [illegible]—ನಾವೆಲ್ಲ—[illegible] ಬೇಡವಾಗಿದ್ದೇವೆ. ಅಲ್ಲಿ ನಾಗಪ್ಪನವರ [illegible], ಹೋಗುತ್ತೀಯೇನು?" ಎಂದರು. ಅಷ್ಟು ಹೊತ್ತಿಗೆ ಬಸವಾಪತಿ, ಹೇಮಗಿರಿ ಬಂದರು.

'ಓಹೋಹೋ, ಯಾವಾಗ ದಯಮಾಡಿಸಿದ್ದರು ಮಾಸ್ತರರು?" ಎಂದು ಕೇಳಿದ ಅವರ ಮಾವನ ಮುಖ ನೋಡುತ್ತಾ ಹೇಮಗಿರಿ.

"ಇನ್ನೂ ಇದೇ ಬಂದೆ ಅಳಿಯದೇವರೆ. ಸೌಖ್ಯ ತಾನೆ?"

"ತಮ್ಮ ಕೃಪೆಯಿಂದ ಹೀಗಿದ್ದೇನೆ ನೋಡಿ" ಎಂದ ಹೇಮಗಿರಿ.

"ಎಲ್ಲರೂ ಊಟಕ್ಕೆ ಒಂದಿಗೇ ಬನ್ನಿ" ಎಂದಳು ಮಾಲಿನಿಯ ಅತ್ತೆ.

"ಹೋಗವ್ವಾ, ಇನ್ನೂ ಮುಚ್ಚಂಜೆಯಲ್ಲೇ ನಾನೊಲ್ಲೆ" ಎಂದ

ಹೇಮಗಿರಿ.

"ಶಿವಮೂರ್ತಿ ಹಸಿದು ಬಂದಿದ್ದಾನೆಂತ ಬೇಗ ಕರೆದೆ"

"ನಾನೂ ಶಿವಮೂರ್ತಿ ಕೂತುಕೊಳ್ಳುತ್ತೇವೆ. ಹೇಮಗಿರಿ ಬೇಕ ದರೆ ಆಮೇಲೆ ಉಣ್ಣಲಿ" ಎಂದು ಮುಖ ತೊಳೆದುಕೊಂಡು ಉಮಾಪ ಕುಳಿತ. ಅತ್ತೆ ಸಿದ್ದಮ್ಮ ಮತ್ತೆ ಮಾತು ತೆಗೆದಳು.

"ಮಾಲಿನಿಗೆ ಅಲ್ಲಿಯೇ ಮುದೇನೂರಿಗೆ ಜನನಕಾರ್ಯಕ್ಕೆ ಕರೆ ಬಂದಿದಾನೆ. ಕಳಿಸೋಣವೆ?"

"ಕಳಿಸು. ಬೇಡಾಂದನೆ?" ರೇಗಿಗೆದ್ದ ಉಮಾಪತಿ ಎಂದ.

"ಯಾಕೆ, ಇಷ್ಟಿಷ್ಟಕ್ಕೆ ರೇಗುತ್ತೀಯೆ?"

"ಹಾಗಲ್ಲ. ಇವಳ ತೌರುಮನೆಯವರು ಎಂಥ ಜೀವಿಗಳಿದ್ದಾರು ಮೊದಲನೆಯ ಬಸಿರಿ. ಕರೆಯ ಬರಬಾರದೆ?"

"ಹಾಗಲ್ಲ ಮಾವನವರೆ. ತಾವು ಶ್ರೇಷ್ಠ ಪುಢಾರಿಗಳು. ಮ ಹತ್ತಿರ ಸುಳಿದರೆ ಸಾಕು, ಸರಿಯಾದ ಶಾಸ್ತಿ ಮಾಡುತ್ತಾರೆಂತ ಅವ ಗರಿಯದೆ ಇರುತ್ತದೆಯೆ?" ಎಂದ ಶಿವಮೂರ್ತಿ.

"ಎಲ್ಲಿಗಾದರೂ ಹಾಳಾಗಿ ಹೋಗಲಿ. ಇದೇನು ನೆಲ ಕೆರೆಯುತ್ತಾ ಕೂತುಕೊಳ್ಳೋದು" ಸಿದ್ದಮ್ಮ ಎಂದಳು.

ಅತ್ತೆಯ ಮಾತಿನ ಸರಣಿ ಮಾಲಿನಿಗೆ ತಿಳಿಯಿತು. ಉಮಾಪ ಯೇನಾದರೂ ನಡುವೆ ಮಾತನಾಡಬಹುದೆಂದು ಕೊಂಚ ಸಮಯ ತಡೆದಿದ್ದಳು. ನಂತರ ನಡುಗುವ ಧ್ವನಿಯಲ್ಲಿ ಹೇಳಿದಳು. "ನಾನ ಹೋಗ್ತೇನತ್ತೆ, ಎಲ್ಲಿಯಾದರೇನು ."

"ಆಗೋ ಆಕೀನೂ ತಯ್ಯಾರೆ ಇದಾಳೆ" ಎಂದ ಉಮಾಪತಿ.

"ನಾಳೆ ಬೆಳಗ್ಗೆ ಹೋಗಿಬಿಡಿ"

"ಹೂ, ಊಟಮಾಡಿ ಹೊರಟು ಬಿಡೋದೆ" ಎಂದ ಶಿವಮೂರ್ತಿ

ಮಾರನೆಯ ದಿನ ಸ್ನಾನದನಂತರ ಊಟಮಾಡಿಕೊಂಡು ಶಿ ಮೂರ್ತಿ ಮಾಲಿನಿದೇವಿ ಮುದೇನೂರಿಗೆ ಹೊರಟರು. ಅತ್ತೆ ಊ ಹೊರಗಿನವರೆವಿಗೂ ಕಳುಹಿಸಲು ಬಂದಿದ್ದಳು. ಅವರು ಬಸ್ಸು ಹತ್ತು ವಾಗ ಉಮಾಪತಿ "ಯಾವುದಕ್ಕೂ ಕಾಗದ ಹಾಕು, ಶಿವಮೂರ್ತಿ" ಎಂದು ಮಾಲಿನಿಯನ್ನು ನೋಡಿ ಹುಸಿ ನಗೆ ನಕ್ಕ. ಮಾಲಿನಿ ಪ್ರತಿ

ನಗಲು ಸರ್ವಪ್ರಯತ್ನ ಮಾಡಿದಳು. ಆದರೆ ನಗು ಬರಲಿಲ್ಲ.

ಅದೇ ದಿನ ಅವರು ಮುದೇನೂರಿಗೆ ಹೋಗಿ ಸೇರಿಕೊಂಡರು. ಮುದೇನೂರಿನ ಹವಾಗುಣ ಮಾಲಿನಿಗೆ ಹಿಡಿಯಿತಾದರೂ ಆಕೆ ಆ ಎಂಟು ತಿಂಗಳ ಚಳಿ ಜ್ವರದಿಂದ ಬೆಂಡಾಗಿದ್ದಳು. ಪಕ್ಕದಲ್ಲಿಯೇ ತುಂಗಭದ್ರಾ ನದಿ ಪ್ರವಹಿಸುತ್ತಿತ್ತು. ನಾದಿನಿ ಆಕೆಯನ್ನು ಪ್ರೀತಿಯಿಂದಲೇ ಕಾಣು ತ್ತಿದ್ದಳು. ನಾಗಮ್ಮ ಮಾಲಿನಿಯ ಬಯಕೆಗಳನ್ನು ಆಗಾಗ ಕೇಳಿ ತೀರಿಸುತ್ತಿದ್ದಳಾದರೂ ಶಿವಣ್ಣಯ್ಯನವರ ಟೀಕೆ ಮಾಡುವುದನ್ನು ಬಿಡು ತ್ತಿದ್ದಿಲ್ಲ ಅತ್ತೆಯ ಸ್ಥಾನ ಮಗಳಿಗೆ ಸೇರಿತ್ತು. ಹೆಂಡತಿಯ ಟೀಕೆ ಯೊಡನೆ ಶಿವಮೂರ್ತಿಯೂ ಭಾಗವಹಿಸುತ್ತಿದ್ದ.

"ಎಂಥಾ ಕಲ್ಲೆದೆಯ ತಂದೆ! ಮಗಳನ್ನು ನೋಡಲಿಕ್ಕೆ ಬರಲಿಲ್ಲ" ಎಂದಳೊಮ್ಮೆ ನಾಗಮ್ಮ.

"ನಾನಿದ್ದೇನಲ್ಲ ಅವರ ತಂದೆಗೆ ಸಮನಾಗಿ" ಎಂದ ಶಿವಮೂರ್ತಿ.

"ಛೆ! ನೀವು ಅವರಿಗೆ ಹೇಗೆ ಸಮನಾದೀರಿ?"

"ಏಕೆ? ನನಗಿದ್ದವರೆ ತಂದೆತಾಯಿಗಳು. ನೋಡಿದವರೇ ತಂದೆ ತಾಯಿಗಿಂತ ಹೆಚ್ಚು" ಎಂದಳು ಮಾಲಿನಿ.

"ಇಂಥವರು ಬಹಳ ಜನ ಮಾಲಿನಿ. ನಾವು ಸಾವಿರಜನ ನೋಡಿ ದೇವೆ" ಎಂದಳು ನಾಗಮ್ಮ. ತಾನು ಯಾಕಾದರೂ ಇವರ ಮಾತಿನಲ್ಲಿ ಭಾಗವಹಿಸಿದೆನೋ ಎನ್ನಿಸಿತು. ಆ ದಿನ ಅಲ್ಲಿಗೇ ಸುಮ್ಮನಾದಳು. ತನ್ನ ತಂದೆ ಕರೆದುಕೊಂಡು ಹೋಗಿದ್ದರೆ ಇಷ್ಟು ಅನ್ನಿಸಿಕೊಳ್ಳುತ್ತಿದ್ದಿಲ್ಲ. ಎಲ್ಲಿಯೋ ಹುಟ್ಟಿ ಎಲ್ಲಿಯೋ ಇರುವುದು—ಎಲ್ಲಾ ತನ್ನ ಕರ್ಮಗತಿ. ಮೂರುವರ್ಷ ತುಂಬಿ ನಾಲ್ಕರಲ್ಲಿ ಬಿದ್ದರೂ ತೌರುಮನೆಗೆ ಹೋಗುವು ದೊಂದರಲಿ, ಹೆಸರನ್ನೂ ಎತ್ತುವ ಹಾಗಿಲ್ಲ. ಜೈಲಿನಲ್ಲಿ ವೃಥಾ ತನ್ನ ಗಂಡನ ಮನೆಯವರು ಬೇಯಿಸುತ್ತಿದಾರೆ. ಹೆಸರೆತ್ತಿದರೆ ಕಠಿಣ ಶಿಕ್ಷೆ. ಅವಳು ಬಸಿರಿ, ಶಿಕ್ಷಿಸಬಾರದೆಂಬ ಜ್ಞಾನವೂ ಬರಲಿಕ್ಕಿಲ್ಲ–ಎಂದು ಯೋಚಿ ಸುವಳು.

ಶಿವಮೂರ್ತಿಯ ಮನೆಗೆ ಮಾಲಿನಿ ಬಂದು ಹದಿನೈದು ದಿವಸಗಳಾ ಗಿವೆ. ಮಾಲಿನಿಗೆ ಒಂಬತ್ತು ತಿಂಗಳು ತುಂಬುತ್ತಾ ಬಂದಿವೆ. ಚಳಿಜ್ವರ ಹೊಡೆದು ಜೀವವನ್ನು ಹಾಳುಮಾಡಿದೆ. ಚಳಿಜ್ವರದ ಜೊತೆಗೆ ಯೋಚ

ನೆಯ ಗದಾ ಪ್ರಹಾರ. ಜೀವವಿದ್ದರೂ ನಿರ್ಜೀವಿಯಂತೆ ಅವಳು ಕೊರಡಿ ಸೇರಿ ಏನನ್ನೋ ಧ್ಯಾನಿಸುತ್ತಾ ಕುಳಿತುಕೊಳ್ಳುವಳು. ಬಟ್ಟೆಬರೆಗಳನ್ನು ಹಾಕಿಕೊಳ್ಳಬೇಕೆಂಬ ಲಕ್ಷ್ಯೆಯೂ ಇಲ್ಲ ಅಸ್ತವ್ಯಸ್ತ ಉಡಿಗೆಗಳನ್ನು ಸರಿ ಮಾಡಿಕೊಳ್ಳಬೇಕೆಂಬ ಪರಿವೆ ಮೊದಲೇ ಇರಲಿಲ್ಲ

ಒಂದು ದಿನ ಏನನ್ನೋ ಯೋಚಿಸುತ್ತಾ ಮಾಲಿನಿ ಭಾವಪರವಶ ಳಾಗಿ ಕುಳಿತಿದ್ದಳು. ನಾದಿನಿ ನಾಗಮ್ಮ ಊಟಕ್ಕೆ ಕರೆದಳು ಮಾಲಿನಿ ಯೋಚನೆಯಲ್ಲಿ ಮುಳುಗಿದ್ದುದರಿಂದ ಕೇಳಿಸಲಿಲ್ಲ. ನಾಗಮ್ಮ ಮೂರು ನಾಲ್ಕು ಬಾರಿ ಕರೆದರೂ 'ಓ' ಕೊಡಲಿಲ್ಲ

"ಇಂಥ ಬೇವರ್ಸಿಗಳಿಗೆ ಬಹಳ ಸೊಕ್ಕು. ಕಿವಿ ಹೇಗೆ ಕೇಳೀತು" ಎಂದು ಆಕೆ ಆರ್ಭಟಿಸಿದಳು. ಅವಳ ಆರ್ಭಟನೆ ಮಾಲಿನಿಯನ್ನು ಎಚ್ಚ ರಿಸಿತು. ಅವಳ ಕೂಗು ಕರ್ಣಗಳೆರಡರಲ್ಲೂ ಝೇಂಕರಿಸಿತು.

"ನಾನು ಊಟಕ್ಕೆ ಒಲ್ಲೆ" ಎಂದು ಕೊಟ್ಟರಿಸಿ ನುಡಿದಳು ಅವ ಳಿಗೆ ಅನ್ನ ನೀರೂ ಯಾವುದೂ ಬೇಕಾಗಿರಲಿಲ್ಲ.

"ಒಲ್ಲದಿದ್ದರೆ ಬಿಡು. ಯಾರ ಹೊಟ್ಟೆ ಕೆರೀತೈತಿ" ಎಂದು ನಾಗಮ್ಮ ಅಡಿಗೆ ಮನೆಯಿಂದಲೇ ಹೇಳಿದಳು. ಮಾಲಿನಿಯ ಕಣ್ಣುಗಳಿಂದ ಧಾರಾ ಕಾರವಾಗಿ ಕಣ್ಣೀರು ಹರಿಯುತ್ತಿತ್ತು. ಅದೆಷ್ಟು ಹೊತ್ತು ಅತ್ತಳೊ ಅವ ಳಿಗೆ ಸಮಯದರಿವೂ ಗೊತ್ತಾಗಲಿಲ್ಲ ಹೃದಯ ಗಂಭೀರವಾಗಿ ನುಡಿ ಯುತ್ತಿತ್ತು: "ನೀನು ಪರದೇಶಿ, ಪರದೇಶಿ. .." ಎಂದು.

ಹೊಸಳ್ಳಿಯಲ್ಲಿಲ್ಲದಿದ್ದರೂ ಮುದೇನೂರಿನಲ್ಲಿಯಾದರೂ ಸುಖ ಸಿಗಬಹುದೆಂದು ಅರಸಿಕೊಂಡು ಬಂದ ಜೀವಕ್ಕೆ ಅಲ್ಲಿಯೂ ಅದು ಸಿಕ್ಕ ಲಿಲ್ಲ. ಅಂತೂ ಆಕೆ ಕೊನೆಗೆ ಒಂದು ಗಂಡು ಕೂಸನ್ನು ಹೆತ್ತಳು! ತಾನು ಒಂದು ಕೂಸಿನ ತಾಯಿಯಾದಳು. ಮೊದಲೇ ಎಂಟು ತಿಂಗ ಳಿಂದ ಚಳಿಜ್ವರ ಕಾಡುತ್ತಿತ್ತು. ಈಗ ಪ್ರಸವವಾದ ಮೂರನೆಯ ದಿನವೇ ತಲೆಗೆ ನೀರು ಹಾಕಿದರು. ಶೀತ ಅಡರಿತು. ಅವಳ ಪರಿಸ್ಥಿತಿ ವಿಕಾರ ಕ್ಕಿಟ್ಟುಕೊಂಡಿತು. ಆದರೇನು? ತಾನೂ ಒಂದು ಕೂಸಿನ ತಾಯಿಯಾಗಿ ರುವೆನೆಂಬ ಸಂತೋಷ ಆಕೆಗೆ. ಆ ವಿಕಾರದಲ್ಲಿ ಏನೋನೊ ಬಡಬಡಿಕೆ.

"ನನ್ನ ಕೂಸಿಗೆ ಮೊಲೆಯುಣ್ಣಿಸಬೇಕು. ತೆಗೆದುಕೊಂಡು ಬನ್ನಿ" ಎಂದು ಒಮ್ಮೊಮ್ಮೆ ಕೂಗಿದರೆ "ನನ್ನ ಕೂಸನ್ನು ದೂರ ಹಾಕಬೇಡಿ"

ಎಂದು ಒನ್ನೊನ್ನು ಬಡಬಡಿಸುವಳು ಗುರುಮೂರ್ತಿ ಅದೇ ಊರಿನಲ್ಲಿದ್ದ ಆಯುರ್ವೇದ ಪಂಡಿತರೊಬ್ಬರನ್ನು ಕರೆದುಕೊಂಡು ಬಂದು ತೋರಿಸಿದ:

"ಮೂರನೆಯ ದಿನ ನೀರು ಯಾಕೆ ಹಾಕಿದಿರಿ. ಬಹಳ ತಪ್ಪು ಕೆಲಸ ಮಾಡಿದಿರಿ"ಎಂದು ಒಂದು ಕುಪ್ಪುಕಟ್ಟು ಮಾತ್ರೆಯಿಂದ ಔಷಧಕೊಟ್ಟರು. ಜ್ವರ ಸ್ವಲ್ಪ ಕಡಮೆಯಾದಂತಾದರೂ ಆ ಕನವರಿಸುವಿಕೆ ಮಾತ್ರ ಕಡಮೆ ಯಾಗಲಿಲ್ಲ. ಶಿವಮೂರ್ತಿಗೂ ಕೊಂಚ ಕರುಳು ಕತ್ತರಿಸಿತು. ತೌರ. ಮನೆಯ ಜ್ಞಾಪಕ ಮಾಡಿಕೊಂಡು ಹೀಗೆ ಆಡುತ್ತಿದ್ದಾಳೆಂತ ಯೋಚಿಸಿ, "ನಿಮ್ಮಂದೆ ಬಂದಿದಾರೆ ಮಾಲಿನಿ. ಮಾತಾಡು ..ಮಾತಾಡಮ್ಮ" ಎಂದು ಅದು ಮಾಲಿನಿಯ ಮಬ್ಬನ್ನು ಹರಿದು ನೇರವಾಗಿ ಜ್ಞಾನಕ್ಕೆ ಮುಟ್ಟಿತು.

"ಎಲ್ಲಿ ಅಪ್ಪ ಬಂದರೆ! ಚಹಮಾಡಿ ಕುಡಿಸಿ. ಅಪ್ಪಾ ..ಗಂಗ ಕ್ಕನೂ ಬಂದಿರಬೇಕು."

"ತಾಯಿ ಹರಿಹರಕ್ಕೆ ಕಾಗದ ಬರಿದಿದ್ದೇವೆ ನೋಡು" ಎಂದು ಹಳೆಯ ಪತ್ರಿಕೆಯನ್ನು ಹಿಡಿದ. ಮಾಲಿನಿ ವಿಷಾದದ ಧ್ವನಿಯಲ್ಲಿ "ಅವರಿಗೆ ಕಾಗದ ಯಾಕೆ ಬರೆದಿರಿ? ಅವರು ಬರುತ್ತಾರೆಯೇ? .." ಎಂದು ಹೇಳಿದಳು. ಮಾಲಿನಿಯ ಗಂಭೀರ ಪರಿಸ್ಥಿತಿಯ ಬಗ್ಗೆ ಶಿವಮೂರ್ತಿ ಹೊಸಳ್ಳಿಗೊಂದು ಕಾಗದ ಬರೆದು, ಆದಷ್ಟು ಶೀಘ್ರ ಹೊರಟು ಬರ ಬೇಕೆಂದು ತಿಳಿಸಿದ್ದ.

ನಿತ್ಯ ಪಂಡಿತರು ಬಂದು ಔಷಧೋಪಚಾರ ನಡೆಸುತ್ತಿದ್ದರು. ಆ ಬಡಬಡಿಕೆ ಈಗ ಕಡಿಮೆಯಾಗಿದ್ದರೂ ಜ್ವರ ಇಳಿಯಲಿಲ್ಲ. ಗಂಡನ ಮನೆಯವರೂ ಸಹ ಬರಲಿಲ್ಲ ಮಾಲಿನಿ ಗಂಡನ ಮನೆ ಬಿಟ್ಟು ಬಂದಿದ್ದು ಅವರ ಮನೆಯ ಶನಿ ಹೋದಂತಾಗಿತ್ತು. ಏನೂ ಹೆಚ್ಚಿನ ಕೆಲಸ ಮಾಡ ಲಾರಳೆಂದು ಅವರತ್ತೆಯ ದೂರು. "ಪ್ಯಾಟಿ ಹೊಯ್ಗಾಲಿನ ಹೆಂಗಸರೇ ಇಷ್ಟು" ಎಂದು ಎಲ್ಲರ ಮುಂದೆ ಟೀಕೆ ಟಿಪ್ಪಣಿಗಳು. ಕಾಗದ ಮುಟ್ಟಿದ ಕೂಡಲೆ ಗಂಡು ಕೂಸಾಗಿರುವ ಸುದ್ದಿಯನ್ನು ತಿಳಿದು ಉಮಾಪತಿ ಹೊರಡಲು ತವಕಪಟ್ಟ. ಆದರೆ ಸಿದ್ದಮ್ಮ ಅದಕ್ಕೆ ವುಟಗೊಡಲಿಲ್ಲ.

ಇತ್ತ ಮಾಲಿನಿಯ ಕಾಯಿಲೆ ಉತ್ತಮಗೊಂಡಿದ್ದರೂ ಸಹ ಅವಳ ಹೇಳಲಾರದ ತೀರಲಾರದ ಯೋಚನೆ ಯಾವ ಪಂಡಿತರಿಂದಲೂ ವಾಸಿ ಯಾಗುವಂತಿದ್ದಿಲ್ಲ. ತಾನು ಚಿಕ್ಕವಳಾಗಿದ್ದಾಗ ರೇಣುಕ ಪ್ರಸಾದ

ನೊಂದಿಗೆ ಗೊಂಬೆಯಾಟವಾಡುತ್ತಿದ್ದುದೂ, ತನ್ನ ತಂಗಿಯ ಮಗುವೆಂದು ಹೇಳಿಸಿಕೊಳ್ಳುವ ಗೊಂಬೆಗೆ ಅವಸು ಅಕ್ಕರೆಯಿಂದ ಮುತ್ತಿಡುತ್ತಿದ್ದುದೂ ನೆನಪಿಗೆ ಬಂದು ಹೃದಯವನ್ನು ಹಿಂಡುತ್ತಿತ್ತು. ವಾಸ್ತವವಾಗಿ ತಾನು ಗಂಡು ಕೂಸನ್ನು ಪಡೆದಿದ್ದರೂ ಆತ ನೋಡಿ ಮುದ್ದಿಡುವಂತಿಲ್ಲ. ಅದರಲ್ಲೂ ತೌರುಮನೆಯ ವಿಷಯವನ್ನು ಕನಸಿನಲ್ಲಿಯೂ ಎತ್ತುವಂತಿಲ್ಲ. ಆದರೆ ಇತ್ತೀಚಿಗೆ ಅವಳ ಮನಸ್ಸು ಅಚಲವಾಗಿದೆ. ಅವಳ ಹೃದಯ ವಿರಾಗಿಯಾಗಿ ಪರಿಣಮಿಸಿದೆ. ಅತ್ತೂ ಅತ್ತೂ ಕಣ್ಣೀರುಬತ್ತಿದೆ. ಬಿಸಿಯಾದ ಉಸಿರಿಗೆ ಏನೂ ಕಡಮೆಯಿಲ್ಲ.

ತಾನು ಕೂಸೊಂದನ್ನು ಹೆತ್ತಿದ್ದರೂ ಗಂಡನ ಮನೆಯವರಿಗೆ ನೋಡುವ ಅಭೀಷ್ಟವಿಲ್ಲ. ತಾನು ಯಾರಿಗೂ ಬೇಡವಾಗಿದ್ದಾಳೆ. ತಾನು ಪರದೇಶಿ ನಿಜಕ್ಕೂ—ಎಂದುಕೊಂಡಳು. ಆಕೆ ಸತತವಾಗಿ ಈಗೆರಡು ಮೂರು ತಿಂಗಳಿಂದ ಕಾಯಿಲೆಗೆ ಸಿಕ್ಕು ಒಣಗಿದ್ದರೂ ಅಂದು ಅದೇಕೋ ಕಳೆಯಿಂದ ಮುಖ ವಿಕಸಿತವಾಗಿತ್ತು ಮನಸ್ಸಿನಾಳದಲ್ಲಿ ಯಾವುದೋ ಒಂದು ದೃಥ ನಿರ್ಧಾರ ಮನೆ ಮಾಡಿಕೊಂಡಿತ್ತು. ಆಗಾಗ ತನ್ನಷ್ಟಕ್ಕೆ ತಾನು ಅವಡುಗಚ್ಚಿ ಏನೇನೋ ಬಾಯಿಗೆ ಬಂದದ್ದನ್ನು ನುಡಿಯುತ್ತಿದ್ದಳು.

ಆದಿನ ಸಾಯಂಕಾಲ ಧೂಳೂ ಗಾಳಿ ಊರಿನಲ್ಲೆಲ್ಲಾ ತುಂಬಿಕೊಂಡು ಹೊಗೆಯಂತೆ ದೃಷ್ಟಿಯನ್ನು ಮಂದಮಾಡಿತ್ತು. 'ಮಳೆ ಬಂತು' ಎನ್ನುತ್ತಿದ್ದಂತೆಯೇ 'ಮಳೆ ಹೋಯಿತು' ಎಂದರು. ಎಂದೂ ಈ ಮೂರು ತಿಂಗಳಿಂದ ಉಣ್ಣದಷ್ಟನ್ನು ಆದಿನ ಆಕೆ ಊಟಮಾಡಿದಳು. ಮಾಲಿನಿಯ ಮುಖ ಯಾವಾಗಲೂ ಇಲ್ಲದ ಕಳೆಯಿಂದೊಡಗೂಡಿತ್ತು. ಆದಿನ ನಾಗಮ್ಮನ ಕಟುಮಾತುಗಳಿಗೂ ಲಕ್ಷ್ಯಕೊಡದೆ ಪ್ರೇಮದಿಂದ ಮಾತನಾಡಿಸಿದಳು. ಮಗುವಿಗೂ ಅನೇಕ ಬಾರಿ ಮುದ್ದಿಟ್ಟು ಪ್ರೇಮದ ಒಂದೆರಡು ಮಾತುಗಳನ್ನಾಡಿದಳು. ಶಿವಮೂರ್ತಿಯೊಂದಿಗೂ ಒಂದೆರಡು ಪ್ರಿಯಮಾತುಗಳನ್ನಾಡಿ ಮಲಗಿದಳು. ಹೊರಗಡೆ ಇನ್ನೂ ಮಳೆ ಬರುವ ಲಕ್ಷಣವಿತ್ತು.

ರಾತ್ರಿ ಸುಮಾರು ಹನ್ನೆರಡು ಘಂಟೆ ಕಳೆದು ಇಪ್ಪತ್ತು ನಿಮಿಷಗಳಾಗಿರಬಹುದು. ಮಾಲಿನಿಗೆ ನಿದ್ದೆಯೂ ಇರಲಿಲ್ಲ; ದುಃಖವೂ ಇರ

ಲಿಲ್ಲ. ಪ್ರಯತ್ನಪೂರ್ವಕವಾಗಿ ಅಳಲನ್ನು ತಂದುಕೊಂಡರೆ ಮಾತ್ರ ಒಂದೆ ರಡು ಅಶ್ರುಗಳು ಹೊರಬರುತ್ತಿದ್ದವು. ಪಕ್ಕದಲ್ಲಿ ಮಗು ಮಲಗಿತ್ತು. ಶಬ್ದ ವಾಗದ ಹಾಗೆ ಎದ್ದು ದೀಪದ ಕುಡಿಯನ್ನೇರಿಸಿ ಅವಿರಾಗ ದೃಷ್ಟಿಯಲ್ಲಿ ಮಗುವನ್ನೊಮ್ಮೆ ನಾನು ಹೋಗುವೆನೆಂಬ ದೃಷ್ಟಿಯಲ್ಲಿ ನೋಡಿದಳು. ಆ ಹೃಷ್ಟಪುಷ್ಟ ವ್ಯೈಕೈಗಳಿಂದ, ದುಂಡಾದ ಮುಖವನ್ನು ಹೊಂದಿದ್ದ ಕೂಸು "ಬೇಡಬೇಡಮ್ಮ, ನೀನು ಹೋಗುವುದಾದರೆ ನಾನೂ ಬರುತ್ತೇನೆ" ಎಂದ ಹಾಗಾಯಿತು. "ನಾನು ಬಾಳನ್ನೆದುರಿಸಲಾರೆ, ಮಗು. ಜೀವಕ್ಕಿಂತ ಸಾವೇ ಲೇಸು. ಇನ್ನು ನಾನು ಬಾಳಲು ಅನರ್ಹಳು ಬೇವಾರ್ಸಿ ನಾನು. ದೇವರು ನಿನ್ನನ್ನು ಆಶೀರ್ವದಿಸಲಿ" ಎಂದು ಮನಸ್ಸಿನಲ್ಲಿ ಹೇಳಿ ಹಿತ್ತಿಲ ಬಾಗಿಲಿನಿಂದ ಆ ಅಂಧಕಾರದಲ್ಲಿ ಹೊರಬಿದ್ದಳು. ಈಗ ಅವಳಿಗೆ ವ್ಯಕ್ತಿ ಸ್ವಾತಂತ್ರ್ಯಬಂದಿತ್ತು! ತೌರುಮನೆಗೆ ಹೋಗದಿದ್ದರೂ ಸರಿಯೆ. ಅಲ್ಲಿರುವ ಬಂಧುಗಳ ಹೆಸರನ್ನು ಸಂತೃಪ್ತಿಯಾಗುವಂತೆ ಉಚ್ಚರಿಸಬಹುದು.

"ಅಣ್ಣ! ಸಣ್ಣಣ್ಣ ..ನಾನು ಹೋಗುತ್ತೇನೆ. ನಮ್ಮಿಬ್ಬರ ವಯಸ್ಸಿನಲ್ಲಿ ಅಂತಹ ತಾರತಮ್ಯವಿದೆ. ಇಬ್ಬರೂ ಕೂಡಿ ಆಡಿ ಬೆಳೆದೆವು. ಆಗೊಮ್ಮೆ ಹೊದಿಕೆಯನ್ನೇ ಕಟ್ಟಿ, ಆ ಹೊದಿಕೆಯ ಗುಡಿಸಲಿನಲ್ಲಿ ಆಡುತ್ತಿದ್ದೆವು. ಈಗ ಒಬ್ಬರ ಮುಖವನ್ನು ಒಬ್ಬರು ನೋಡುವಂತಿಲ್ಲ ...ಒಟ್ಟಿನಲ್ಲಿ ನಾನು ದುರ್ಭಾಗ್ಯಳು!" ಎಂದು ಮತ್ತೆ ತಡವರಿಸುತ್ತ ಹೊರಟಿದ್ದಳು. ಎಲ್ಲೆಲ್ಲೂ ಗಾಢಾಂಧಕಾರ. ದೂರದಲ್ಲಿ ತುಂಗಭದ್ರೆಯ ಕಲಕಲನಿನಾದ. ಭೋರ್ಗರೆಯುತ್ತ ಕರೆಯುತ್ತಿದ್ದಳು: "ಬಾ ತಾಯಿ, ಸುಖ ಶಾಂತಿಗಳ ಬೀಡಿಗೆ. ನಿನ್ನ ತೌರುಮನೆಯ ದಾರಿಯೂ ಸಹ ಇದೆ. ಇಲ್ಲಿ ಅಮರ ಶಾಂತಿ ನೆಲೆಗೊಂಡಿದೆ. ನಿನಗೆ ಸುಸ್ವಾಗತ" ಎಂದು ಕೈ ಬೀಸಿ ಕರೆಯುತ್ತಿದ್ದಳು. ಆಗಾಗ ಗುಡುಗು ಗುಡುಗುಟ್ಟಿಸುತ್ತಿತ್ತು. ದಟ್ಟವಾದ ಮೋಡಗಳ ಸಂದಣಿ ಮಳೆಯ ಲಕ್ಷಣ ತೋರಿಸುತ್ತಿತ್ತು. ಆ ನಿಶೆಯಲ್ಲಿ ಕಲ್ಲುಗಳನ್ನು ಎಡವುತ್ತಿದ್ದಳು. ವಿರಹೋಚ್ಛ್ವಾಸ ವೇಗವೇಗವಾಗಿ ಹೊರ ಬರುತ್ತಿತ್ತು. ನನ್ನ ರಾವು ಮುಟ್ಟುವವರೆವಿಗಾದರೂ ಕೊಂಚ ಬೆಳಕನ್ನಾದರೂ ನೀಡಬಾರದೆ—ಎಂದು ದೇವರಲ್ಲಿ ಮೊರೆಯಿಟ್ಟಳು. ಕಂಕಾಳನ್ಯಾಯದಂತೆ ಮಿಂಚು ಮಿಂಚಿತು. 'ಟಾರ್ಚ್' ನಂತೆ ಬೆಳಕನ್ನು ಕೊಡುತ್ತಿರುವ ದೇವದೇವನಿಗೆ ಆಕೆ ಧನ್ಯವಾದಗಳನ್ನರ್ಪಿಸಿದಳು. ತನ್ನ ಇಡಿಯ

ಜೀವನವನ್ನೊಮ್ಮೆ ನೆನೆದಳು. ತನ್ನ ಜೀವನವೆಲ್ಲಾ ಕಲ್ಲು ಮುಳ್ಳುಗಳ ಒಗ್ಗಾಲಿಯ ದಾರಿ. ಅದರಲ್ಲಿ ಬೃಂದಾವನದ ತುಣುಕೂ ಇಲ್ಲವೆಂದರಿವಾಯಿತು. ಮಿಂಚಿನಲ್ಲಿ ಆಗಸವನ್ನೊಮ್ಮೆ ನೋಡಿದಳು. ಮೇಘಮಾಲೆ ಕಣ್ಣೀರಿಡುವಂತೆ ಭಾಸವಾಯಿತು. "ಗಂಗಕ್ಕಾ...ಸಣ್ಣಣ್ಣ ...ದೊಡ್ಡಣ್ಣ. ಅಪ್ಪ" ಎಂದು ಸಾಕಾಗುವವರೆವಿಗೂ ಅರಚಿಕೊಂಡಳು. ಈಗ ಮಾಲಿನಿ ಪೂರ್ಣ ಸ್ವತಂತ್ರಳು.

ಅಲೌಕಿಕಾನಂದವನ್ನೀಯುವ ಕುಳಿರ್ಗಾಳಿ ಬೀಸುತ್ತಿತ್ತು. ಪ್ರಕೃತಿಯ ಉಪಾಸಕಳಂತೆ ಚಾರುಚಿತ್ತೇರನ ಗುಣಗಾನ ಮಾಡಿದಳು: "ಈ ರಮ್ಯಮನೋಹರ ಪ್ರಪಂಚವನ್ನು ಯಾರು ಸೃಜಿಸಿರಬಹುದು" ತುಂಗಭದ್ರಾ ನದಿ ನಿರಂತರವಾಗಿ ಹರಿಯುತ್ತಿದ್ದಳು. ದಂಡೆಯ ಬಳಿ ಆಕೆ ಸಜಲ ನೇತ್ರದಿಂದ ಬಂದು ನಿಂತುಕೊಂಡಳು. ಅವಳ ಮನಸ್ಸು ವಿರಹಾಕುಲವಾಗಿದ್ದರೂ ಭವಿಷ್ಯತ್ತಿನಲ್ಲಿ ಸುಖಶಾಂತಿಗಳು ಆತ್ಮಕ್ಕಾದರೂ ಲಭ್ಯವಾಗಬಹುದೆಂಬ ದೂರದ ಆಸೆಯನ್ನಿಟ್ಟುಕೊಂಡಿದ್ದಳು. ತುಂಗಭದ್ರೆ ಪುನಃ ಕರೆದಳು—

"ಸುಖಶಾಂತಿ ಸಮನ್ವಿತ ನಿಕೇತನಕ್ಕೆ ಸುಸ್ವಾಗತ ಉಂಟು. ನಿನ್ನ ಮೂರು ದಿನದ ಸಂತೆ ಮುಗಿಯಿತು ಹೊರಡಿನ್ನು ಹೊರಡು!...."

ಹೌದು. ತಾಪತಪ್ತ ಜೀವಕ್ಕೆ ಸುಖ ಸಮೃದ್ಧಿಯ ಠಾವು ಬೇಕಾಗಿತ್ತು. ಅವಳ ಜೀವಪಕ್ಷಿ 'ತ್ರಾಹಿತ್ರಾಹಿ' ಎಂದು ಕೂಗುತ್ತಿತ್ತು. ಎಲ್ಲರೂ ನೇರವಾಗಿ ಮನೆಯಲ್ಲಿ ಪ್ರವೇಶಿಸುವಂತೆ ಆಕೆ ನದಿಯನ್ನು ಪ್ರವೇಶಿಸಿದಳು. ತುಂಗಭದ್ರೆ ಬಾಳ ಮೂಸೆಯಲ್ಲಿ ಬೆಂದು ಬಡಕಲಾಗಿದ್ದ ದೇಹವನ್ನು ಕೈ ಹಿಡಿದು ಎತ್ತಿಕೊಂಡು ಹೊರಟಳು. ಮಾಲಿನಿಗೆ ಎಂತಹ ಸುಖ ಸ್ಪರ್ಶವಾಯಿತೊ! ದೂರ—ಬಹುದೂರ ಹೊರಟಳು.

ರಾತ್ರಿಯೆಲ್ಲಾ ಅಲ್ಲಲ್ಲಿ ನಿಂತಿದ್ದು ಮೀನುಗಳಿಂದ ಕಚ್ಚಿಸಿಕೊಂಡು ಮತ್ತೆ ಅವಳ ಶವ ಪಯಣ ಬೆಳೆಸಿತು. ಆತ್ಮಕ್ಕೆ ಅಮರಶಾಂತಿ ದೊರಕಿದ್ದರೂ ಭೌತಿಕ ದೇಹಕ್ಕೆ ಇನ್ನೂ ಅಶಾಂತಿಯೇ ಅದರ ಪಾಲಿಗಿತ್ತು. ಅಂಗತ್ತವಾಗಿ ಅವಳ ಶವ ತೇಲುತ್ತಾ ಹೊರಟಿತ್ತು. ಈಗವಳಿಗೆ ಅನಂತ ಶಾಂತಿ ಲಭಿಸಿತ್ತು. ಯಾರ ಹಂಗಿನಲ್ಲಿಯೂ ಅವಳಾತ್ಮವಿರಲಿಲ್ಲ. ಕೂದಲುಗಳು ನೀರಿನಲ್ಲಿ ತೇಲುತ್ತಿದ್ದವು.

ಹೌದು; ಈಗ ಮಾಲಿನಿ ಪಂಚಮಿಯ ಹಬ್ಬಕ್ಕೆ ತೌರುಮನೆಗೆ ಬರುತ್ತಿದ್ದಾಳೆ. ಅವಳಿಗೆ ರೈಲುಮಾರ್ಗ ದೂರವಿದ್ದುದರಿಂದ ತನ್ನದೇ ಆದ ದಾರಿಯಲ್ಲಿ 'ದಕ್ಷಿಣಕಾಶಿ'ಗೆ ಬರುತ್ತಿದ್ದಾಳೆ. ಮಾಲಿನಿಯ ತಂದೆಯವರೂ ಅವಳ ನಿರೀಕ್ಷಣೆಯಲ್ಲಿದ್ದಾರೆ ಮನೆಯವರಿಗೆ ಕೊನೆಯ ಭೆಟ್ಟಿ ಕೊಡಲು ಬಂದೇ ಬಿಟ್ಟಳು. ಹರಿಹರದ ಘಟ್ಟದ ಬಳಿ ಶವ ಬಂದ ಕೂಡಲೆ ಯಾರೊ ಹಿಡಿದು, ಇದು ನಿನ್ನ ತೌರುಮನೆಯೆಂದು ಹೇಳಿ ಎಚ್ಚರಿಸಿದರು. ಸ್ನಾನಕ್ಕೆಂದು ಬಂದಿದ್ದ ಶಿವಣ್ಣಯ್ಯನವರು ಮಗಳ ಶವವನ್ನು ನೋಡಿ ಮೂರ್ಛೆ ಹೋಗಿ ಬಿದ್ದರು! ಅವಳು ಮುದೇನೂರಿಗೆ ಪ್ರಸವ ಕಾಲಕ್ಕೆ ಬಂದಿದ್ದಾಳೆಂದು ಮಾತ್ರ ಅವರಿಗೆ ಗೊತ್ತಿತ್ತು.

ಮನೆಯವರಿಗೂ ಈ ವಿಷಯ ತಿಳಿಯಿತು. ರಾಮತೀರ್ಥದ ಪಾಠಶಾಲೆಗೆ ಹೋಗಿದ್ದ ರೇಣುಕ ಪ್ರಸಾದನೂ ತಂಗಿಯನ್ನು ನೋಡಲು ಬಂದ. ಜೀವನದಲ್ಲಿ ಒಮ್ಮೆಯಾದರೂ ಆಕೆಯನ್ನು ನೋಡಬೇಕೆಂಬ ಆಸೆಯಿಂದು ಫಲಿಸಿತು. ಎಲ್ಲರೊಡನೆ ಮಿಲನಮಾಡಲು ತಂಗಿ ಬಂದಿದ್ದಾಳೆ! ಮಗಳನ್ನು ಕಣ್ತುಂಬ ನೋಡಬೇಕೆಂಡ ತಂದೆಯ ಆಸೆ ಫಲಿಸಿತು. ಮೂರ್ಛೆ ತಿಳಿದು, ಅವರು ಮಗಳನ್ನು ಕಣ್ತುಂಬ ನೋಡಿದರು. ಗೋಳಿಟ್ಟರು. ಹೊಸಳ್ಳಿಯಿಂದ ಯಾರೂ ಈ 'ಬೇವರ್ಸಿ'ಯ ಅಂತ್ಯ ಸಂಸ್ಕಾರಕ್ಕೆ ಬರಲಿಲ್ಲ ಮುದೇನೂರು ಶಿವಮೂರ್ತಿ ನಿರ್ವಾಹವಿಲ್ಲದೆ ಬಂದು ಪೋಲಿಸ್ ಖಾತೆಯವರ 'ಪೋಸ್ಟ್ ಮಾರ್ಟಮ್' ಆದನಂತರ ಶವದಮೇಲೆ ಒಂದು ಹಿಡಿ ಮಣ್ಣುಹಾಕಿ ಹೇಳದೆ ಕೇಳದೆ ಕಾಲಿಗೆ ಬುದ್ಧಿ ಹೇಳಿದ.

ಗಂಗಮ್ಮ ಕಣ್ಣು ಕೆಂಪಾಗಿ ಕೆಡುವವರೆವಿಗೂ ಅತ್ತು, ಒಂದು ಗಳುವಿನಂತಿದ್ದ ದೇಹವನ್ನು ಮಣ್ಣಿನಲ್ಲಿಟ್ಟಿದ್ದಳು ಮನೆಯವರೆಲ್ಲರೂ ತಮ್ಮ ಕೊನೆಯ ಆಸೆಯನ್ನು ಪೂರೈಸಿಕೊಂಡು ಸಂತೃಪ್ತರಾದರು. ಎಲ್ಲರೂ ಒಂದು ದಿನ ಹೋಗುವ ಮನೆಗೆ ತಂಗಿಯನ್ನು ರೇಣುಕ ಬೀಳ್ಕೊಟ್ಟು ಬಂದಿದ್ದನು. ಈಗವನಿಗೆ ಸಂತೋಷ. ಆ ಸಂತೋಷದ ಸಿಹಿಯ ಪ್ರಮಾಣ ಜಗನ್ನಿಯಂತ್ರನಿಗೆ ಮಾತ್ರ ಗೊತ್ತಿತ್ತು. ಸ್ನಾನ ಮಾಡಿ ದಂಡೆಯ ಮೇಲೆ ನಿಂತುಕೊಂಡು, ಉಟ್ಟಪಂಚೆಯನ್ನು ಗಾಳಿಯಲ್ಲಿ ಹರಿಬಿಟ್ಟು ಆರಿಸಲು ನಿಂತುಕೊಂಡ. ತುಂಗಭದ್ರೆ ಮಾತ್ರ ಏನೂ

ಅರಿಯದ ಹೆಂಗಳೆಯಂತೆ ಹೋಗುತ್ತಿದ್ದಳು. ನನ್ನ ಕರ್ತವ್ಯ ಪೂರೈಸಿದೆ ಎಂದು ಉತ್ತರಾಭಿಮುಖವಾಗಿ ಹೊರಟಿದ್ದಳು. ತಂಗಾಳಿಯೂ ಉತ್ತರಾಭಿಮುಖವಾಗಿ ಬೀಸುತ್ತಿತ್ತು. ರೇಣುಕಪ್ರಸಾದನ ಕಣ್ಣುಗಳು ತೇವವಾದುವು. ಗಾಳಿಯಲ್ಲಿ ಪಂಚೆ ಪಟಪಟನೆ ಹಾರಾಡುತ್ತಿತ್ತು. ಅದರ ಎರಡೂ ತುದಿಯನ್ನು ಹಿಡಿದುಕೊಂಡಿದ್ದ. ಮನೆಯವರೆಲ್ಲರೂ ಪಕ್ಕದಲ್ಲಿ ಸ್ನಾನ ಮಾಡುತ್ತಿದ್ದರು. ರೇಣುಕಪ್ರಸಾದನ ಕಣ್ಣುಗಳಿಂದ ಕಣ್ಣೀರು ತನ್ನದೇ ಆದ ವೇಗದಲ್ಲಿ ಪುಟಗೊಟ್ಟು, ಹೊರಗೆ ಬಂದು, ಮುಂದೆ ಹರಿದು ಹೋಗುತ್ತಿತ್ತು. ಆ ಉದ್ವೇಗವನ್ನು ತಡೆಯಲಾರದೆ ಕವಿ ಜಿ.ಎಸ್. ಶಿವರುದ್ರಪ್ಪನವರ 'ಕಣ್ಣೀರು' ಭಾವಗೀತೆಯನ್ನು ಮೆಲುಕಾಡಿಸಿದ.

ಕಣ್ಣೀರ ಹನಿಯಲ್ಲಿ ಮೊಗದ ನಗೆಯನು ಕಂಡೆ
ಕಣ್ಣೀರ ಹನಿಯಲ್ಲಿ ಜಗದ ಹೃದಯವ ಕಂಡೆ
ಕಣ್ಣೀರಿನಲಿ ವಿವಿಧ ಅನುಭವದ ಸವಿಯುಂಡೆ
    ಕಣ್ಣೀರಿಗಿಂ ಮಿಗಿಲು ತತ್ವಬೋಧಕರಿಲ್ಲ
    ಮುನ್ನೀರು ಎಂಬುದೂ ಕಣ್ಣೀರೆ ಎಲ್ಲ!
ಕಣ್ಣೀರ ಹೊಳೆಯಲ್ಲಿ ರಾಜ್ಯಗಳು ಉದಿಸಿದವು
ಕಣ್ಣೀರ ಹೊಳೆಯಲ್ಲಿ ಮಕುಟಗಳು ತೇಲಿದವು
ಕಣ್ಣೀರಿನಲಿ ಕಾಲದೇಶಗಳು ಕರಗುವುವು;
    ವಿಶ್ವದಲಿ ತೇಲುವೀ ಬ್ರಹ್ಮಾಂಡಗಳು ಎಲ್ಲ
    ಕಣ್ಣೀರಿನುಂಡೆಗಳೋ, ಬಲ್ಲವನೆ ಬಲ್ಲ!

'ಕಣ್ಣೀರು' ಭಾವಗೀತೆಯೂ ಕೂಡ ಅಲೆಅಲೆಯಾಗಿ ಉತ್ತರಾಭಿಮುಖವಾಗಿ ಹೋಗುತ್ತಿತ್ತು. ತುಂಗಭದ್ರೆ ತನ್ನದೇ ಆದ ವೈಶಿಷ್ಟ್ಯದಿಂದ ಗಂಭೀರವಾಗಿ ಪ್ರವಹಿಸುತ್ತಿದ್ದಳು. ಪುನಃ ಅವನ ನೆನಪಿಗೆ ಬಂತು: 'ಜೀವನ ಹೂವಿನ ಹಾಸಿಗೆಯಲ್ಲ, ಮುಳ್ಳಿನ ಹಾಸಿಗೆ ಎಂಬ ಅನುಭವದ ನುಡಿ.

---